# ಕನ್ನಡ ಭಾಷಾಭ್ಯಾಸಂಗ

ಡಾ. ಸಂಗಮೇಶ ಸವದತ್ತಿಮಠ

ಐದನೆಯ
ಆವೃತ್ತಿ

ರೂಪರಶ್ಮಿ ಪ್ರಕಾಶನ, ಕಲಬುರ್ಗಿ

# ಕನ್ನಡ ಭಾಷಾವ್ಯಾಸಂಗ

※

ಡಾ. ಸಂಗಮೇಶ ಸವದತ್ತಿಮಠ

※

ರೂಪರಶ್ಮಿ ಪ್ರಕಾಶನ, ಕಲಬುರ್ಗಿ.

'KANNADA BHASHA VYASANGA'- A Comparative Study of Kannada Grammar by Dr. Sangamesh D. Savadattimath, M.A., ph.D. Institute of Kannada Studies, Gulbarga University, Gulbarga & Published by Smt. Shakuntala Savadattimath, Ruparashmi Publications, 'CHINMAYA' Saraswatipura Jnana Ganga, Gulbarga-585 106

Page : 246 + xii

Price : Rs. 40-00  Rs. 75-00 Library Copy

First Edition (ಪ್ರಥಮ ಆವೃತ್ತಿ) 1979 Nov.
Second Edition (ದ್ವಿತೀಯ ಆವೃತ್ತಿ) 1985 Oct.
Third Edition (ತೃತೀಯ ಆವೃತ್ತಿ) 1986 March
Fourth Edition (ಚತುರ್ಥ ಆವೃತ್ತಿ) 1990 Oct.
Fifth Edition (ಪಂಚಮ ಆವೃತ್ತಿ) 1993 Nov.



ಬೆಲೆ : ರೂ. ೪೦-೦೦ (ಸಾದಾಪ್ರತಿ)
ರೂ. ೭೫-೦೦ (ಉತ್ತಮ ಪ್ರತಿ)

ಪ್ರಕಾಶಕರು :

**ಶ್ರೀಮತಿ ಶಕುಂತಲಾ ಸವದತ್ತಿಮಠ**
ರೂಪರಶ್ಮಿ ಪ್ರಕಾಶನ,
ಸರಸ್ವತಿಪುರ, 'ಚಿನ್ಮಯ' ಜ್ಞಾನಗಂಗಾ
ಗುಲಬರ್ಗಾ-೫೮೫ ೧೦೬

ಅಧಿಕೃತ ಮಾರಾಟಗಾರು
**ಸಮಾಜ ಪುಸ್ತಕಾಲಯ**
ಪ್ರಕಾಶಕರು ಹಾಗೂ ಪುಸ್ತಕ ವ್ಯಾಪಾರಿಗಳು
ಶಿವಾಜಿ ಬೀದಿ ಧಾರವಾಡ-ಕೊಪ್ಪಿಕರ ರಸ್ತೆ, ಹುಬ್ಬಳ್ಳಿ.

# ಕೃತಜ್ಞತೆಗಳು

'ಕನ್ನಡ ಭಾಷಾಭ್ಯಾಸಂಗ' ಗ್ರಂಥದ ಐದನೆಯ ಆವೃತ್ತಿಯ
ಮುದ್ರಣ ಕಾರ್ಯಕ್ಕೆ ಧನಸಹಾಯವನ್ನು ನೀಡಿದ
ಸ್ಟೇಟಬ್ಯಾಂಕ ಆಫ್ ಹೈದ್ರಾಬಾದ
( ಗುಲಬರ್ಗಾ ವಿಶ್ವವಿದ್ಯಾಲಯ ಶಾಖೆ )
ಬ್ಯಾಂಕಿನ ಅಧಿಕಾರಿ ವರ್ಗದವರಿಗೆ–
ಕೃತಜ್ಞತೆಗಳು

–ಲೇಖಕ

# ನಿವೇದನೆ

## ( ಪ್ರಥಮಾವೃತ್ತಿಗೆ )

ನನ್ನ 'ದ್ರಾವಿಡ ಭಾಷಾವ್ಯಾಸಂಗ' ಗ್ರಂಥಕ್ಕೆ ಸಿಕ್ಕ ಪ್ರೋತ್ಸಾಹ 'ಕನ್ನಡ ಭಾಷಾವ್ಯಾಸಂಗ' ಬರೆಯಲು ಮುಖ್ಯ ಪ್ರೇರಣೆಯಾಯಿತು. ಕಳೆದ ಏಳು ವರ್ಷಗಳಿಂದ ಎಂ. ಎ. ವಿದ್ಯಾರ್ಥಿಗಳಿಗೆ ತೌಲನಿಕ ಕನ್ನಡ ವ್ಯಾಕರಣವನ್ನು ಬೋಧಿಸುತ್ತಿರುವ ನಾನು, ಆಧುನಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ವಿವರಿಸಲ್ಪಟ್ಟಿರುವ ಶಿಷ್ಟ ಕನ್ನಡ ವ್ಯಾಕರಣವೊಂದು ವಿದ್ವಾಂಸರಿಂದ ಕನ್ನಡದಲ್ಲಿ ಬಂದೀತೆಂದು ಕಾಯುತ್ತಲೇ ಇದ್ದೆ. ಈ ಮಧ್ಯ ಶುದ್ಧ ಆಧುನಿಕ ಭಾಷಾವಿಜ್ಞಾನದ ತತ್ವಗಳನ್ನುಸರಿಸಿ ಬೇರೆ ಬೇರೆ ಭಾಗದ ಕನ್ನಡದ ಆಡುನುಡಿಯ ವಿವರಣೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಹಲವು ಲೇಖನಗಳು, ಗ್ರಂಥಗಳು ಇಂಗ್ಲೀಷ ಹಾಗೂ ಕನ್ನಡದಲ್ಲಿ ಪ್ರಕಟವಾದವು. ಪರಂಪರಾಗತ ವ್ಯಾಕರಣ ವಿಚಾರಗಳನ್ನೇ ಚರ್ವಿತಚರ್ವಣಗೊಳಿಸುವ ಪುಸ್ತಕಗಳು ಕೆಲವು ಬಂದವು. ಶಬ್ದಮಣಿದರ್ಪಣವನ್ನು ಆಧುನಿಕ ರೀತಿಯಲ್ಲಿ ವಿಶ್ಲೇಷಿಸುವ ಪ್ರಯತ್ನಗಳೆಲ್ಲ ಹೆಚ್ಚಾಗಿ ಇಂಗ್ಲೀಷನಲ್ಲಿಯೇ ಬಂದವು. ಕನ್ನಡದಲ್ಲಿ ಪ್ರಕಟಗೊಂಡಂಥವು—ಬಿಡಿ ವಿಚಾರ ಇಲ್ಲವೆ ಪ್ರಕರಣಗಳು ಮಾತ್ರ.

ವ್ಯಾಕರಣವನ್ನು ಕಲಿಯುವವರಿಗೆ ಹಾಗೂ ಕಲಿಸುವವರಿಗೆ ಇಂದು ಆಧುನಿಕ ಭಾಷಾವಿಜ್ಞಾನದ ಅರಿವು ಅವಶ್ಯವಾಗಿದೆ. ಆಧುನಿಕ ಭಾಷಾವಿಜ್ಞಾನದ ತತ್ವಗಳ ಹಿನ್ನಲೆಯಲ್ಲಿ ಕನ್ನಡ ವ್ಯಾಕರಣವನ್ನು ಹೆಚ್ಚು ಸುಲಭವಾಗಿ ಕಲಿಯಬಹುದು, ಕಲಿಸಬಹುದು. ಕನ್ನಡದ ಪ್ರಾಚೀನ ವ್ಯಾಕರಣಗಳಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಆಧುನಿಕ ಭಾಷಾವಿಜ್ಞಾನದೊಡನೆ ಅನ್ವಯಿಕವಾಗಿ, ತೌಲನಿಕವಾಗಿ ಅಭ್ಯಸಿಸಿದರೆ ಕನ್ನಡ ಭಾಷೆಯ ರಚನೆಯ ರಹಸ್ಯವನ್ನು ಸುಲಭವಾಗಿ ಅರಿಯಬಹುದಾಗಿದೆ, ಅಂತೆಯೇ ಈ ನಿಟ್ಟಿನಲ್ಲಿ ಅಂತಹ ವಿಶಿಷ್ಟ ವ್ಯಾಕರಣವೊಂದರ ಆವಶ್ಯಕತೆ ಕನ್ನಡಕ್ಕೆ ಇದ್ದಿತು. ಅದನ್ನು ಪ್ರಸ್ತುತ 'ಕನ್ನಡ ಭಾಷಾವ್ಯಾಸಂಗ' ತಕ್ಕ ಮಟ್ಟಿಗಾದರೂ ಪೂರೈಸುತ್ತದೆಂದು ಭಾವಿಸಿದ್ದೇನೆ.

ಇದು ಕೇವಲ ವರ್ಣನಾತ್ಮಕ ವ್ಯಾಕರಣವಲ್ಲ. ಹಾಗೆಂದು ಇದನ್ನು ಕೇವಲ ಐತಿಹಾಸಿಕ, ತೌಲನಿಕ ವ್ಯಾಕರಣವು ಎನ್ನುವಂತಿಲ್ಲ. ಹಳಗನ್ನಡದ ಅವಸ್ಥೆಯಿಂದ ಇಲ್ಲಿಯವರೆಗಿನ ಕನ್ನಡ ಭಾಷೆಯ ಮಹತ್ವದ ವ್ಯಾಕರಣ ವಿಚಾರಗಳನ್ನು ಆಧುನಿಕ ಭಾಷಾವಿಜ್ಞಾನದ ದೃಷ್ಟಿಯಲ್ಲಿ ವಿವರಿಸುವುದೇ ಮುಖ್ಯ ಉದ್ದೇಶವಾಗಿದೆ.

ನನಗೆ ಭಾಷಾಶಾಸ್ತ್ರದ ಜ್ಞಾನದೀವಿಗೆಯನ್ನಿತ್ತು ನಿರಂತರ ಶಿಷ್ಯವಾತ್ಸಲ್ಯದಿಂದ ಮುನ್ನಡೆಯಿಸುತ್ತಿರುವ ನನ್ನ ವಿದ್ಯಾಗುರುಗಳಾದ ಡಾ. ಜೆ. ಎಸ್. ಕುಳ್ಳಿ ಅವರಿಗೆ ಈ ಗ್ರಂಥವನ್ನು ಅರ್ಪಿಸುವ ಭಾಗ್ಯ ಒದಗಿದುದೊಂದು ಸುಯೋಗವೆಂದು ಭಾವಿಸಿರುವೆ. ಅವರಿಗೂ ಹಾಗೂ ನನ್ನ ವ್ಯಾಸಂಗದ ಹಂತಹಂತವನ್ನು ಆಸಕ್ತಿಯಿಂದ ಗಮನಿಸಿ ಪರಿಶೀಲಿಸಿ ಸೂಕ್ತ ಮಾರ್ಗದರ್ಶನ ನೀಡುತ್ತಿರುವ ಇನ್ನೊಬ್ಬ ವಿದ್ಯಾಗುರುಗಳಾದ ಡಾ. ಕಲಬುರ್ಗಿ ಅವರಿಗೆ, ನನ್ನ ಬರವಣಿಗೆಗೆ ಪ್ರೋತ್ಸಾಹಿಸುತ್ತಿರುವ ಆತ್ಮೀಯ ಸ್ನೇಹಿತರಾದ ಡಾ. ವಿಲ್ಯಂ ಮಾಡ್ತ, ಪ್ರೊ. ಬಿ. ಆರ್. ಹಿರೇಮಠ ಹಾಗೂ ಹಸ್ತಪ್ರತಿಯನ್ನು ಸಮಗ್ರವಾಗಿ ಪರಿಶೀಲಿಸಿ ಅನೇಕ ಸೂಚನೆಗಳನ್ನಿತ್ತ ಮದ್ರಾಸ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿರುವ ಡಾ. ಕುಶಾಲಪ್ಪಗೌಡ ಅವರಿಗೆ, ಈ ಗ್ರಂಥ ಪ್ರಕಟನೆಗೆ ನೆರವಾದ ನನ್ನ ಮಾವನವರಾದ ಶ್ರೀ ಆರ್. ಸಿ. ವಸ್ತ್ರದ ಅವರಿಗೆ ಹಾಗೂ ಎಲ್ಲದಕ್ಕೂ ಸ್ಫೂರ್ತಿಯಾಗಿ ನಿಂತ ನನ್ನ ಧರ್ಮಪತ್ನಿ ಶಕುಂತಲೆಗೆ, ಮನೋಹರವಾಗಿ ಮುದ್ರಿಸಿದ ಧಾರವಾಡದ ಮನೋಹರ ಮುದ್ರಣಾಲಯದ ಒಡೆಯರಾದ ಸೋಮಣ್ಣ ಆಕಳವಾಡಿ ಹಾಗೂ ರವಿಚಂದ್ರ ಸೋದರರಿಗೆ ನಾನು ಕೃತಜ್ಞ.

ಕನ್ನಡದಲ್ಲಿ ಈ ಬಗೆಯ ಬರವಣಿಗೆ ಪ್ರಥಮ ಪ್ರಯತ್ನ. ಆದುದರಿಂದ ನಾನೇ ರೂಪಿಸಿಕೊಂಡ ಯೋಜನೆ, ಹುಡುಕಿಕೊಂಡ ಮಾರ್ಗಗಳಿಂದಾಗಿ ಅಲ್ಲಲ್ಲಿ ದೋಷಗಳು ಉಳಿದಿರುವ ಸಂಭವವಿದೆ. ಕೆಲವು ವಿಚಾರಗಳ ವಿವೇಚನೆ ಪುನರಾವೃತ್ತವಾಗಿರಬಹುದು. ಎಡೆವಾಯ್ದು ಬಂದ ಅಂತಹ ತಪ್ಪುಗಳನ್ನು ವಿದ್ವಾಂಸರು ಹೇಳಿದಲ್ಲಿ ಮುಕ್ತಮನಸ್ಸಿನಿಂದ ಸ್ವೀಕರಿಸುತ್ತೇನೆ, ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳುತ್ತೇನೆ.

೨ ಅಕ್ಟೋಬರ ೧೯೭೪ **ಸಂಗಮೇಶ ಸವದತ್ತಿಮಠ**

# ಒಂದೆರಡು ನುಡಿ

## (ಎರಡನೆಯ ಆವೃತ್ತಿಗೆ)

೧೯೭೯ ರ ಕೊನೆಕೊನೆಗೆ ಪ್ರಕಟಗೊಂಡು ೧೯೮೦ ರಲ್ಲಿ ಓದುಗರ ಕೈಸೇರ ಲಾರಂಭಿಸಿದಂದಿನಿಂದಲೂ ಕನ್ನಡ ಭಾಷಾವ್ಯಾಸಂಗಕ್ಕೆ ಎಲ್ಲ ಕಡೆಯಿಂದ ಉತ್ತಮ ಪ್ರತಿಕ್ರಿಯೆ ಬಂದಿತು. ವಿಶಿಷ್ಟ ಬಗೆಯ ಈ ವ್ಯಾಕರಣ ಕೃತಿಗೆ ದೊರೆತ ಪುರಸ್ಕಾರ ನನಗೆ ಹೆಚ್ಚಿನ ಸಂತೋಷ ತಂದಿತು. ಕರ್ನಾಟಕದ ಒಳಗಿನ ಹಾಗೂ ಹೊರಗಿನ ಅನೇಕ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳಿಂದ ಬರುತ್ತಿರುವ ನಿರಂತರ ಬೇಡಿಕೆ ಯಿಂದ ಪ್ರತಿಗಳೆಲ್ಲ ಮೂರು ವರ್ಷಗಳ ಅವಧಿಯೊಳಗೆ ಮುಗಿದುಹೋದವು. ೧೯೮೩–೮೪ ರ ಅವಧಿಯಲ್ಲಿ ನನಗೆ ಇತರ ಸಂಶೋಧನೆಯ ಅಧ್ಯಯನದ ಒತ್ತಡವುಂಟಾಗಿ ಪ್ರಸ್ತುತ ಕೃತಿಯನ್ನು ಪರಿಷ್ಕರಿಸಿ ಪ್ರಕಟಿಸುವ ವ್ಯವಸ್ಥೆ ಮಾಡ ಲಾಗಲಿಲ್ಲ. ಇದೀಗ ಅದು ಸಾಧ್ಯವಾಗಿದೆ.

ಪರಿಷ್ಕರಣೆಯಿಂದಾಗಿ ಪುಟಗಳ ಸಂಖ್ಯೆ ಹೆಚ್ಚುತ್ತ ಸಾಗಿದುದರಿಂದ ಪರಿಶಿಷ್ಟ ವನ್ನು ಕೈಬಿಟ್ಟಿದ್ದೇನೆ. ಆಧುನಿಕ ಭಾಷಾವಿಜ್ಞಾನದ ದೃಷ್ಟಿಯಿಂದ ಕನ್ನಡ ಭಾಷೆ ಯನ್ನು ಇನ್ನೂ ವಿವರವಾಗಿ ವಿವರಿಸಬೇಕೆಂಬುದು ನನಗೆ ಗೊತ್ತಿದ್ದೂ ಕನ್ನಡ ಭಾಷಾ ವ್ಯಾಸಂಗದ ಶಿಲ್ಪ ಹಾಗೂ ವ್ಯಾಪ್ತಿಗಳನ್ನು ಗಮನದಲ್ಲಿಟ್ಟು ಎಲ್ಲವನ್ನೂ ಸಂಕ್ಷೇಪವಾಗಿ ತಕ್ಕಷ್ಟು ಮಟ್ಟಿಗೆ ಇಲ್ಲಿ ವಿವರಿಸಿದ್ದೇನೆ.

ಮಾನ್ಯರಾದ ಡಾ|| ಎಂ. ಎಂ. ಕಲಬುರ್ಗಿ, ಡಾ|| ಕೆ. ಕುಶಾಲಪ್ಪಗೌಡ, ಡಾ|| ಎಂ. ಚಿದಾನಂದಮೂರ್ತಿ, ಡಾ|| ಜಿ. ಎಸ್. ಶಿವರುದ್ರಪ್ಪ, ಡಾ|| ಎಚ್. ತಿಪ್ಪೇರುದ್ರಸ್ವಾಮಿ, ಡಾ|| ಪಾ. ಶ. ಶ್ರೀನಿವಾಸ, ಡಾ|| ವಿಲ್ಯಂ ಮಾಡ್ತ, ಡಾ|| ಎನ್.ಎಸ್.ತಾರಾನಾಥ, ಡಾ|| ಕೆ. ಕೆಂಪೇಗೌಡ, ಡಾ|| ಜಿ. ವರದರಾಜರಾವ್, ಡಾ|| ಬಿ. ಬಿ. ರಾಜಪುರೋಹಿತ್, ಡಾ|| ಯು. ಪಿ. ಉಪಾಧ್ಯಾಯ, ಮುಂತಾದ ವಿದ್ವಾಂಸರು ಅಲ್ಲದೆ ಇನ್ನೂ ಅನೇಕ ನನ್ನ ಮಿತ್ರರು ನನ್ನ ಭಾಷಾವಿಜ್ಞಾನದ ಬರವಣಿಗೆಯನ್ನು ಮೆಚ್ಚಿ ಬೆನ್ನು ತಟ್ಟಿದ್ದಾರೆ. ಅವರು ನೀಡುತ್ತಿರುವ ಪ್ರೋತ್ಸಾಹಕ್ಕೆ ಎಣೆಯಿಲ್ಲ, ಇವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ನಮನಗಳು.

ಪ್ರಥಮಾವೃತ್ತಿಗೆ ಎರಡು ಸಾವಿರ ರೂಪಾಯಿಗಳ ಪುರಸ್ಕಾರ ನೀಡಿದ ಕರ್ನಾಟಕ ಸರಕಾರದ ಕನ್ನಡ ಸಂಸ್ಕೃತಿ ಇಲಾಖೆಯ ಅಧಿಕಾರಿಗಳಿಗೆ, ಓದಿ ಮೆಚ್ಚಿ

ಪತ್ರ ಬರೆದ ಅನೇಕ ಮಿತ್ರರಿಗೆ, ವಿದ್ಯಾರ್ಥಿಗಳಿಗೆ, ದ್ವಿತೀಯ ಆವೃತ್ತಿಯನ್ನು ಉತ್ಸಾಹದಿಂದ ಕೈಗೆತ್ತಿಕೊಂಡ ನನ್ನ ಸಹಧರ್ಮಿಣಿ ಶಕುಂತಲೆಗೆ, ಸುಂದರವಾಗಿ ಮುದ್ರಿಸಿದ ಕಾವೇರಿ ಪ್ರಿಂಟರ್ಸ್‌ನ ಶ್ರೀ ಶಿವಕುಮಾರ ಹಾಗೂ ಅವರ ಕೆಲಸಗಾರರಿಗೆ, ನನ್ನ ಕೃತಜ್ಞತೆಗಳು.

ಅಕ್ಟೋಬರ, ೧೯೭೫ **ಸಂಗಮೇಶ ಸವದತ್ತಿಮಠ**

## ಐದನೆಯ ಆವೃತ್ತಿಗೆ

ಹಲವಾರು ವಿಶ್ವವಿದ್ಯಾಲಯಗಳ ಬಿ.ಎ; ಎಂ. ಎ. ವಿದ್ಯಾರ್ಥಿಗಳಿಗೆ ಪಠ್ಯ ಪೂರಕ ಗ್ರಂಥವೆಂದು ಪ್ರಸ್ತುತ ಕೃತಿ ಮಾನ್ಯತೆ ಪಡೆದುದರಿಂದ ಮತ್ತೊಂದು ಆವೃತ್ತಿಯನ್ನು ಇದು ಕಾಣುವಂತಾಗಿದೆ. ಎಲ್ಲ ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಮಂಡಲಿಗಳ ಅಧ್ಯಕ್ಷರು ಹಾಗೂ ಸದಸ್ಯರಿಗೆ ಋಣಿಯಾಗಿದ್ದೇನೆ.

ಜೂನ್ ೧೯೯೩ **ಸಂಗಮೇಶ ಸವದತ್ತಿಮಠ**

# ಪರಿವಿಡಿ

# ಇವುಗಳನ್ನು ಗಮನಿಸಿರಿ

## ಸಂಕೇತಗಳು

| | | | |
|---|---|---|---|
| [ ] | ಧ್ವನ್ಯಾತ್ಮಕ | ✓ | ಇದೆ |
| / / | ಧ್ವನಿಮಾತ್ಮಕ | => | ರೂಪಾಂತರ |
| { } | ಆಕೃತಿಮಾ | : | ದೀರ್ಘ (ಉದಾ: ka:lu) |
| ϕ | ಶೂನ್ಯ | _ | ದಂತ್ಯ [ಉದಾ: ತ್ ದ್] |
| ⁑ | ಅನುಬಂಧ | ಸ್ವ | ಸ್ವರ |
| ~ | ನಾಸಿಕ್ಯತೆ | ವ್ಯ | ವ್ಯಂಜನ |
| ↑ ↓ → | ಶ್ರುತಿ | ಕ್> ಗ್ | ಕ್ ದಿಂದ ಗ್ ಬೆಳವಣಿಗೆ |
| ΛΛ/ | ಆಘಾತಗಳು ವಿಶ್ರಾಂತಿ | ð | ಇಂಗ್ಲೀಷಿನಲ್ಲಿಯ This ಎಂಬ ಶಬ್ದದಲ್ಲಿ ಬರುವಂಥ 'ಧ' ಉಚ್ಚಾರದ ಸಂಕೇತ |

## ಗ್ರಂಥದಲ್ಲಿ ಈ ಕೆಳಗಿನ ಕೆಲವು ಶಬ್ದಗಳು ಕೆಲವೆಡೆ ಸಮಾನಾರ್ಥದಲ್ಲಿ ಬಳಸಲ್ಪಟ್ಟವೆ

| | |
|---|---|
| ನಾಸಿಕ್ಯ/ನಾಸಿಕ | ದ್ವಿತ್ವ/ದ್ವಿತ್ತ್ವ |
| ಗಲೀಯ/ಗಲಕುಹರೀಯ | ದಂತ/ಹಲ್ಲು |
| ಬಿಂದು/ಸೊನ್ನೆ | ಭಾಷಾವಿಜ್ಞಾನ/ಭಾಷಾಶಾಸ್ತ್ರ |
| ಸ್ವತಂತ್ರ/ಮುಕ್ತ | ನಾಲಗೆ/ಜಿಹ್ವೆ |
| ಅಂತಸ್ಸಂಧಿ/ಪದಮಧ್ಯಸಂದಿ | ತುಟ್ಟಿ/ಓಷ್ಠ |
| ಬಹಿರ್‌ಸಂಧಿ/ಪದಾಂತ್ಯಸಂಧಿ | ಉಪಧ್ವನಿ/ಉಪಧ್ವನಿಮಾ |
| ವಿವೃತ/ವಿವೃತ್ತ | / ɷ / ɷ |
| ಸಂವೃತ/ಸಂವೃತ್ತ | ɑ / ɔ |

೧

# ಭಾಷೆ-ಅಧ್ಯಯನ

1.0 ಒಂದು ಸುಖಮಯವಾದ ಸಂಸಾರ. ಗಂಡ-ಹೆಂಡತಿ, ಇಬ್ಬರು ಮುದ್ದಾದ ಮಕ್ಕಳೊಂದಿಗೆ ನಗುತ್ತ ಕೆಲೆಯುತ್ತ ಇದ್ದಾರೆ. ಎಂಟು ವರ್ಷದ ಹಿರಿಯ ಮಗ ಸಂತೋಷ, ಪುಟ್ಟ ಕುಲಂಗಿ ನಾಯಿಯೊಂದನ್ನು ಸಾಕಿದ್ದಾನೆ. ಐದು ವರ್ಷದ ಮಗಳು ರಜನಿಗೆ ಮನೆಯ ಹಜಾರದ ಪಂಜರದಲ್ಲಿ ಆಡುವ ಗಿಳಿ ಎಂದರೆ ಅಚ್ಚು-ಮೆಚ್ಚು. ರಜನಿ ತಾನು ಎರಡು ವರ್ಷದವಳಿದ್ದಾಗಿನಿಂದಲೂ ಗಿಳಿಯನ್ನು ತನ್ನದೇ ಆದ ರೀತಿಯಲ್ಲಿ ಮಾತನಾಡಿಸುತ್ತಾಳೆ. ಈಗ ರಜನಿ ಚೆನ್ನಾಗಿ ಮಾತನಾಡುತ್ತಾಳೆ. ಒಮ್ಮೆ ತನ್ನ ತಂದೆಯನ್ನು ಕೇಳುತ್ತಾಳೆ—"ಅಪ್ಪಾಜಿ ಗಿಳಿ ಏಕೆ ಮಾತಾಡೊಲ್ಲ"? ತಂದೆ—"ಅದು ಹಕ್ಕಿ, ಮರಿ ಅದಕ್ಕೆ ಮನುಷ್ಯರಂತೆ ಮಾತು ಕಲಿತುಕೊಳ್ಳೊ ಶಕ್ತಿ ಇಲ್ಲ'' ಎಂದು ಉತ್ತರಿಸುತ್ತಾನೆ. ಒಮ್ಮೆ ಸಂತೋಷ ಬಂದು "ಅಪ್ಪಾಜಿ ನಾಯಿಹಾಗೆ ನಮಗ್ಯಾಕೆ ಬೊಗಳೋಕೆ ಬರೋಲ್ಲ!" ಎಂದು ಕೇಳಿ ಅಚ್ಚರಿ ಪಡಿಸುತ್ತಾನೆ.

ನಾಯಿಗೆ ಬೊಗಳುವಿಕೆ ತೀರ ಸಹಜ. ಆದರೆ ಮನುಷ್ಯನಿಗೆ ಬೊಗಳುವಿಕೆ ತೀರ ಅಸಹಜ. ಮನುಷ್ಯ ಮಾತನಾಡುವ ಸಾಮರ್ಥ್ಯ ಹೊಂದಿದ್ದಾನೆ. ಆದರೆ ಪಕ್ಷಿ-ಪ್ರಾಣಿಗಳಿಗೆ ಆ ಶಕ್ತಿ ಇಲ್ಲ. ಮಂಗ, ಚಿಂಪಾಜಿ, ಗೋರಿಲ್ಲಾ ಮನುಷ್ಯನ ಆಕಾರಕ್ಕೆ ಹೋಲಿಕೆಯಲ್ಲಿದ್ದರೂ ಮನುಷ್ಯರಂತೆ ಮಾತನಾಡಲಾರವು. ೧ ಪ್ರಾಣಿ-ಪಕ್ಷಿಗಳಿಗೂ ಮಾನವನಿಗೂ ಇರುವ ಅತ್ಯಂತ ಮಹತ್ವದ ಈ ಭಿನ್ನತೆಯ ಅಂಶವೇ ಪ್ರಾಣಿಗಳು ಆದಿಕಾಲದಿಂದ ತಾವಿದ್ದ ಸ್ಥಿತಿಯಲ್ಲೇ ಈಗಲೂ ಉಳಿಯಲು, ಮಾನವನು ಮಾತ್ರ ಎಲ್ಲಂದದಲ್ಲೂ ಮುಂದುವರಿಯಲು ಕಾರಣವಾಗಿದೆ. ಅಂತೆಯೆ ಭಾಷೆ ಮಾನವನಿಗೆ ಮಾತ್ರ ಲಭಿಸಿರುವ ಅಮೌಲ್ಯ ವರ.

---

೧ ಇತ್ತೀಚೆ ಇವುಗಳಿಗೆ ಕೆಲವು ಮಾತು ಕಲಿಸುವಲ್ಲಿ ನಡೆಸಿದ ಪ್ರಯೋಗ-ಸ್ವಲ್ಪಮಟ್ಟಿಗೆ ಯಶಸ್ವಿಯಾಗಿದೆಯೆಂಬುದನ್ನು ಪ್ರಾ. ವೆಂ. ಆಚಾರ್ಯ ಅವರು ತಮ್ಮ ಲೇಖನವೊಂದರಲ್ಲಿ ಪ್ರತಿಪಾದಿಸಿದ್ದಾರೆ. ನೋಡಿ : 'ಭಾಷೆ, ಮಾನವ ಮತ್ತು ವಾನರ'—ತುಷಾರ, ನವೆಂ ೧೯೭೯. ಪುಟ ೬೫-೭೪.

**1.1** ಮನುಷ್ಯ ಮಾತನಾಡಲು ಕಲಿತಂದಿನಿಂದಲೇ ತನ್ನ ಅನಿಸಿಕೆಗಳನ್ನು ಸುಲಭವಾಗಿ ಇತರರಿಗೆ ತಿಳಿಸಲು ತೊಡಗಿ ಇತರರ ಭಾವನೆಗಳನ್ನು ಅರ್ಥಮಾಡಿಕೊಂಡು ಸಮಾಜ ಜೀವಿಯಾಗತೊಡಗಿದ. ಹೊಸ ಹೊಸ ಸಂಶೋಧನೆಗಳನ್ನು ತನ್ನ ಅವಶ್ಯಕತೆಗನುಗುಣವಾಗಿ ನಡೆಸುತ್ತ ಸಾಗಿದ. ತಾನು ಕಂಡುಕೊಂಡ ಸತ್ಯವನ್ನು ಮುಂಬರುವ ಪೀಳಿಗೆಯವರಿಗೆ ದಾಖಲೆಯಾಗಿ ಉಳಿಸಬೇಕೆಂಬ ಇಚ್ಛೆಯಿಂದ, ತನ್ನೆದುರಿಗೆ ಇಲ್ಲದವರಿಗೂ ತನ್ನ ಭಾವನೆಗಳನ್ನು ತಿಳಿಸಬೇಕೆಂಬ ಹಂಬಲದಿಂದ ತನ್ನ ಮಾತಿಗೆ ಬರಹದ ರೂಪವನ್ನು ಕೊಟ್ಟನು. ಹೀಗೆ ಮೊದಲು ಮಾತು ಕಲಿತು ಅದನ್ನು ಬರೆದಿಡುವುದನ್ನು ರೂಢಿಸಿಕೊಂಡ. ಈ ಬಗೆಯ ಪ್ರಯತ್ನಗಳನ್ನು ಮಾನವರು ತಮತಮಗೆ ತಿಳಿದಂತೆ ಪ್ರಪಂಚದಲ್ಲಿ ಹಲವಾರು ಪ್ರದೇಶಗಳಲ್ಲಿ ನಡೆಸಿ ತಮ್ಮದೇ ಆದ ಭಾಷೆ ಬರೆಹಗಳನ್ನು ರೂಢಿಸಿಕೊಂಡರು.

**1.2** ಜಗತ್ತಿನಲ್ಲಿ ಮಾನವನಿಗೆ ಮಾತ್ರ ಹೀಗೆ ಮಾತನಾಡುವ ಕಲೆಯನ್ನು ಸಾಧಿಸಿಕೊಳ್ಳುವುದು ಸಾಧ್ಯವಾಗಿದೆ. ಅದಕ್ಕೆ ಕಾರಣವೆಂದರೆ ಪ್ರಾಣಿಗಳಿಗಿಂತ ಭಿನ್ನವಾದ ಮಾನವನ ಮಿದುಳನ್ನು ದೇವರು ರಚಿಸಿದ್ದು. ಮಾನವನ ಮಿದುಳಿನ ಎಡಭಾಗದಲ್ಲಿ (**Left hemisphere**) ಮಾತನಾಡುವ ಶಕ್ತಿಯು ಕೇಂದ್ರವಿದೆಯೆಂದು ಹೇಳಲಾಗುತ್ತದೆ. ಈ ಶಾರೀರಿಕ ವಿಶಿಷ್ಟ ಕೇಂದ್ರ ದೈವದತ್ತವಾದುದು, ಆನುವಂಶಿಕವಾದುದು. ಆದುದರಿಂದಲೆ ಮನುಷ್ಯನು ಭಾಷೆಯನ್ನು ಸೃಷ್ಟಿಸಬಲ್ಲ, ಬೆಳೆಯಿಸಬಲ್ಲ. ಪ್ರಾಯಃ ಈ ಕಾರಣದಿಂದಲೆ ಪ್ರಾಚೀನ ವಿದ್ವಾಂಸರು ಭಾಷೆ ದೈವದತ್ತವಾದುದೆಂದು ನಂಬಿರಬೇಕು. ಭಾಷೆ ದೇವರ ಕೊಡುಗೆ ಎಂದು ಋಗ್ವೇದದ ೧೦ನೆಯ ಮಂಡಲದಲ್ಲಿ ಹೇಳಲಾಗಿದೆ. ಜೆನೆಸಿಸ್ ಎಂಬ ದೇವತೆಯಿಂದ ಭಾಷೆ ಹುಟ್ಟಿತೆಂದು ಪಾಶ್ಚಾತ್ಯರು ನಂಬಿದ್ದರು. ಥಾಥ್ ಎಂಬ ದೇವರಿಂದ ಭಾಷೆ ಮಾನವನಿಗೆ ಲಭ್ಯವಾಯಿತೆಂದು ಈಜಿಪ್ತಿನಲ್ಲಿ ನಂಬಿಕೆಯಿತ್ತು. ಸರಸ್ವತಿ ಭಾರತೀಯರಿಗೆ ಭಾಷಾದೇವಿ. ಆದರೆ ಇಂದು ಈ ಕಲ್ಪನೆಗಳಿಗೆ ಮನ್ನಣೆಯಿಲ್ಲ. ದೈವದತ್ತತೆಯನ್ನು ಆಧುನಿಕರು ಒಪ್ಪುವುದಿಲ್ಲ, ಭಾಷೆಯ ಉಗಮದ ಬಗೆಗೆ ಹೀಗೆಯೆ ಎಂದು ಈಗ ಹೇಳಲಾಗದು, ಆನುವಂಶಿಕವಾಗಿ ಬರುವ ಭಾಷೆಯನ್ನು ರೂಢಿಸಿಕೊಳ್ಳುವ ಆ 'ವಿಶಿಷ್ಟ ಶಕ್ತಿ' ಮಾತ್ರ ದೈವದತ್ತವೆನ್ನಬಹುದು. ಆದರೆ ಈ ಒಂದೇ ಕಾರಣದಿಂದ ಮನುಷ್ಯನ ಹುಟ್ಟಿನೊಂದಿಗೇ ಭಾಷೆ ಅವನ ಕರಗತವಾಗುವುದಿಲ್ಲ. ಅಂತೆಯೇ ಭಾಷೆ 'ಉಸಿರಿನ ಕೂಸಲ್ಲ, ಮನುಷ್ಯನ ಬುದ್ಧಿಯ ಕೂಸು' ಎನ್ನುತ್ತಾರೆ. ಕೂಸು ತಾಯಿಯ ಗರ್ಭದಿಂದ ಹೊರಕ್ಕೆ ಬಂದಮೇಲೆ ಉಸಿರಾಡಿಸುತ್ತದೆ. ಮೊಲೆಹಾಲು ಕುಡಿಯುತ್ತದೆ. ಹೀಗೆಯೇ ಅದರ ಇನ್ನಿತರ ನೈಸರ್ಗಿಕ ಕ್ರಿಯೆಗಳೆಲ್ಲ ಸಹಜವಾಗಿ

ನಡೆಯುತ್ತವೆ. ಆದರೆ ಮಾತನಾಡಲು ಮಾತ್ರ ನೈಸರ್ಗಿಕವಾಗಿ ಅದಕ್ಕೆ ಬರುವುದಿಲ್ಲ. ಆ ಕಾರಣದಿಂದಲೇ ಭಾಷೆಯನ್ನು ರೂಢಿಸಿಕೊಳ್ಳಲು ಮಾನವನಿಗೆ ಬಹಳಷ್ಟು ಕಾಲವೇ ಸಂದುಹೋಗಿರಬೇಕು. ತನಗೆ–ಪ್ರಾಣಿ ಪಕ್ಷಿಗಳಿಗೆ ಇಲ್ಲದಿರುವ—ಮಾತನಾಡುವ ವಿಶಿಷ್ಟ ಶಕ್ತಿಯಿದೆಯೆಂಬುದೇ ಮಾನವನಿಗೆ ಎಷ್ಟೋ ಕಾಲ ತಿಳಿಯಲಿಲ್ಲ. (ಅದು ತಿಳಿದಿರಬೇಲೇಕೆಂಬ ನಿಯಮವೇನೂ ಇಲ್ಲ) ಆದರೂ ಮಾತನಾಡಲು ಮನುಷ್ಯ ತನ್ನ 'ಸ್ವಪ್ರಯತ್ನ'ದಿಂದಲೇ ಕಲಿತನು.

**1.3** ಭಾಷೆಯ ಉಗಮಕ್ಕೆ ಇನ್ನೆರಡು ಅಂಶಗಳೂ ಅತ್ಯಂತ ಮಹತ್ವದವು. (೧) ಕಲ್ಕೆ (೨) ಪರಿಸರ. ಕಲ್ಕೆ ಎಂದರೆ ಪ್ರಯತ್ನ, ಭಾಷೆಯನ್ನು ರೂಢಿಸಿಕೊಳ್ಳಲು ಕೆಲವು ಕಾಲದವರೆಗೂ ಪ್ರಯತ್ನ ಮುಂದುವರಿಯಬೇಕಾಗುತ್ತದೆ. ಈ ಪ್ರಯತ್ನದಿಂದಾಗಿ ಮಾನವನು ಪ್ರಪಂಚದ ಯಾವ ಭಾಷೆಯನ್ನೂ ಕಲಿಯುವದು ತೀರ ಸುಲಭ. ಇನ್ನು ಕೂಸಿಗೆ ತನ್ನ ತಾಯಿ ಹಾಗೂ ಕುಟುಂಬದ ಸದಸ್ಯರ ನಿರಂತರವಾದ ತಮ್ಮ ಭಾಷೆಯ ದಟ್ಟ ಪರಿಸರವಿರುತ್ತದೆ. ಹೀಗಾಗಿ ತೀರ ಚಿಕ್ಕಂದಿನಿಂದಲೇ ಕೇಳಿ. ಅನುಕರಿಸಿ ಭಾಷೆಯನ್ನು ರೂಢಿಸಿಕೊಳ್ಳುತ್ತದೆ. ಪರಿಸರ ದಟ್ಟವಿದ್ದಷ್ಟೂ, ಹೆಚ್ಚುಕಾಲವಿದ್ದಷ್ಟೂ ಭಾಷೆಯ ಸೂಕ್ಷ್ಮಾತಿಸೂಕ್ಷ್ಮ ರಚನೆಯ ಅಂಶಗಳು ಸುಲಭವಾಗಿ ಕರಗತವಾಗುತ್ತ ಹೋಗುತ್ತವೆ. ಪರಿಸರವಿಲ್ಲದೆಯೆ ಕಲ್ಕೆಯಿಂದ ಭಾಷೆಯನ್ನು ರೂಢಿಸಿಕೊಳ್ಳುವುದು ಹೆಚ್ಚು ಪ್ರಯಾಸದ್ದು. ಕಲ್ಕೆ ಮತ್ತು ಪರಿಸರ ಭಾಷೆಯ ಪರಿಣತಿಗೆ ಪರಸ್ಪರ ಪೂರಕವಾಗಿರುವ ಅಂಶಗಳು, ಮನುಷ್ಯನಿಗೆ ಮಾತನಾಡುವ ಸಾಮರ್ಥ್ಯ ದೊರೆಯುವಲ್ಲಿ ಈ ಅಂಶಗಳು ಪರಸ್ಪರ ಹೇಗೆ ಅವಶ್ಯಕವೆನ್ನುವದನ್ನು ಅಕ್ಬರನು ಪ್ರಯೋಗ ಮೂಲಕ ಕಂಡುಕೊಂಡನೆಂದು ಹೇಳುತ್ತಾರೆ.

ಒಂದು ಊರಿನಲ್ಲಿ ಒಂದೇ ದಿನ ಒಂದೇ ವೇಳೆಗೆ ಹುಟ್ಟಿದ ಎರಡು ಗಂಡು ಕೂಸುಗಳಲ್ಲಿ ಅವನು ಒಂದನ್ನು ಕೋಣೆಯಲ್ಲಿಯೇ ಬೆಳೆಯುವಂತೆ ವ್ಯವಸ್ಥೆ ಮಾಡಿ ಇನ್ನೊಂದನ್ನು ಸಹಜವಾಗಿ ಓಣಿಯ ಮಕ್ಕಳ ಮಧ್ಯದಲ್ಲಿ ತಂದೆ–ತಾಯಿಗಳ ಆರೈಕೆಯಲ್ಲಿ ಬಿಟ್ಟನಂತೆ. ಕೋಣೆಯ ಕೂಸಿಗೆ ಕೇವಲ ಆಹಾರ–ಇತ್ಯಾದಿ ಜೀವನಕ್ಕೆ ಬೇಕಾಗುವ ವಸ್ತುಗಳನ್ನು ಪೂರೈಸುತ್ತ ಅದನ್ನು ಆರೈಕೆ ಮಾಡುವವರು ಮಗುವಿನೊಡನೆ ಅಥವಾ ತಮ್ಮತಮ್ಮಲ್ಲಿ ಮಗುವಿನ ಎದುರಿಗೆ ಏನೊಂದೂ ಮಾತನಾಡುವ ಹಾಗಿರಲಿಲ್ಲ. ಸಂಪೂರ್ಣವಾಗಿ ಭಾಷಾ ಪರಿಸರದಿಂದ ಮಗು ದೂರವಾಗಿಡಲ್ಪಟ್ಟಿತ್ತು. ನಾಲ್ಕೈದು ವರ್ಷದ ನಂತರ ಎರಡನ್ನೂ ಒಟ್ಟಿಗೆ ಪರೀಕ್ಷಿಸಿದಾಗ ಓಣಿಯ ಮಗು ತೀರ ಸಹಜವಾಗಿ ಮಾತನಾಡಲು ಸಮರ್ಥವಾಗಿದ್ದರೆ ಕೋಣೆಯಲ್ಲಿಯ

ಮಗುವಿಗೆ ಏನೊಂದೂ ಮಾತು ಬರದೆ ಅದು ಮಾತನಾಡುವವರ ಎದುರು ಕಕ್ಕಾಬಿಕ್ಕಿಯಾಯಿತಂತೆ, ಇದರಿಂದ ಕಲ್ಕೆ-ಪರಿಸರಗಳು ಭಾಷೆಗೆ ಎಷ್ಟು ಅವಶ್ಯಕವೆಂಬುದನ್ನು ಖಚಿತಪಡಿಸಿಕೊಳ್ಳಲಾಯಿತು. ಮಗುವಿಗೆ ಪ್ರಯತ್ನಪಟ್ಟು ಯಾವ ಭಾಷೆಯನ್ನಾದರೂ ಕಲಿಸಲು ಸಾಧ್ಯ, ಒಂದು ಭಾಷೆಯ ಪರಿಸರದಲ್ಲಿ ಆ ಭಾಷೆಯನ್ನು ಕಲಿಯುತ್ತ ಹಲವು ಭಾಷೆಗಳನ್ನು ಪರಿಸರವಿಲ್ಲದೆಯೆ ಪ್ರಯತ್ನದಿಂದ ಕಲಿಯಬಹುದು. ಇದೆಲ್ಲಾ ಸಾಧ್ಯವಾಗಿದ್ದು ಕೇವಲ ಮನುಷ್ಯನ ಪ್ರಯತ್ನದಿಂದ. ಪಕ್ಷಿ-ಪ್ರಾಣಿಗಳಿಗೂ ತಮ್ಮದೇ ಆದ ಸಾಂಕೇತಿಕ ಭಾಷೆ ಇರಬಹುದು. ಆದರೆ ಅದು ತೀರ ಸೀಮಿತವಾದುದು, "The most stupid men learn how to talk while even the most brilliant monkeys never learn." ಸುಪ್ರಸಿದ್ಧ ಭಾಷಾ ವಿಜ್ಞಾನಿ ಚೋಮ್‌ಸ್ಕಿ ಅವರ ಈ ಮಾತು ತೀರ ಸತ್ಯವಾದುದು.

ಭಾಷೆಯ ಉಗಮದ ಬಗ್ಗೆ ಅನೇಕ ವಾದಗಳನ್ನು ವಿದ್ವಾಂಸರು ಮಂಡಿಸಿದ್ದಾರೆ. ಲೀಬ್ನಿಜ್‌ನ ಅನುಕರಣವಾದ, ಮ್ಯಾಕ್ಸಮುಲ್ಲರ್‌ನ ಅನುರಣನವಾದ, ನೋರಿಯ ಶ್ರಮಪರಿಹಾರವಾದ, ಪಂಡ್ತನ ಸಂಜ್ಞಾವಾದ, ಯೆಸ್ಪರಸನ್‌ನ ತೊದಲ್ನುಡಿವಾದ ಇವಲ್ಲದೆ ಟಾಟಾವಾದ, ತರಂಗವಾದ, ವಂಶವೃಕ್ಷವಾದ, ಸ್ವೀಕಾರವಾದ, ಸಂಪರ್ಕವಾದ, ಇಂಗಿತವಾದ, ಏಕಪರಿವಾರವಾದ ಇತ್ಯಾದಿ ಹಲವಾರು ವಾದಗಳು ಭಾಷೆಯ ಉಗಮವನ್ನು ವಿವರಿಸುವ ಪ್ರಯತ್ನಗಳಾಗಿವೆ.

1.4 ಭಾಷೆ ಮನುಷ್ಯ-ಮನುಷ್ಯರನ್ನು ತೀರ ಹತ್ತಿರಕ್ಕೆ ತಂದಿದೆ, ಗುಂಪುಜೀವಿಯಾಗಿದ್ದವನನ್ನು ಸಮಾಜಜೀವಿಯನ್ನಾಗಿಸಿದೆ, ಅವನ ಮಾನಸಿಕ, ಶಾರೀರಿಕ, ಸಾಮಾಜಿಕ ಅವಶ್ಯಕತೆಗಳ ಪೂರೈಕೆಗಾಗಿ ಭಾವನೆಯ ಎಳೆ ಎಳೆಗಳನ್ನು ಅವನು ಭಾಷಾ ಮಾಧ್ಯಮದ ಮೂಲಕ ಸಾಧ್ಯಮಾಡಿಕೊಂಡಿದ್ದಾನೆ. ತನ್ನ ಅನಿಸಿಕೆ-ಅನುಭವ, ಹಂಬಲ-ಹವಣಿಕೆಗಳನ್ನು ಅಭಿವ್ಯಕ್ತಪಡಿಸಿಕೊಟ್ಟು-ಪಡೆಯುತ್ತ ಮಾನವ ಮುಂದುವರಿದಿದ್ದಾನೆ. ವೈಜ್ಞಾನಿಕ ಸಾಧನೆಗಳು, ಆವಿಷ್ಕಾರಗಳು, ರಾಜಕೀಯ ಶಾಂತಿ, ಪರಸ್ಪರ ಸಹಕಾರ, ಸಾಂಸ್ಕೃತಿಕ ಔನ್ನತ್ಯ, ಮನುಷ್ಯನ ಸರ್ವಾಂಗೀಣ ವ್ಯಕ್ತಿತ್ವವಿಕಾಸ ಭಾಷಾ ಮಾಧ್ಯಮದ ಮೂಲಕ ತೀರ ಸುಲಭವಾಗಿವೆ. ಅಂತೆಯೆ ಇಂದಿನ ಜಗತ್ತಿಗೆ ಗಾಳಿ-ಬೆಳಕುಗಳಷ್ಟೇ ಭಾಷೆ ಅತ್ಯವಶ್ಯವೆನಿಸುವಷ್ಟರ ಮಟ್ಟಿಗೆ ಮಹತ್ವಪೂರ್ಣವಾಗಿದೆ.

ಇದಂ ಅಂಧತಮಂ ಕೃತ್ಸ್ನಂ ಜಾಯೇತ ಭುವನ ತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿರಾನ್ ಸಂಸಾರಾನ್ ನದೀಪ್ಯತೇ ॥

ಎಂಬ ದಂಡಿಯ ಉಕ್ತಿ ಇಂದು ತೀರ ಸತ್ಯವೆನಿಸಿದೆ. ಭಾಷೆಯಿಲ್ಲದೆ ಜೀವನವೇ ಅಸ್ತ-ವ್ಯಸ್ತ. ಕಲಿಯುಗದ ಮಾನವ ಭಾಷಾವಿಹೀನನಾದರೆ ಬದುಕುವುದೇ ದುಸ್ತರವಾಗಿ ಬಿಡುತ್ತದೆ. ಮಾತು ಬೆಳ್ಳಿ ಮೌನ ಬಂಗಾರವಾದರೂ ಸಮಾಜದ ದೃಷ್ಟಿಯಿಂದ ಮಾತು ಬಂಗಾರವೇ. ಮಾತಿಲ್ಲದೆ ಸಮಾಜ ಜೀವನವೇ ಅಸಾಧ್ಯ. ಕಾರಣ, ಮಾತೆಂಬುದು ಜ್ಯೋತಿರ್ಲಿಂಗ. ಆ ಮಾತಿನ ಭಾಷೆಯ ಅಂತರ್ಯ ನಮಗೆ ತಿಳಿಯಲಿ ಬಿಡಲಿ ದಿನನಿತ್ಯದ ವ್ಯವಹಾರ ನಡೆಯಬೇಕಿದ್ದರೆ ಮಾತು ಬೇಕೇ ಬೇಕು. ಹಾಗಿದ್ದರೆ ಮಾನವ ರೂಪಿಸಿಕೊಂಡಿರುವ ಈ ಭಾಷಾ ವೈಶಿಷ್ಟ್ಯಗಳೇನು ? ಎಂಬ ಪ್ರಶ್ನೆ ಉದ್ಭೂತವಾಗುತ್ತದೆ. ಮಾನವ ಭಾಷಾವೈಲಕ್ಷಣ್ಯಗಳನ್ನಿಷ್ಟು ಈಗ ನೋಡೋಣ.

### 1.5.1 ದ್ವೈವಿಧ್ಯ :

ಮನುಷ್ಯ ತಾನು ಅಸಂಖ್ಯಾತ ಧ್ವನಿಗಳನ್ನು ಹೊರಡಿಸಬಹುದು. ಅವುಗಳಲ್ಲಿ ತನಗೆ ಅನುಕೂಲವೆನಿಸುವ ಹಾಗೂ ಉಚ್ಚಾರಕ್ಕೆ ಸುಲಭವೆನಿಸುವ ಧ್ವನಿ ಅಥವಾ ಧ್ವನಿಯ ಮೊತ್ತವನ್ನು ಒಂದೊಂದು ವಸ್ತು, ಭಾವನೆಗಳಿಗೆ ಸಂಕೇತಿಸುತ್ತ ಹೋಗುತ್ತಾನೆ, ಉದಾಹರಣೆಗೆ 'ಈ' ಎಂದರೆ ಈ ವಸ್ತು, ಇದು. 'ಆ' ಎಂದರೆ ಅಲ್ಲಿಯ ವಸ್ತು. 'ನೀ' ಎಂದರೆ ನೀನು. 'ಬಾ' ಎಂದರೆ ಕರೆ. 'ಹುಡುಗಿ' ಎಂದರೆ ಚಿಕ್ಕ ವಯಸ್ಸಿನ ಹೆಣ್ಣು. ಈ ಎಲ್ಲ ಶಬ್ದಗಳಿಗೂ ಒಂದೊಂದು ಅರ್ಥವನ್ನು ಕನ್ನಡ ಭಾಷೆಯಲ್ಲಿ ಕಲ್ಪಿಸಲಾಗಿದೆ. ಈ, ಆ ಇವು ಒಂದೇ ಧ್ವನಿಯಿಂದ ಕೂಡಿವೆ. ನೀ, ಬಾ ಇವು ನ್+ಈ, ಬ್+ಆ ಎಂಬಂತೆ ಎರಡೆರಡು ಧ್ವನಿಗಳನ್ನು ಹೊಂದಿವೆ. ಹುಡುಗಿ— ಹ್+ಉ+ಡ್+ಉ+ಗ್+ಇ ಇದು ಆರು ಧ್ವನಿಗಳ ಮೊತ್ತವಾಗಿದೆ. ಇವೆಲ್ಲವನ್ನೂ ಆ ಭಾಷೆಯನ್ನಾಡುವ ಜನಸಮೂಹ ಒಪ್ಪಿಕೊಂಡು ಬಳಕೆಯಲ್ಲಿ ತಂದಿರುತ್ತದೆ. ಆದ್ದರಿಂದ ಮಾನವ ಭಾಷೆಯಲ್ಲಿ ತಾನೇ ಆಯ್ಕೆ ಮಾಡಿಕೊಂಡ ಮಹತ್ವದ ಹಾಗೂ ಅರ್ಥವತ್ತಾದ ಧ್ವನಿ ಹಾಗೂ ಅವುಗಳಿಂದುಟಾಗುವ ಅರ್ಥ. ಈ ಬಗೆಯ **'ದ್ವೈವಿಧ್ಯ'** ಮಹತ್ವದ ಲಕ್ಷಣವಾಗಿದೆ. ಅಭಿವ್ಯಕ್ತಿ ಅದಕ್ಕೊಂದು ಧ್ವನ್ಯಾತ್ಮಕರೂಪ ಒಂದು ಮುಖವಾದರೆ ಅದಕ್ಕಂಟಿಕೊಂಡೇ ಬರುವ ಇನ್ನೊಂದು ಮುಖ ಅದರ ಅರ್ಥ. ಇದನ್ನೇ ದ್ವೈವಿಧ್ಯ ಎನ್ನುವರು.

### 1.5.2 ಉತ್ಪಾದಕತೆ :

ಭಾಷೆ ನಿರಂತರವಾಗಿ ಪ್ರವಹಿಸುವ ಪ್ರವಾಹದಂತೆ. ಹರಿವ ನದಿಗೆ ಹೊಸ ಹೊಸ ನೀರು ಬಂದು ಕೂಡುತ್ತಲೇ ಇರುವಂತೆ– ಇದ್ದ ಧ್ವನಿ ಸಾಮಗ್ರಿಯನ್ನೇ

ಬಳಸುತ್ತ ಹೊಸ ಹೊಸ ಶಬ್ದರೂಪಗಳನ್ನು ಸೃಷ್ಟಿಸುವ ಕಾರ್ಯ ನಾಗಿಯೇ ಇರುತ್ತದೆ. ಎಲ್ಲರಿಗೂ ಸಾಮಾನ್ಯವಾಗಿ ಪೇಟೆಯಲ್ಲಿ ದೊರೆಯುವ ವಸ್ತುಗಳನ್ನೇ ತೆಗೆದುಕೊಂಡು ಜಾಣಳಾದ ಗೃಹಿಣಿಯು ಮನೆಯಲ್ಲಿ ಬಗೆಬಗೆಯ ಖಾದ್ಯ ಪದಾರ್ಥಗಳನ್ನು ಮಾಡುವಂತೆ ಹೊಸ ಹೊಸ ಪ್ರಯೋಗದಿಂದ ಹೊಸ ತಿಂಡಿಗಳನ್ನು ತಯಾರಿಸುವಂತೆ ಇದ್ದ ಧ್ವನಿ ಸಾಮಗ್ರಿಯಿಂದಲೇ ಭಾಷೆಯ ಸಂಪತ್ತು ವೃದ್ಧಿಯಾಗುವಂತೆ ಮಾನವನು ಪ್ರಯತ್ನಿಸುತ್ತಾನೆ. ಹೊಸ ಸೃಷ್ಟಿ ನಡಯೇ ಇರುತ್ತದೆ. ವಿಧಾನಸಭೆ, ತೆರೆದ ಅಂಚೆ, ಕಾರ್ಖಾನೆ, ಉಗಿಬಂಡಿ, ಶೀತಾಗಾರ, ದೂರವಾಣಿ, ದೂರದರ್ಶನ, ಬಾನುಲಿ ಇಂತಹ ಅಗಣಿತ ಶಬ್ದಗಳು ನಮ್ಮ ಪೂರ್ವಜರಿಗೆ ಗೊತ್ತಿರಲಿಲ್ಲ. ನಾವು ಸದ್ಯಕ್ಕೆ ಊಹಿಸಲಾಗದ ಇನ್ನೂ ಎಷ್ಟೋ ನವೀನ ಶಬ್ದಗಳೂ ಮುಂಬರುವ ಕಾಲದಲ್ಲಿ ಸೃಷ್ಟಿಯಾಗಬಹುದು. ಈ ರೀತಿ ಅನೂಚಾನವಾಗಿ ನಡೆಯುವ '**ಉತ್ಪಾದಕ**' ಗುಣ ಮಾನವ ಭಾಷೆಯ ಇನ್ನೊಂದು ವೈಶಿಷ್ಟ್ಯವಾಗಿದೆ.

### 1.5.3 ಯಾದೃಚ್ಛಿಕತೆ :

ಒಂದು ಶಬ್ದ ಒಂದೇ ಅರ್ಥವನ್ನು ಅಥವಾ ಹಲವು ಅರ್ಥಗಳನ್ನು ಹೊಂದಿರಬಹುದು. ಇಲ್ಲವೆ ಹಲವು ರೂಪಗಳುಳ್ಳ ಅನೇಕ ಶಬ್ದಗಳು ಒಂದೇ ಅರ್ಥವನ್ನೂ ಸೂಚಿಸಬಹುದು. ಈ ಅನುಕೂಲತೆ ಭಾಷೆಯ ಹರಹನ್ನು ಹೆಚ್ಚಿಸಿದೆ. ಉದಾಹರಣೆಗೆ ಕನ್ನಡದಲ್ಲಿ 'ಹರಾಜು' ಎಂಬ ಶಬ್ದ ಉತ್ತರ ಕರ್ನಾಟಕದಲ್ಲಿ ಕೆಲವೆಡೆ 'ಲಿಲಾವು' ಮಂಗಳೂರಿನ ಕಡೆಗೆ 'ಏಲಂ' ಎಂದು ಬಳಕೆಯಲ್ಲಿದೆ. ಕಾಲುವೆ ಉತ್ತರ ಕರ್ನಾಟಕದಲ್ಲಿ ನೀರು ಹರಿಯುವ ಕಾಲುವೆಯಾದರೆ ಮೈಸೂರು ಕಡೆಗೆ ಜೋಪಡಿ ಹೊಯ್ಯುವ ಹಂಚು. ಕಲಬುರ್ಗಿ ಭಾಗದಲ್ಲಿ 'ಹಾನ' ಧಾರವಾಡ ಭಾಗದಲ್ಲಿ 'ಅದಾನೆ' ಮೈಸೂರು ಭಾಗದಲ್ಲಿ 'ಇದ್ದಾನೆ'. 'ಆಡು' ಎಂದರೆ ಆಟ ಆಡು ಅಥವಾ ಒಂದು ಪ್ರಾಣಿ. ಹೀಗೆ ಒಂದೇ ಭಾಷೆಯಲ್ಲಿ ಈ ಬಗೆಯ ವ್ಯತ್ಯಾಸಗಳನ್ನು ಕಾಣುತ್ತೇವೆ. ನಾಯಿ ಎನ್ನುವ ಒಂದೇ ಪ್ರಾಣಿಗೆ ದ್ರಾವಿಡದ ಒಂದೇ ವರ್ಗದ ಭಾಷೆಗಳಲ್ಲಿ ಆತೆ [ನಾಯ್ಕಿ], ನೆತ್ತ [ಪರ್ಜಿ], ನೇತೆ [ಗದಬ] ಸುಕಡಿ [ಕೊಂಡ], ನೆಹುರಿ [ಕುವಿ], ನೆಕುಡ್ [ಪೆಂಗೊ], ನಾಯಿ [ಕನ್ನಡ] ಜಾಗಿಲಮು/ಕುಕ್ಕ [ತೆಲುಗು] ಎಂಬುದಾಗಿ ಶಬ್ದಗಳಿದ್ದರೆ ಹಿಂದಿಯಲ್ಲಿ ಕುತ್ತಾ, ಮರಾಠಿಯಲ್ಲಿ ಕುತರಾ, ಗುಜರಾಥಿಯಲ್ಲಿ ಕುತರಿ, ಇಂಗ್ಲೀಷಿನಲ್ಲಿ ಡಾಗ್, ಜರ್ಮನ್‌ದಲ್ಲಿ ಹುಂಟ್ ಹೀಗೆ ವಸ್ತು ಅಥವಾ ಪ್ರಾಣಿ ಒಂದೇ ಇದ್ದರೂ ಅವುಗಳನ್ನು ಸಂಕೇತಿಸುವ ಧ್ವನಿ ಮೊತ್ತ ಒಂದೇ ಏಕೆ ಇಲ್ಲ ? ಎನಿಸುತ್ತದೆ.

ಮಾನವಕುಲ ಒಂದೇ ಇದ್ದರೂ ಅವನ ಭಾಷಾಕುಲ ಒಂದೇ ಇಲ್ಲ. ಇದಕ್ಕೆ ಕಾರಣ ಮನುಷ್ಯರ ಒಂದೊಂದು ಸಮೂಹವೂ ತನಗನುಕೂಲವೆನಿಸಿದಂತೆ ತಮ್ಮ ತಮ್ಮ ವ್ಯವಹಾರಕ್ಕಾಗಿ ಸ್ವತಂತ್ರವಾಗಿ ಭಾಷೆಯನ್ನು ರೂಪಿಸಿಕೊಂಡದ್ದು, ಇದನ್ನೇ ಯಾದೃಚ್ಛಿಕತೆಯೆನ್ನುತ್ತಾರೆ, ಆನೆ ಎಂಬುದು ಒಂದು ಪ್ರಾಣಿಯಾದರೂ ಅದನ್ನು ಆನೆ ಎಂದೇ ಕರೆಯಬೇಕೆಂಬ ನಿಯಮವಿಲ್ಲ, ಆನೆಯನ್ನು ಕಲ್ಲು ಎಂದು ಎಲ್ಲರೂ ಒಪ್ಪಿ ಕರೆಯಲಾರಂಭಿಸಿದರೆ ಆನೆ ಶಬ್ದ ಹೋಗಿ ಅದಕ್ಕೆ ಕಲ್ಲು ಶಬ್ದ ಪ್ರಾಪ್ತಿಯಾಗುತ್ತದೆ. ಭಾಷೆಗಳಲ್ಲಿ ಕೆಲವು ಸಾಮಾನ್ಯ ತತ್ವಗಳಿದ್ದರೂ ಅವುಗಳ **'ಅನುಕೂಲ್ಯ'** ಗುಣ ಮಾತ್ರ ವ್ಯಾಪಕವಾಗಿದೆ. ಒಂದು ಕಾಲಕ್ಕೆ ಅಮ್ಮ ಎಂದರೆ ಕನ್ನಡದಲ್ಲಿ ತಂದೆ ಎಬಂರ್ಥವಿತ್ತು. ಈಗದು ತಾಯಿಗೆ ಅನ್ವಯವಾಗುತ್ತದೆ. ಸೀರೆ ಗಂಡಸರು ತೊಡುವ ವಸ್ತ್ರವಾಗಿತ್ತು. ಈಗ ಅದು ಹೆಂಗಸರಿಗೆ ಮಾತ್ರ ಮೀಸಲು. ಕುನ್ನಿ ಎಂದರೆ ಮಗು ಅರ್ಥವಿದ್ದುದು ಈಗ ನಾಯಿಮರಿಗೆ ಮಾತ್ರ ಅನ್ವಯವಾಗುತ್ತದೆ. ಆದುದರಿಂದ **'ಯಾದೃಚ್ಛಿಕತೆ'** ಮಾನವಭಾಷೆಯ ಒಂದು ವಿಶಿಷ್ಟ ಲಕ್ಷಣ.

### 1.5.4 ಸ್ಥಾನಪಲ್ಲಟತೆ :

ಭಾಷೆ ಇರುವುದು ಮೂಲತಃ ಮನುಷ್ಯರ ವ್ಯವಹಾರಕ್ಕಾಗಿ, ಭಾವನೆಗಳ–ಅನಿಸಿಕೆಗಳ ವಿನಿಮಯಕ್ಕಾಗಿ. ಒಬ್ಬನು ಹೇಳಿದುದನ್ನು ಇನ್ನೊಬ್ಬ ಅರ್ಥಮಾಡಿಕೊಳ್ಳುತ್ತಾನೆ. ಅದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾನೆ. ಇದು ಸಹಜ ವಿನಿಮಯ ಗುಣ. ಹೇಳಿದುದನ್ನು ಅರ್ಥಮಾಡಿಕೊಳ್ಳುವ ವಿಶೇಷ ಪ್ರಾವಿಣ್ಯವೂ ಇದಕ್ಕೆ ಪೂರಕವಾಗುತ್ತದೆ. ಕಷ್ಟ ಇದೆ ಸ್ವಾಮಿ, ತ್ರಾಸ ಐತ್ರಿ, ಕಠಿಣ ಆದರಿ, ಮುಶಿಕಿಲ್ ಆದರಿ–ಇವು ಕರ್ನಾಟಕದ ಬೇರೆ ಬೇರೆ ಭಾಗಗಳ ಕನ್ನಡಿಗರು ಆಡುವ ಮಾತುಗಳು. ಆದರೂ ಇವುಗಳ ಅರ್ಥ ಸಾಮಾನ್ಯವಾಗಿ ಯಾವುದೇ ಕನ್ನಡಿಗನಿಗೆ ಅರ್ಥವಾಗುತ್ತದೆ. ಹೀಗೆ ಸ್ವಲ್ಪ ಹೆಚ್ಚು ಕಡಿಮೆಯಾದರೂ ಅರ್ಥಗ್ರಹಿಸುವ ಶಕ್ತಿ ಮಾನವನಿಗಿದೆ. ಎಷ್ಟೋ ಸಲ ವಸ್ತು ಕಣ್ಣ ಮುಂದೆ ಇರದಿದ್ದರೂ ಅರ್ಥಮಾಡಿಕೊಳ್ಳುತ್ತಾನೆ. ಪುಷ್ಪಕ ವಿಮಾನ, ಸಂಜೀವಿನಿಕಡ್ಡಿ, ಕಾಮ, ಸ್ವರ್ಗಲೋಕ, ಶಿವಕಾರುಣ್ಯ ಭಕ್ತಿ ಇಂತಹವು ಎಂದೂ ಕಣ್ಣಿಗೆ ಕಾಣದವು. ಆದರೂ ಇವುಗಳ ಕಲ್ಪನೆಯನ್ನು ಉಂಟುಮಾಡಿಕೊಳ್ಳಲು ಮಾನವ ಶಕ್ತನಾಗಿದ್ದಾನೆ. ಈ ರೀತಿ ಅಮೂರ್ತ ವಸ್ತುಗಳನ್ನು ಮೂರ್ತವೆಂಬಂತೆ ಮನಸ್ಸಿಗೆ ತಿಳಿವಳಿಕೆಯುಂಟುಮಾಡಿಕೊಡುವ ಈ **'ಸ್ಥಾನಪಲ್ಲಟ'**ತ್ವ ಮನುಷ್ಯ ಭಾಷೆಯ ಒಂದು ವಿಶೇಷ ಗುಣ.

### 1.5.5 ವಿಶಿಷ್ಟ ಪ್ರಾವಿಣ್ಯ :

ಮನುಷ್ಯನಿಗೆ ತಾನು ಮಾತನಾಡುವ ಭಾಷೆಯ ರಚನೆಯ ಜ್ಞಾನ ಅಂದರೆ ಅದನ್ನು ಬಳಸುವ ಬಗೆಯ ಕುರಿತು ತಿಳಿದಿರುತ್ತದೆ. ಭಾಷೆಯ ಈ ಅಂತರಾರ್ಥವನ್ನು ತಿಳಿಯದೆ ಒಮ್ಮೊಮ್ಮೆ ಹಾಸ್ಯಕ್ಕೀಡಾಗಬಹುದು. ಸಂಸ್ಕೃತದ ಮೋದಕೇನ ತಾಡಯ (ಮಾ+ಉದಕೇನ ತಾಡಯ) ಎಂಬ ವಾಕ್ಯದ ಅರ್ಥವನ್ನು ತಿಳಿಯದ ಪ್ರಿಯಕರನು ಕಡುಬುಗಳನ್ನು ತೆಗೆದುಕೊಂಡು ಪ್ರೇಯಸಿಯನ್ನು ಹೊಡೆದ ಕತೆ ನೀವು ಕೇಳಿರಬಹುದು. 'ಬಳೆಹೆಚ್ಚಿವೆ' ಎಂದು ಹೆಂಡತಿ ಹೇಳಿದಾಗ ಹೆಚ್ಚಾದರೆ ಮಾರಿ ಬಿಡೋಣವೆ? ಎಂದು ಗಂಡ ಕೇಳಿದನಂತೆ! ಹೀಗೆಯೆ ಕೈಲಾಸವಾಸಿಯಾಗು, ದೀಪ ದೊಡ್ಡದು ಮಾಡು, ಕುಂಕುಮ ಹಚ್ಚು, ಇಂತಹ ಹಲವಾರು ಪ್ರಯೋಗಗಳ ಅರ್ಥವನ್ನು ಸಂದರ್ಭಕ್ಕನುಗುಣವಾಗಿ ತಿಳಿಯದೆ ಹೋದರೆ ಭಾಷೆಯ ಅರಿವು ನಮಗೆ ಸಂಪೂರ್ಣ ಆಗಿಲ್ಲವೆಂದೇ ಅರ್ಥ. ಆದರೆ ಈ **'ವಿಶಿಷ್ಟ ಪ್ರಾವಿಣ್ಯ'** ಪಡೆಯುವ ಸಾಮರ್ಥ್ಯ ಮಾನವನಿಗಿದೆ. ಭಾಷೆ ಕೇವಲ ಧ್ವನಿ, ಶಬ್ದ, ಅರ್ಥಗಳ ಸಮೂಹವಲ್ಲ, ಅದರ ರಚನೆ ಸಂಕೀರ್ಣವಾಗಿರುತ್ತದೆ. ಮಾತೃಭಾಷೆಯಲ್ಲಿ ನಮಗೆ ಅರಿವಾಗದಂತೆ ಈ ರಚನೆ ರೂಢಿಗತವಾಗಿಬಿಡುತ್ತದೆ. ಬೇರೆ ಭಾಷೆ ಕಲಿಯುವಾಗಲೂ ಕಷ್ಟಪಟ್ಟು ಅಂಥವುಗಳನ್ನು ಅರಗಿಸಿಕೊಳ್ಳಬೇಕಾಗುತ್ತದೆ.

### 1.5.6 ಸಂಸ್ಕೃತಿವಾಹಕತೆ :

ಮಾನವನು ಪರಿಶ್ರಮದಿಂದ ಪ್ರಪಂಚದ ಯಾವುದೇ ಭಾಷೆಯ ಪ್ರಾವಿಣ್ಯ ಪಡೆಯಬಹುದು. ಅದಕ್ಕಿಂತ ಹೆಚ್ಚಾಗಿ ತಾನು ಕಲಿತ ಭಾಷೆಯನ್ನು ತನ್ನ ಮುಂದಿನ ಪೀಳಿಗೆಯವರಿಗೆ ಸುಲಭವಾಗಿ ಅವನು ಸಾಗಿಸುತ್ತಾನೆ. ತನ್ನ ಸಂಸ್ಕೃತಿಯನ್ನು ಭಾಷೆಯಲ್ಲಿ ತುಂಬಿ ಅದನ್ನು ಮುಂದಿನವರಿಗೆ ಕಟ್ಟಿಕೊಡುತ್ತಾನೆ. ತನ್ನ ಭಾಷೆಗೊಂದು ಲಿಪಿಯನ್ನು ರೂಪಿಸಿ ಅಥವಾ ಆಗಲೇ ಸಿದ್ಧವಿರುವ ಯಾವುದಾದರೂ ಲಿಪಿಯನ್ನು ಉಪಯೋಗಿಸಿಕೊಂಡು ತನ್ನ ಅನುಭವ, ಶೋಧನೆಗಳನ್ನು ಬರೆದಿಡುತ್ತಾನೆ. ಹೀಗೆ ಸಾಹಿತ್ಯ, ಧರ್ಮ, ತತ್ವ, ನೀತಿ, ಆಚಾರ-ವಿಚಾರ ವಿಜ್ಞಾನ ಮುಂತಾಗಿ ತಾನು ಕಂಡುದನ್ನು, ಅನುಭವಿಸಿದ್ದನ್ನು ಲಿಖಿತವಾಗಿಸುತ್ತಾನೆ. ತನ್ನ ಅನುಭವಗಳನ್ನು ಚಿಕ್ಕವರಿಗೆ ಬೋಧಿಸುತ್ತಾನೆ. ಚಿಕ್ಕವರು ತಾವು ದೊಡ್ಡವರಾದ ಮೇಲೆ ತಮ್ಮ ಹಿರಿಯರು ಉಪದೇಶಿಸಿದ್ದನ್ನು ಸ್ವಂತ ಅನುಭವದೊಡನೆ ಮುಂದಿನ ಪೀಳಿಗೆಯವರಿಗೆ ರವಾನಿಸುತ್ತಾರೆ. ಈ ರೀತಿ ಭಾಷಾ ಮಾಧ್ಯಮದ ಮೂಲಕ ಜ್ಞಾನವು, ಸಂಸ್ಕೃತಿಯು ನಿರಂತರವಾಗಿ ತಲೆತಲಾಂತರವಾಗಿ ಮುಂದುವರಿಯುತ್ತದೆ.

ಈ **'ಸಂಸ್ಕೃತಿವಾಹಕತೆ'** ಯ ಕೆಲಸ ಸಾಮಾನ್ಯವಾದುದಲ್ಲ. ಮನುಷ್ಯನ ಬೌದ್ಧಿಕ ಬೆಳವಣಿಗೆಗೆ ಭಾಷೆ ನೀಡಿರುವ ಕಾಣಿಕೆ ಅತ್ಯಮೌಲ್ಯವಾದುದು.

## 1.6 ಇತರ ವೈಲಕ್ಷಣ್ಯಗಳು :

ಭಾಷೆಯ ಮೂಲ ಉದ್ದೇಶವೇ ತನ್ನ ಅನಿಸಿಕೆಗಳನ್ನು ಇತರರೊಡನೆ ವಿನಿಮಯಮಾಡಿಕೊಳ್ಳುವುದಾಗಿದೆ. ಆದ್ದರಿಂದ ತಾನು ಹೇಳಿದ್ದನ್ನು ಅವರು ಕೇಳಿ, ಅವರು ಹೇಳಿದ್ದನ್ನು ತಾನು ಕೇಳಿ ಕಾರ್ಯ ಸಾಗಿಸಲು ಭಾಷೆಯ ಈ ಪರಸ್ಪರ ವಿನಿಮಯ ಗುಣವೂ ಒಂದು. ಹಾಗೆಯೇ ಧ್ವನಿ, ಧ್ವನಿಗಳ ಸಕ್ರಮವಾದ ಅನುಕ್ರಮತೆ ಆ ಅನುಕ್ರಮಿತ ಧ್ವನಿಗಳ ಅರ್ಥ, ಸೃಜನಶೀಲತೆ, ಅಧ್ಯಯನಶೀಲತ್ವ ಹೀಗೆ ಇನ್ನೂ ಕೆಲವು ಮಾನವಭಾಷಾ ವೈಲಕ್ಷಣ್ಯಗಳನ್ನು ಭಾಷಾವಿಜ್ಞಾನಿಗಳು ಹೇಳಿದ್ದಾರೆ.

ಮಾನವನ ಸಂಸ್ಕೃತಿ ನಾಗರಿಕತೆಗಳಲ್ಲಿ ಭಾಷೆ ಇಂದು ಅತ್ಯಂತ ಮಹತ್ವದ ಅಂಶವಾಗಿದೆ. ಹುಟ್ಟಿದ ಕೂಸುಗಳಲ್ಲಿ ಬಹಳಷ್ಟು ಕೂಸುಗಳು ಮಾತು ಕಲಿತೇ ಕಲಿಯುತ್ತವೆ. ಮನುಷ್ಯರು ತಮ್ಮ ಜೀವಿತದ ಅವಧಿಯ ಕೊನೆಯ ಘಳಿಗೆಯ ವರೆಗೂ ಮಾತಾಡುತ್ತಾರೆ. ಆದರೆ ಮಾತನಾಡುವವರೆಲ್ಲರೂ ತಾವು ಆಡುತ್ತಿರುವ ಭಾಷೆಯ ಬಗ್ಗೆ ಜಿಜ್ಞಾಸೆಯುಳ್ಳವರಾಗಿರುವುದಿಲ್ಲ. ಅದರ ರಚನೆಯ ತಿರುಳಿನ ಸ್ವಾರಸ್ಯವೇನೆಂಬುದು ಅವರಿಗೆ ಅರಿವಾಗದೆಯೆ ಹೋಗಬಹುದು. ಮಾತನಾಡುವವರೆಲ್ಲರಿಗೂ ಅವರಾಡುವ ಭಾಷೆಯ ರಚನೆಯ ಅಂತರಾಳ ತಿಳಿದಿರಲೇ ಬೇಕೆಂಬ ನಿಯಮವಿಲ್ಲ. ಮಕ್ಕಳನ್ನು ಹೆರುವ ಪ್ರತಿಯೊಬ್ಬ ತಾಯಿಯೂ ತನ್ನ ಗರ್ಭದಲ್ಲಿ ಕೂಸು ಹೇಗೆ ಮೂಡುತ್ತದೆ, ಅದರ ಬೆಳವಣಿಗೆಯ ಹಂತಗಳೇನು ? ಅದರ ಒಂದೊಂದು ಅಂಗವೂ ಹೇಗೆ ನಿರ್ಮಾಣವಾಗುತ್ತದೆ–ಇತ್ಯಾದಿ ವೈಚಿತ್ರ್ಯಗಳ ಬಗೆಗೆ ತಿಳಿದಿರಲೇ ಬೇಕಾಗಿಲ್ಲ. ಹೆರುವ ಕಾರ್ಯವೊಂದು ಅವಳ ಪಾಲಿಗೆ ಸಹಜ ಯಾಂತ್ರಿಕ ಕಾರ್ಯವಾಗಿ ಬಿಟ್ಟಿರಬಹುದು. ಆದರೆ ಆ ಬಗ್ಗೆ ಡಾಕ್ಟರರು ಮಾತ್ರ ವಿವರವಾಗಿ ತಿಳಿದುಕೊಂಡಿರುತ್ತಾರೆ. ಅವರಿಗೆ ಗರ್ಭಸ್ಥ ಶಿಶುವಿನ ಒಂದೊಂದು ವಾರ, ಒಂದೊಂದು ದಿನವೂ ಮಹತ್ವಪೂರ್ಣ, ಅವರ ಶೋಧನೆಗೆ, ಆಸಕ್ತಿಗೆ, ಉತ್ಸಾಹಕ್ಕೆ ಮಿತಿಯಿಲ್ಲ, ಹಾಗೆಯೆ ಎಂಜನಿಯರರಿಗೆ ಕಟ್ಟಡದ ಒಂದೊಂದು ಕಲ್ಲೂ ಮಹತ್ವದ್ದು. ಆದರೆ ಅದಕ್ಕಾಗಿ ಕಲ್ಲು ಹೊರುವ ಆಳಿಗೆ ಅದರ ಕಲ್ಪನೆ ಇಲ್ಲ, ಅಂದರೆ ವ್ಯವಹಾರ ಸರಳವಾಗಿರುವವರಿಗೆ, ಜೀವನಕ್ಕೆ ಮಿತಿ ಹಾಕಿಕೊಂಡವರಿಗೆ, ಜೀವನ ಯಾಂತ್ರಿಕವಾಗಿರುವವರಿಗೆ ಯಾವ ವಿಶೇಷ ಜ್ಞಾನದ ಆವಶ್ಯಕತೆ ಇರುವುದಿಲ್ಲ. ಕೇವಲ ಹೊಟ್ಟೆ, ನಿದ್ದೆ, ಮೈಥುನ ಇಷ್ಟರಲ್ಲೇ

ಬದುಕುವ ಪ್ರಾಣಿ-ಪಕ್ಷಿಗಳೂ ಇಂತಹ ಸುಲಭ-ಸರಳ ಯಾಂತ್ರಿಕ ಜೀವನ ನಡೆಸು ತ್ತಿವೆ. ಆದರೆ ಮಾನವ ಇದೆಲ್ಲವನ್ನೂ ಮೀರಿ ಚಿಂತನಶೀಲ ಮನಸ್ಸುಳ್ಳ ಸುಸಂಸ್ಕೃತ ವ್ಯಕ್ತಿಯಾಗಿದ್ದಾನೆ. ಅವನ ಅವಶ್ಯಕತೆ ಹೆಚ್ಚಿದಂತೆ, ಕುತೂಹಲ ಹೆಚ್ಚಿದಂತೆ ಹೊಸ ಆವಿಷ್ಕಾರಗಳನ್ನು ಮಾಡಲು ಸಾಧ್ಯವಾಗಿರುವುದು ಇದರಿಂದಲೇ, ಜ್ಞಾನ ತೃಷೆಯುಳ್ಳವರು ಒಂದೊಂದು ಕ್ಷೇತ್ರದಲ್ಲೂ ಆಳವಾಗಿ ಚಿಂತಿಸುತ್ತಾರೆ. ಇಂದು ಜೀವನ ಜಟಿಲ, ಸಂಕೀರ್ಣವಾಗಿದೆ. ಹೆಚ್ಚು ಹೆಚ್ಚು ತಿಳಿಯಬಯಸುವವ ತನ್ನಲ್ಲೇ ಹುಟ್ಟುವ ಮಾತಿನ ಬಗೆಗೂ ಚಿಂತಿಸುತ್ತಾನೆ. ಹಾಗೆ ಭಾಷೆಯ ಬಗ್ಗೆ ಚಿಂತನಶೀಲ ನಾದ ವ್ಯಕ್ತಿಯೇ ಭಾಷಾ ವಿಜ್ಞಾನಿ ಅಥವಾ ವೈಯಾಕರಣ. ಅವನು ಭಾಷೆಯ ರಚನೆಯ ತಿರುಳನ್ನು ಹಿಂಜಿ, ಹಿಂಜಿ ನೋಡುತ್ತಾನೆ. ಅದರ ವೈಚಿತ್ರ್ಯಗಳನ್ನು ವೈಶಿಷ್ಟ್ಯಗಳನ್ನು ಮುಂಡಿಡುತ್ತಾನೆ. ಅದರ ಅಂತರಾಳವನ್ನು ಬಿಚ್ಚಿ ಇಡುತ್ತಾನೆ. ಭಾಷೆಯನ್ನು ವಿವರಿಸುವುದು ಸುಲಭದ ಕೆಲಸವಲ್ಲ,ಅದಕ್ಕಾಗಿ ವಿಶೇಷ ಪರಿಣತಿ ಬೇಕು.

## 1.7 ಭಾಷಾವಿಜ್ಞಾನದ ವ್ಯಾಪ್ತಿ ಹಾಗೂ ಮಹತ್ವ :

"ಮನುಷ್ಯನನ್ನು ಕುರಿತು ಏನನ್ನು ತಿಳಿಯಬೇಕಾದರೂ ಅವನ ಭಾಷೆಯನ್ನು ಮೊದಲು ತಿಳಿ" ಎಂಬುದು ಜಗತ್‌ಪ್ರಸಿದ್ಧ ಭಾಷಾವಿಜ್ಞಾನಿ ಲಿಯೋನಾರ್ಡ ಬ್ಲೂಮ ಫೀಲ್ಡನ ಗಟ್ಟಿಯಾದ ಅಭಿಪ್ರಾಯ "In order to observe a human group we must understand its speech ....... In order to know anything about mankind, we must study language. What little we know about man has come from study of this kind; withouts such knowledge, we are slaves, in this matter, to rationalization, prejudice, and superstition" ಎಂಬುದೇ ಅವನ ಸ್ಪಷ್ಟ ಘೋಷಣೆ. ಭಾಷೆಯನ್ನು ಅಭ್ಯಸಿಸುವುದೆಂದರೆ ಜನ ಪದವ ನಾಲಗೆಯು ಮೇಲಾಡುವ ಜೀವಂತ ಸಂಸ್ಕೃತಿಯನ್ನು ಅಭ್ಯಸಿಸಿದಂತೆಯೆ. "ವ್ಯಾಕರಣದಿಂದ ಪದಂ, ಪದದಿಂ ಅರ್ಥಾಲೋಕಂ, ಅರ್ಥಾಲೋಕದಿಂ ತತ್ವ ಜ್ಞಾನಂ, ತತ್ತ್ವಜ್ಞಾನದಿಂ ಆಕಾಂಕ್ಷಿಪ ಮುಕ್ತಿಯಕ್ಕುಂ"ಎಂದು ಕೇಶಿರಾಜನು ಹೇಳಿ ರುವುದು ಇದಕ್ಕಾಗಿಯೆ. ಭಾಷಾವಿಜ್ಞಾನಿಯಾಗುವುದೊಂದು ಆಸಕ್ತಿಯ ವಿಷಯು. ಯಾಕೆಂದರೆ ಭಾಷಾವಿಜ್ಞಾನ ಜೀವಂತ ವಿಷಯು. ಕ್ಷಣ ಕ್ಷಣಕ್ಕೂ ಆಸಕ್ತಿಯನ್ನು ಕೆರಳಿಸುವ ವಿಷಯು. ಸೃಷ್ಟಿಯಲ್ಲಿಯ ಪಕ್ಷಿಗಳನ್ನು ನಿರೀಕ್ಷಿಸುವಂತೆ ಶಬ್ದಗಳನ್ನು ನಿರೀಕ್ಷಿಸುವುದೊಂದು ರಮಣೀಯ ಕಾರ್ಯವೇ, ಜನರು ಹೆಚ್ಚಾಗಿ ಆರ್ಥಿಕ ಲಾಭ ತರುವ, ಸಾಮಾಜಿಕ ಗೌರವತರುವ ವೃತ್ತಿಗಳನ್ನು ಕೈಕೊಳ್ಳಲು ಅನುಕೂಲವಾಗುವ

ಜ್ಞಾನ ಶಾಖೆಗಳ ಕಡೆಗೆ ಹೆಚ್ಚಾಗಿ ಧಾವಿಸುತ್ತಾರೆ. ಡಾಕ್ಟರ್, ಇಂಜಿನಿಯರ್, ರಾಜಕೀಯ ಪುಢಾರಿ ಆಗಲು ಹವಣಿಸುತ್ತಾರೆ. ಆದರೆ ಭಾಷಾ ವಿಜ್ಞಾನಿಯಾಗಲು ಯಾರೂ ಹಾತೊರೆಯುವುದಿಲ್ಲ. ಅದಕ್ಕೆ ಕಾರಣವೆಂದರೆ ಭಾಷೆಯ ಜೊತೆ ಕುಸ್ತಿ ಹಿಡಿಯುವುದು ಅನಿಶ್ಚಿತ ವ್ಯವಹಾರ. ನಿತ್ಯ ಬದಲಾಗುವ ಭಾಷೆಯನ್ನು ತೆಕ್ಕೆಗೆ ಆಳವಡಿಸುವುದು ಸಾಹಸದ ಮಾತೇ ಸರಿ. ಆದರೆ ಮಾನವನ ಆಸಕ್ತಿ ನಿರಂತರ ವಾದುದ್ದು. ಪ್ರಪಂಚದಲ್ಲಿ ಹಲವಾರು ಜನ ಭಾಷಾವಿಜ್ಞಾನಿಗಳು ಮಾನವ ಭಾಷೆಯ ಅಧ್ಯಯನದಲ್ಲಿ ಕಾಲಕಾಲಕ್ಕೆ ತೊಡಗೇ ಇರುತ್ತಾರೆ. ಜ್ಞಾನಕ್ಕೆ ಸೀಮೆ ಯಿಲ್ಲ, ಭಾಷೆ ನಿರಂತರವಾಗಿ ಬದಲಾಗುತ್ತ ಹೋಗುವುದರಿಂದಲೇ ಅದನ್ನು ಅಭ್ಯಸಿಸುವುದೊಂದು ಸಾಹಸದ ಕಾರ್ಯವಾಗಿದೆ, ಆಸಕ್ತಿಯ ಕೇಂದ್ರವಾಗಿದೆ.

ಸಾಹಿತ್ಯದ ಸತ್ವ ಭಾಷೆಯಿಂದಲೇ ಪ್ರಕಟವಾಗುತ್ತದೆ. ಅಲಂಕಾರ, ಛಂದಸ್ಸು, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ, ವಿಮರ್ಶೆ, ವ್ಯಾಕರಣ ಇವುಗಳ ಲ್ಲೆಲ್ಲ ಶಾಸ್ತ್ರಾಂಶವೇ ಹೆಚ್ಚು. ಬುದ್ಧಿಯ ಕಾರ್ಯಕ್ಕೆ ಇಲ್ಲಿ ಪ್ರಾಶಸ್ತ್ಯ. ಆದರೆ ಇವೆಲ್ಲವೂ ಸಾಹಿತ್ಯಾಭ್ಯಾಸಕ್ಕೆ ಪೂರಕ ಪ್ರೇರಕ. ಡಿ. ಎಲ್. ನರಸಿಂಹಾಚಾರ್ಯರು ಒಂದೆಡೆ 'ಸಾಹಿತ್ಯಾಭ್ಯಾಸಿಯ ಬುದ್ಧಿ ವಿಕಾಸಕ್ಕೆ ಇರುವ ಏಕೈಕ ಸಾಧನವೆಂದರೆ ವಿಜ್ಞಾನ' ಎಂಬುದನ್ನಿಲ್ಲಿ ಸ್ಮರಿಸಬಹುದು.

ಭಾಷಾಶಾಸ್ತ್ರವನ್ನು ಅಭ್ಯಸಿಸುವುದರಿಂದ ವ್ಯವಸ್ಥಿತ ರೀತಿಯಲ್ಲಿ ಆಲೋಚನೆ ಮಾಡುವ ಶಿಸ್ತಿನ ಕ್ರಮಕ್ಕೆ ಬುದ್ಧಿ ಅಳವಡುತ್ತದೆ. ಶಬ್ದ ನಿರ್ಮಾಣಶಕ್ತಿ ಉಂಟಾ ಗುತ್ತದೆ. ಭಾಷಾಧ್ಯಯನವೆಂದರೆ ಒಂದು ಬಗೆಯಲ್ಲಿ ಆ ಭಾಷೆಯನ್ನಾಡುವ ಜನಾಂಗ ಹಾಗೂ ಸಂಸ್ಕೃತಿಯ ಅಧ್ಯಯನವೇ ಸರಿ. ಅಂತೆಯೇ ಭಾಷಾಧ್ಯಯನ ದಿಂದ ಆ ಐತಿಹಾಸಿಕ ಸಂಸ್ಕೃತಿಯ ಮೇಲೆ ಹೊಸಬೆಳಕು ಬೀರಲವಕಾಶವಾಗುತ್ತದೆ ಭಾಷೆಯ ಅಭ್ಯಾಸದಿಂದ ಭಾಷೆಯ ಬಗೆಗಿದ್ದ ಅಂಧ ವಿಶ್ವಾಸಗಳು ಅನಾವಶ್ಯಕ ಅಭಿಮಾನಗಳು ದೂರಾಗಿ ಸೌಹಾರ್ದಭಾವನೆ ಉಂಟಾಗುತ್ತದೆ. ಬೇರೆ ಬೇರೆ ಭಾಷೆಗಳನ್ನು ಸುಲಭದಲ್ಲಿ ಕಲಿಯಬಹುದಾದ ಸಾಮರ್ಥ್ಯವನ್ನು ಭಾಷಾಶಾಸ್ತ್ರ ತಂದುಕೊಡುತ್ತದೆ. ಆಧುನಿಕ ಭಾಷಾವಿಜ್ಞಾನದ ಜ್ಞಾನ ಉಳ್ಳವನು ಕೇವಲ ಆರುವಾರಗಳ ಅವಧಿಯಲ್ಲಿ ಜಗತ್ತಿನ ಯಾವುದೇ ಭಾಷೆಯನ್ನು ವ್ಯವಹಾರಕ್ಕೆ ಅವಶ್ಯವಿದ್ದಷ್ಟನ್ನು ಕಲಿಯಬಹುದು. ವಿಶ್ವಕ್ಕೆ ಒಂದೇ ಭಾಷೆಯನ್ನು ನಿರ್ಮಿಸಲು ಭಾಷಾವಿಜ್ಞಾನ ಸಹಾಯಕಾರಿ. ಭಾಷಾವಿಜ್ಞಾನದ ಅಧ್ಯಯನದಿಂದ ಭಾಷೆ ಹಾಗೂ ಲಿಪಿಗಳ ಸುಧಾರಣೆ ಮಾಡಲನುಕೂಲವಾಗುತ್ತದೆ. ಭಾಷಾಸಮಸ್ಯೆಗಳ ಕಗ್ಗಂಟು

ಪಡಿಲು ಮಾಡಬಹುದು. ಭಾಷಾಶಾಸ್ತ್ರದ ಅಭ್ಯಾಸದಿಂದ ಗ್ರಂಥಸಂಪಾದನಾ ಕಾರ್ಯದಲ್ಲಿ ನೆರವಾಗುತ್ತದೆ. ನಾವು ನಿತ್ಯ ಆಡುವ ಭಾಷಾವೈಚಿತ್ರ್ಯಗಳ ನಿಜಾಂಶದ ಅರಿವು ನಮಗೆ ಆಗಿ ವಿಶಿಷ್ಟ ಆನಂದವೂ ದೊರೆಯುತ್ತದೆ. "ಒಲಿದ ನಲ್ಲನಿಗೆ ಪ್ರಿಯತಮೆ ತನ್ನ ಸರ್ವಾಂಗವನ್ನು ತೆರೆದು ಒಪ್ಪಿಸುವಂತೆ ಉತ್ತಮ ಪಂಡಿತನಿಗೆ ಭಾಷೆಯೂ ತನ್ನ ಸರ್ವಸ್ವವನ್ನು ತೆರೆದು ತೋರುತ್ತದೆ" ಎಂಬ ಒಂದು ಹೇಳಿಕೆ ಇದೆ. ಆದರೆ, ಶಕ್ತಿಯ ಪರಿಮಿತಿಯುಳ್ಳ ಮಾನವನಿಂದ ಈ ವರ್ಣಮಯ ಭಾಷಾ ಜಗತ್ತಿನ ಎಳೆ ಎಳೆಯನ್ನು ಬಿಡಿಸಿ ಜಯಶೀಲನಾಗುವುದು ಸಾಧ್ಯವಿಲ್ಲ. ಆದರೆ ಆ ಕಾರ್ಯದಲ್ಲಿ ತೊಡುಗುವುದು ಮಾತ್ರ ಒಂದು ಅದ್ಭುತ ರಮ್ಯ ಸಾಹಸ" ೧

ಭಾಷಾವಿಜ್ಞಾನ ಇಂದು ಕೇವಲ ಭಾಷಾಧ್ಯಯನಕ್ಕೆ ಮಾತ್ರ ಸೀಮಿತವಾಗಿ ಉಳಿದಿಲ್ಲ. ಹಲವಾರು ಕ್ಷೇತ್ರಗಳಲ್ಲಿ ಅದರ ಪ್ರಯೋಜನ ಲಭಿಸುತ್ತಿದೆ. ಜಾನಪದ ಅಧ್ಯಯನಕ್ಕೆ, ಸಮಾಜಸಾಸ್ತ್ರ, ಮಾನವಶಾಸ್ತ್ರ, ಮನಶಾಸ್ತ್ರ, ಶೈಲಿಶಾಸ್ತ್ರ (Stylistics) ಮುಂತಾದವುಗಳ ಅಧ್ಯಯನಕ್ಕೆ ಭಾಷಾವಿಜ್ಞಾನ ಹೊಸ ಆಯಾಮ ಒದಗಿಸುವಲ್ಲಿ ಶಕ್ತವಾಗಿದೆ. ಸಾಹಿತ್ಯಕ್ಕೆ ಭಾಷೆಯೇ ಮೂಲ ತಳಹದಿ. ಭಾಷೆ ಯಿಲ್ಲದೆ ಸಾಹಿತ್ಯ ಸಾಧ್ಯವೇ ಇಲ್ಲ. ಆದರೆ ಸಾಹಿತ್ಯವಿಲ್ಲದೆ ಭಾಷೆ ನಿರಾತಂಕವಾಗಿ ಜೀವಿಸುತ್ತದೆ. ಸಾಹಿತ್ಯದ ಅಭ್ಯಾಸಿಗಳಿಗೆ ಭಾಷಾಭ್ಯಾಸವೊಂದು ಹೆಚ್ಚಿನ ಹೊರೆ ಎಂದು ಕೆಲವರು ತಿಳುವಳಿಕೆಹೀನರಾಗಿ ನುಡಿಯುತ್ತಾರೆ. ಭಾಷೆ ಸಾಹಿತ್ಯದ ಜೀವನಾಡಿ. ಭಾಷೆ ಸತ್ತ ಮರುದಿನವೇ ಸಾಹಿತ್ಯದ ಜೀವನಕ್ಕೂ ಕೊನೆ. ಆದ್ದರಿಂದ ಭಾಷಾಧ್ಯಯನವಿಲ್ಲದೆ ಸಾಹಿತ್ಯಾಧ್ಯಯನ ಸಂಪೂರ್ಣವೆನಿಸುವುದೇ ಇಲ್ಲ.

1.8 ಭಾಷಾಭ್ಯಾಸಂಗ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಿಂದ ಇತ್ತೀಚೆ ಅತ್ಯಾಧುನಿಕ ಬಗೆಯಲ್ಲಿ ಮುನ್ನಡೆದಿದೆ. ಸಾಂಪ್ರದಾಯಿಕ ವ್ಯಾಕರಣ ಪದ್ಧತಿ. ಆಧುನಿಕ ವ್ಯಾಕರಣ ಪದ್ಧತಿಗಳಲ್ಲಿ ಅಂತರವಿದೆ. ಪರಂಪರಾಗತ ವ್ಯಾಕರಣಗಳು ಆಜ್ಞಾಸ್ವರೂಪವವು (Prescriptive). ಸಂಸ್ಕೃತಭಾಷೆಯ ವ್ಯಾಕರಣ ಮಾದರಿ ಯನ್ನಿಟ್ಟುಕೊಂಡು ಸಂಸ್ಕೃತದ ಹಿನ್ನೆಲೆಯಲ್ಲಿ ಕನ್ನಡಕ್ಕೆ ಸಂಬಂಧಿಸಿದಂತೆ ನಿಯಮ ಗಳನ್ನು ನಮ್ಮ ಹಳೆಯ ವ್ಯಾಕರಣಗಳು ರಚಿಸಿವೆ. ನಿಯಮಗಳಿಗೆ ಉದಾಹರಣೆ ಗಳನ್ನು ಹುಡುಕಿಡುವ ಕಾರ್ಯವನ್ನು ಇವು ಮಾಡಿದವೆ ಹೊರತು ಭಾಷೆಯ ರಚನೆಯನ್ನು ಗಮನಿಸಿ ನಿಯಮಗಳನ್ನು ರಚಿಸಲಿಲ್ಲ. ಭಾಷೆಯಲ್ಲಿ ಇದು ತಪ್ಪು ಇದು ಒಪ್ಪು ಎಂಬ ನಿರ್ಣಯ ನೀಡುವುದಲ್ಲದೆ ಭಾಷೆ ಹೀಗೆಯೇ ಇರಬೇಕು

---

೧. ಕೆ. ಕುಶಾಲಪ್ಪಗೌಡ-ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ-ಪುಟ 12.

ಎಂದು ಪ್ರಾಚೀನ ವ್ಯಾಕರಣಗಳು ಅಭಿಪ್ರಾಯಪಡುತ್ತಿದ್ದವು. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ 'ಗ್ರಾಮ್ಯರ್ ಅೞಿಯದುಚ್ಚರಿಸುವರ್ ಕುಳಾಂನ ಪ್ರಮೆಯಿಂ........'ಅ' ದಡ್ಡಕ್ಕರ ರೇಫೆಯುಂ ಅೞನಾಗುಚ್ಚರಿಸಲಾಗದು....' ಈ ಮುಂತಾದ ಹೇಳಿಕೆಗಳು ಇದನ್ನು ಸ್ಪಷ್ಟಪಡಿಸುತ್ತವೆ. ಪರಂಪರಾಗತ ವ್ಯಾಕರಣಗಳು ಆಡುನುಡಿಗೆ ಮಹತ್ವ ನೀಡದೆ ಗ್ರಂಥಸ್ಥ ಭಾಷೆಗೆ ಹೆಚ್ಚು ಗಮನ ನೀಡುತ್ತಿದ್ದವು. ಶಬ್ದಶಾಸ್ತ್ರಕ್ಕೆ ಹೆಚ್ಚು ಒತ್ತುಕೊಡುತ್ತಿದ್ದವು. ಗ್ರಂಥಸ್ಥ ಭಾಷೆಯು ಶಿಷ್ಟಭಾಷೆಯಾಗಿದ್ದರಿಂದ ಜೀವಂತ ಭಾಷೆಯ ರಚನಾತ್ಮಕ ಅಂಶಗಳ ವಿವರಣೆಗೆ ಅಲ್ಲಿ ಅವಕಾಶ ದೊರೆಯಲಿಲ್ಲ.

ಜನರ ನಾಲಗೆಯ ಮೇಲೆ ಭಾಷೆ ಜೀವಂತವಾಗಿರುತ್ತದೆ. ಅದರ ಬೆಳವಣಿಗೆ ಹಾಗೂ ಬದಲಾವಣೆಗಳನ್ನು ತೀವ್ರವಾಗಿ ಖಚಿತವಾಗಿ ಈ ಸಜೀವ ಭಾಷೆಯಲ್ಲಿ ಕಂಡುಕೊಳ್ಳಬಹುದಾಗಿದೆ. ಆದ್ದರಿಂದ ಆಧುನಿಕ ಭಾಷಾವಿಜ್ಞಾನ ಗ್ರಂಥಸ್ಥವಾದ ಶಿಷ್ಟ ಭಾಷೆಗಿಂತ ಆಡುನುಡಿಗೆ ಹೆಚ್ಚು ಆದ್ಯತೆ ನೀಡುತ್ತದೆ. ಒಂದು ಭಾಷೆಯನ್ನು ವಿವರಿಸುವಾಗ ಮತ್ತೊಂದು ಭಾಷೆಯ ನಿಯಮಗಳನ್ನು ಅವು ಆಧಾರವಾಗಿ ಇಟ್ಟುಕೊಳ್ಳುವುದಿಲ್ಲ, ಅಥವಾ ಹೋಲಿಸುವುದಿಲ್ಲ. ಆಧುನಿಕ ವ್ಯಾಕರಣಗಳು ಭಾಷಾವಿಜ್ಞಾನದ ತತ್ವಗಳ ಆಧಾರಗಳಿಂದ ರಚಿಸಲ್ಪಡುತ್ತವೆ. ಭಾಷೆಯಲ್ಲಿ ಬಳಕೆಯಲ್ಲಿರುವ ರೂಪಗಳು ತಪ್ಪು-ಒಪ್ಪು, ಹೀಗೆ ಇರಬೇಕಾಗಿತ್ತು, ಹೀಗೆ ಇರಬಾರದಾಗಿತ್ತು ಎಂದು ಅಭಿಪ್ರಾಯಪಡುವುದಿಲ್ಲ. ಭಾಷೆ ವಾಸ್ತವಿಕವಾಗಿ ಹೇಗೆ ಇದೆಯೋ ಹಾಗೆಯೇ ಅದನ್ನು ವ್ಯವಸ್ಥಿತವಾಗಿ ವಿವರಿಸುವುದು ಆಧುನಿಕ ವ್ಯಾಕರಣಗಳ ಉದ್ದೇಶ.

## 1.9 ವ್ಯಾಕರಣ ಪ್ರಕಾರಗಳು :

ಆಧುನಿಕ ವ್ಯಾಕರಣಗಳನ್ನು ಮೂರು ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ. ೧) ವರ್ಣನಾತ್ಮಕ ವ್ಯಾಕರಣ ೨) ಐತಿಹಾಸಿಕ ವ್ಯಾಕರಣ ೩) ತೌಲನಿಕ ವ್ಯಾಕರಣ.

### 1.9 1 ವರ್ಣನಾತ್ಮಕ ವ್ಯಾಕರಣ :

ಒಂದು ನಿರ್ದಿಷ್ಟ ಕಾಲದ ಒಂದು ನಿರ್ದಿಷ್ಟ ಪ್ರದೇಶದ ಒಂದು ಭಾಷೆಯ ವಿವರಣೆಯನ್ನು ಒಳಗೊಂಡಿರುವುದೇ **ವರ್ಣನಾತ್ಮಕ ವ್ಯಾಕರಣ.** ಭಾಷೆಯನ್ನು ಆಧುನಿಕ ಭಾಷಾವಿಜ್ಞಾನದ ತತ್ವಗಳಂತೆ ವರ್ಣನಾತ್ಮಕ ವ್ಯಾಕರಣದಲ್ಲಿ ಇದ್ದಕ್ಕಿದ್ದಂತೆ ವರ್ಣಿಸಲಾಗಿರುತ್ತದೆ. ಅಲ್ಲಿ ಭಾಷೆಯ ವ್ಯವಸ್ಥೆಯನ್ನು ಕಂಡು

ಹಿಡಿದು ಅದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿರುತ್ತದೆ. ವರ್ಣನಾತ್ಮಕ ವ್ಯಾಕರಣವು ಸಾಮಾನ್ಯವಾಗಿ ಆಡುನುಡಿಯ ವಿವರಣೆಯನ್ನು ಒಳಗೊಂಡಿರುತ್ತದೆ. ಆದರೆ ಗ್ರಂಥಸ್ಥ, ಶಾಸನೋಕ್ತ ಭಾಷೆಯನ್ನೂ ವಿವರಿಸುವ ವರ್ಣನಾತ್ಮಕ ವ್ಯಾಕರಣಗಳು ಬಂದಿವೆ. (ನೋಡಿ 3.4.1.5) ವರ್ಣನಾತ್ಮಕ ವ್ಯಾಕರಣಕಾರನು ಮೊದಲು ತಾನು ವಿಶ್ಲೇಷಿಸಲಿರುವ ಭಾಷೆಯ ಧ್ವನಿಮಾಸಗಳನ್ನು ಕಂಡು ಹಿಡಿಯುತ್ತಾನೆ. ಅವುಗಳ ಪರಿಸರ, ಬಳಕೆಯ ವಿಧಾನ, ಪ್ರಸಾರ, ಉಚ್ಚಾರದ ಏರಿಳಿತ ಇತ್ಯಾದಿ ವಿವರಗಳೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ವಿವರಿಸುತ್ತಾನೆ. ಎರಡನೆಯ ಭಾಗದಲ್ಲಿ ಆಕೃತಿಮಾಗಳಿಗೆ ಸಂಬಂಧಿಸಿದ ವಿಶ್ಲೇಷಣೆ ಇರುತ್ತದೆ. ಅರ್ಥವನ್ನು ಒಳಗೊಂಡಿರುವ ಅತಿ ಕನಿಷ್ಠ ಹಾಗೂ ಅವುಗಳ ಸಮೂಹದಿಂದ ಕೂಡಿದ ಶಬ್ದಗಳೆಲ್ಲವನ್ನೂ ಅವು ವಾಕ್ಯಗಳಲ್ಲಿ ಪ್ರಯೋಗವಾಗುವ ಬಗೆಯನ್ನೂ ಸಾದ್ಯಂತವಾಗಿ ವಿಶ್ಲೇಷಣೆಗೆ ಒಳಪಡಿಸುತ್ತಾನೆ. ನಿರ್ದಿಷ್ಟ ನಿಯಮಗಳಲ್ಲಿ ಎಲ್ಲವನ್ನೂ ಹಿಡಿದಿಡುತ್ತಾನೆ. ಮೂರನೆಯ ಭಾಗದಲ್ಲಿ ವಾಕ್ಯವಿಶ್ಲೇಷಣೆ ಒಳಗೊಳ್ಳುತ್ತದೆ. ವಾಕ್ಯಗಳ ಎಲ್ಲ ಪ್ರಕಾರಗಳನ್ನು ಅವುಗಳಲ್ಲಿ ಅಂತರ್ಗತ ಭಾಷಾ ವ್ಯಾಪಾರವನ್ನೆಲ್ಲ ಈ ವಿಭಾಗ ವರ್ಣಿಸುತ್ತದೆ. ಆಧುನಿಕ ಭಾಷಾವಿಜ್ಞಾನ ಇಂದು ಬಹಳಷ್ಟು ಮುಂದುವರಿದಿದೆ. ವಾಕ್ಯಶಾಸ್ತ್ರ, ಆಕೃತಿಮಾಶಾಸ್ತ್ರ, ಧ್ವನಿಮಾಶಾಸ್ತ್ರ; ಧ್ವನಿಶಾಸ್ತ್ರ, ಅರ್ಥಶಾಸ್ತ್ರ, ಶೈಲಿಶಾಸ್ತ್ರ ಹೀಗೆ ಒಂದೊಂದು ವಿಭಾಗದಲ್ಲಿಯೂ ಭಾಷೆಯ ಸಮಗ್ರ ವಿಶ್ಲೇಷಣೆಯನ್ನು ಎಳೆ ಎಳೆಯಾಗಿ ಸುವ್ಯವಸ್ಥಿತವಾಗಿ ಬಿಡಿಸಿ ತೋರಿಸಬಹುದಾಗಿದೆ. ಭಾಷೆಯ ಎಲ್ಲ ಸಾಧ್ಯತೆಗಳನ್ನೂ ತೀರ ಖಚಿತವಾಗಿ ವಿವರಿಸುವುದು ಅಸಾಧ್ಯವಾದರೂ ಆಧುನಿಕ ಭಾಷಾವಿಜ್ಞಾನ ಆ ದಿಸೆಯಲ್ಲಿ ಬಹಳಷ್ಟು ಸಾಧಿಸಿ ತೋರಿಸಿದೆ. ಡಾ. ಆರ್. ಸಿ. ಹಿರೇಮಠ ಅವರ **The Structure of Kannada** ಆಧುನಿಕ ವರ್ಣನಾತ್ಮಕ ವ್ಯಾಕರಣಕ್ಕೆ ಉತ್ತಮ ಉದಾಹರಣೆಯಾಗಿದೆ.

### 1.9.2 ಐತಿಹಾಸಿಕ ವ್ಯಾಕರಣ :

ಬೇರೆಬೇರೆ ಕಾಲದ ಬೇರೆಬೇರೆ ಪ್ರದೇಶದ ಒಂದೇ ಭಾಷೆಯ ಪ್ರಕ್ರಿಯೇ ಯಾವ ಯಾವ ರೀತಿಯಲ್ಲಿ ಬದಲಾಗುತ್ತ ನಡೆದಿದೆ ಎಂಬುದನ್ನು ವಿವೇಚಿಸುವ ವ್ಯಾಕರಣವೇ ಐತಿಹಾಸಿಕ ವ್ಯಾಕರಣವೆನಿಸಿಕೊಳ್ಳುತ್ತದೆ. ಒಂದು ಭಾಷೆಯ ಬೇರೆ ಬೇರೆ ಅವಸ್ಥೆಗಳನ್ನು ಇಲ್ಲಿ ವಿವರಿಸಲಾಗುತ್ತದೆ. ನಮ್ಮ ಪ್ರಾಚೀನ ವ್ಯಾಕರಣಗಳು ಒಂದು ಬಗೆಯಲ್ಲಿ ಈ ಕಾರ್ಯವನ್ನು ಮಾಡಿವೆಯೆನ್ನಬಹುದು. ಕೇಶಿರಾಜ ಮುಂತಾದ ವೈಯಾಕರಣರು ತಮ್ಮ ಪೂರ್ವಜರ ಗ್ರಂಥಗಳಲ್ಲಿ ಬಳಕೆಗೊಂಡ

ಭಾಷೆಯನ್ನೇ ಗಮನಿಸಿ ವ್ಯಾಕರಣ ರಚಿಸಿದ್ದಾರೆ. ಐತಿಹಾಸಿಕ ವ್ಯಾಕರಣ ಗ್ರಂಥಸ್ಥ ಭಾಷೆಯನ್ನೇ ಅವಲಂಬಿಸುವುದು ಅನಿವಾರ್ಯವಾಗಿದೆ. ಆದರೆ ಸಂದರ್ಭಾನುಸಾರವಾಗಿ ಸನ್ನಿವ ಭಾಷೆಯೊಡನೆ ಹಿಂದಿನ ಬೇರೆ ಬೇರೆ ಕಾಲದ ಭಾಷೆಯನ್ನು ಹೋಲಿಸಿಯೂ ವಿವರಿಸಬಹುದು. ಐತಿಹಾಸಿಕ ವ್ಯಾಕರಣದಲ್ಲೂ ಪ್ರಕರಣ ವಿಭಜನೆ ಸಾಮಾನ್ಯವಾಗಿ ವರ್ಣನಾತ್ಮಕ ವ್ಯಾಕರಣದಲ್ಲಿರುವಂತೆಯೆ ಇರುತ್ತದೆ.

### 1.9.3 ತೌಲನಿಕ ವ್ಯಾಕರಣ :

ಒಂದೇ ಮೂಲಮಾತೃಕೆಯುಳ್ಳ ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಕಾಲದಲ್ಲಿ ತೋರುವ ಸಾಮ್ಯ-ವೈಷಮ್ಯಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸುವುದು **ತೌಲನಿಕ ವ್ಯಾಕರಣ** ವೆನಿಸಿಕೊಳ್ಳುತ್ತದೆ. ಬೇರೆ ಬೇರೆ ಭಾಷೆಗಳು ಕಾಲಕಾಲಕ್ಕೆ ಸಮಾನವಾಗಿ ಅಥವಾ ಭಿನ್ನವಾಗಿ ಬೆಳಸಿಕೊಂಡು ಬಂದ ಭಾಷಿಕ ಅಂಶಗಳನ್ನು ತುಲನಾತ್ಮಕ ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಿಸುವುದರಿಂದ ಅವುಗಳ ರಚನೆಯ ಬೆಳವಣಿಗೆಯ ಸ್ಪಷ್ಟ ಕಲ್ಪನೆಯುಂಟಾಗಿ ಮೂಲ ಭಾಷೆಯ ಪುನರ್ರಚನೆ ಸುಲಭವಾಗುತ್ತದೆ. ಆ ಭಾಷೆಗಳ ಮೂಲ ಸ್ವರೂಪವನ್ನು ಗುರುತಿಸಲು ಅನುಕೂಲವಾಗುತ್ತದೆ. ಕಾಲ್ಡ್‌ವೆಲ್ ಅವರ ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ ಈ ದಿಶೆಯಲ್ಲಿ ಮೂಡಿಬಂದ ಮೊದಲನೆಯ ವ್ಯಾಕರಣ. ತೌಲನಿಕ ವ್ಯಾಕರಣದಲ್ಲಿ ಭಾಷೆಗಳಲ್ಲಿರುವ ಹೋಲಿಕೆಗಳನ್ನಲ್ಲದೆ ಪರಸ್ಪರ ಭಿನ್ನತೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ. ಇದರಿಂದ ಭಾಷಾ ಕುಟುಂಬಗಳನ್ನು ಗುರುತಿಸಿ ಸೂಕ್ಷ್ಮವಾಗಿ ಭಾಷೆಗಳನ್ನು ಉಪಗುಂಪುಗಳಲ್ಲಿ ವರ್ಗೀಕರಿಸಬಹುದಾಗಿದೆ. ತೌಲನಿಕ ಅಧ್ಯಯನದಿಂದಾಗಿ ಜಗತ್ತಿನ ಹಲವಾರು ಭಿನ್ನ ಭಿನ್ನ ಭಾಷಾವರ್ಗಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದೆ.

1.10 ಭಾಷೆಯ ಅಧ್ಯಯನವನ್ನು ಹೀಗೆ ಮುಖ್ಯವಾಗಿ ಮೂರು ವ್ಯಾಕರಣಗಳ ರೀತಿಯಲ್ಲಿ ಕೈಕೊಳ್ಳಲಾಗುವುದಾದರೂ ಭಾಷಾವಿಜ್ಞಾನ ಇಂದು ಭಾಷೆಯನ್ನು ವಿವಿಧ ವೈಜ್ಞಾನಿಕ ಪದ್ಧತಿಗಳಿಗನುಸಾರವಾಗಿ ವಿಶ್ಲೇಷಣೆಗೆ ಒಳಪಡಿಸುತ್ತಿದೆ. ಅನ್ವಯಿಕ ಭಾಷಾವಿಜ್ಞಾನ ಶಾಖೆಯಲ್ಲಿ, ಸಾಮಾಜಿಕ (Socio) ಮನೋವೈಜ್ಞಾನಿಕ ( Psycho),ಮಾನವಿಕ(Anthropological), ಗಣಕ(Computational) ಜೈವಿಕ (Bio), ವೈದೃಶ್ಯಾತ್ಮಕ (Contrastive) ಕ್ಷೇತ್ರೀಯ (Field), ಗಣಿತೀಯ (Mathematical), ಕ್ರಿಯಾತ್ಮಕ (Functional) ಶೈಲೀಯ (Stylistic) ಮುಂತಾದ ಬೇರೆ ಬೇರೆ ವಿಭಾಗಗಳಲ್ಲಿ ಭಾಷೆಯ ಅಧ್ಯಯನ ನಡೆಯುತ್ತಿದೆ.

1.11 ಆಧುನಿಕ ಭಾಷಾವಿಜ್ಞಾನದ ತತ್ವಗಳ ಸಿದ್ಧಾಂತಗಳ ವಿವಿಧ ಶಾಖೆಗಳು ವಿದೇಶಿ ವಿದ್ವಾಂಸರಿಂದ ಆರಂಭಗೊಂಡು ಬೆಳೆದುಬಂದಿವೆ. ವಿಲ್ಯಂಜೋನ್ಸ (1786) ಭಾಷೆಯನ್ನು ಸೂಕ್ಷ್ಮಪರೀಕ್ಷಣೆಗೆ, ವಿಶ್ಲೇಷಣೆಗೆ ಒಳಪಡಿಸಿ ಸಾಮಾನ್ಯ ತತ್ತ್ವಗಳಲ್ಲಿ ವಿವರಣೆಗಳನ್ನು ಮುಂದಿಡುವ ಮಾರ್ಗವನ್ನು ತೋರಿದನು. ಅಲ್ಲಿಂದ ಎಫ್. ಡಿ. ಸಸ್ಸೂರನು ೧೯ನೆಯ ಶತಮಾನದಲ್ಲಿ ಭಾಷಾ ಅಧ್ಯಯನದ ಹೊಸ ತತ್ತ್ವಗಳನ್ನು ಬಳಕೆಗೆ ತಂದನು. ಆಡುನುಡಿಗೆ ಹೆಚ್ಚಿನ ಗಮನ, ಭಾಷಾಸಂಕೇತಗಳ ವಿವರಣೆ ಮುಂತಾದವುಗಳಿಂದ ಒಂದು ಬಗೆಯ Continental Traditionಪ್ರಾರಂಭಿಸಿದ ಕೀರ್ತಿ ಇವನಿಗಿದೆ. ಅಮೇರಿಕೆಯ ಪರಂಪರೆಯವರೆಂದು ಕರೆಯಿಸಿಕೊಳ್ಳುವವರಲ್ಲಿ ಎಡ್ವರ್ಡಸಪೀರ ಮತ್ತು ಬ್ಲೂಮ್‌ಫೀಲ್ಡ ಮುಖ್ಯರು. ಭಾಷೆಯನ್ನು ರಚನಾತ್ಮಕ ವಿಶ್ಲೇಷಣೆಗೆ ಒಳಪಡಿಸುವುದನ್ನು ಜಾರಿಗೆ ತಂದ ಶ್ರೇಯಸ್ಸು ಬ್ಲೂಮ್‌ಫೀಲ್ಡನದು. ಇದೇ ಪರಂಪರೆಯಲ್ಲಿ ಕೆ. ಎಲ್. ಪೈಕ; ಸಿ. ಎಫ್. ಹಾಕೆಟ್; ಬ್ಲಾಕ್, ಟ್ರೇಗರ್, ಸ್ಮಿತ್ ಮುಂತಾದವರು ಸೇರುತ್ತಾರೆ. ಲಂಡನ್ ಶಾಖೆಯಲ್ಲಿ ಭಾಷೆಯನ್ನು ಸಾಂದರ್ಭಿಕ ಸನ್ನಿವೇಶ (Context of Situation) ಗಳಲ್ಲಿ ವಿವರಿಸುವುದನ್ನು ಎತ್ತಿಹಿಡಿಯಲಾಗಿದೆ. ಜೆ. ಆರ್. ಫರ್ತ್; ಹ್ಯಾಲಿಡೇ ಮುಂತಾದವರು ಇದರ ಮುಖ್ಯರು. ನಿಯೋಮ್ ಚೋಮ್‌ಸ್ಕಿ ರೂಪಾಂತರ(Transformation)ಹಾಗೂ Generative ವ್ಯಾಕರಣ ಶಾಖೆಯನ್ನು ಪ್ರಾರಂಭಿಸಿದರು. ಇದೀಗ ಭಾಷೆಯನ್ನು ಸಾಮಾಜಿಕವಾಗಿ, ಗಣಕಾತ್ಮಕವಾಗಿ ವಿವರಿಸುವ ಸಿದ್ಧಾಂತಗಳೂ ರೂಪುಗೊಳ್ಳುತ್ತಿವೆ. ಈ ರೀತಿ ಭಾಷೆಯನ್ನು ಹಳೆಯ ವ್ಯಾಕರಣ ಪದ್ಧತಿಗೆ ಅನುಗುಣವಾಗಿ ವಿವರಿಸುವ, ವಿಶ್ಲೇಷಿಸುವ ರೂಢಿ ಬರಬರುತ್ತ ಕಡಿಮೆಯಾಗುತ್ತಿದೆ.

---

೨

# ಭಾಷೆಯೆಂದರೇನು

2.1 ಭಾಷೆಯೆಂದರೇನು ಎಂಬುದನ್ನು ಸೂತ್ರಬದ್ಧವಾಗಿ ವ್ಯಾಖ್ಯಾನಿಸುವುದು ಸುಲಭವಲ್ಲ. ಆದರೂ ಅದನ್ನು ಸೂತ್ರರೂಪದಲ್ಲಿ ಹೇಳುವ ಪ್ರಯತ್ನವನ್ನು ಅನೇಕ ಭಾಷಾವಿಜ್ಞಾನಿಗಳು ಮಾಡಿದ್ದಾರೆ. ಕೆಲವು ಮಹತ್ವದ ವ್ಯಾಖ್ಯೆಗಳನ್ನಿಲ್ಲಿ ಗಮನಿಸ ಬಹುದು. ಎಫ್. ಡಿ. ಸಸೂರ್ ಎಂಬ ವಿಜ್ಞಾನಿ— 'ಮಾನವನು ತನ್ನ ಅನಿಸಿಕೆಗ ಳನ್ನು ಅಭಿವ್ಯಕ್ತಪಡಿಸುವುದಕ್ಕಾಗಿ ರೂಢಿಸಿಕೊಂಡಿರುವ ಸಂಕೇತಗಳ ವ್ಯವಸ್ಥೆಯೇ ಭಾಷೆ' ಎಂದು ಹೇಳಿದರೆ ಎಡ್ವರ್ಡ ಸಪೀರನು— 'ಮನುಷ್ಯನಿಗೆ ಮಾತ್ರ ವಿಶಿಷ್ಟವಾಗಿ ಲಭಿಸಿರುವ ಸಹಜ ಪ್ರವೃತ್ತಿಯಲ್ಲದ ಸಾಂಸ್ಕೃತಿಕ ಕ್ರಿಯೆ' ಎಂದು ಹೇಳಿ ಭಾಷೆ ಇದು ಮುಖ್ಯವಾಗಿ ನಮ್ಮ ಭಾವನೆ, ಅಭಿಪ್ರಾಯ ಹಾಗೂ ಇಚ್ಛೆಗಳನ್ನು ಇತರರಿಗೆ ತಿಳಿಸು ವುದಕ್ಕಾಗಿ ಇದ್ದು ಇದರಲ್ಲಿ ಐಚ್ಛಿಕ ಧ್ವನಿಸಂಕೇತಗಳ ಉಚ್ಚಾರ ವ್ಯವಸ್ಥಿತವಾದ ರೀತಿಯಲ್ಲಿ ಇರುತ್ತದೆ ಎನ್ನುತ್ತಾನೆ. 'ಹೇಗೆ ಬೇಕೋ ಹಾಗೇ ಹಿಗ್ಗಿಸಿ ಕುಗ್ಗಿಸಿ ಹೇಳ ಬಹುದಾದದ್ದು ಕೃತಕವಾದದ್ದು ಆಗಿ ನಮ್ಮ ಅನಿಸಿಕೆಗಳನ್ನು ಹೊರಗೆಡಹುವುದಕ್ಕಿ ರುವ ಮಾಧ್ಯಮವೇ ಭಾಷೆ' ಎಂದು ಜಾಕೋಬ ಕೊರ್ಗ ಹೇಳುತ್ತಾನೆ. ಐಸ್ಲರ್ ಎಂಬುವವನು 'ಮನಸ್ಸಿರುವ ಯಾವುದೇ ಪ್ರಾಣಿಗಳ ಅನುಭವಗಳ ಅಭಿವ್ಯಕ್ತಿಯೇ ಭಾಷೆ'ಎಂದನು.ವ್ಯವಹಾರಕ್ಕಾಗಿ ಸಂಕೇತಗಳಿಂದ ಒಡಗೂಡಿದ ಶಬ್ದ ಸಮುದಾಯವೇ ಭಾಷೆ' ಎಂದು ಭಟ್ಟಾಕಳಂಕ ಹೇಳಿದ್ದಾನೆ. ಹೀಗೆ ಹಲವಾರು ವಿದ್ವಾಂಸರು ಭಾಷೆ ಯೆಂದರೇನೆಂಬುದನ್ನು ವಿವರಿಸಲು ಹೆಣಗಿದ್ದಾರೆ. ಆದರೆ ಇವುಗಳಲ್ಲಿ ಯಾವುದೂ ಪರಿಪೂರ್ಣವಾದ ವ್ಯಾಖ್ಯೆ ಎನಿಸುವುದಿಲ್ಲ.

2.1.1 ಬ್ಲಾಕ್ ಮತ್ತು ಟ್ರೇಗರ್ ಎಂಬ ವಿಜ್ಞಾನಿಗಳು– **The Language is a system of arbitrary vocal symbols by means of which a social group co-operates** ಎಂಬುದಾಗಿ ವ್ಯಾಖ್ಯಾನಿಸಿರುವುದು ಈಗ ಬಹುಜನ ವಿದ್ವಾಂಸರ ಮನ್ನಣೆ ಪಡೆದಿದೆ. ಅನಿಸಿಕೆಗಳ ಅಭಿವ್ಯಕ್ತಿ ಧ್ವನಿಸಂಕೇತ ವ್ಯವಹಾ ರಕ್ಕಾಗಿ ಭಾಷೆ ಮುಂತಾದ ಅಂಶಗಳ ಸುತ್ತಲೇ ತಿರುಗುತ್ತಿದ್ದ ಹಳೆಯ ವ್ಯಾಖ್ಯೆಗಳ

ಅರ್ಥವನ್ನು ಗರ್ಭೀಕರಿಸಿಕೊಂಡು ಇನ್ನೂ ಹೆಚ್ಚು ಖಚಿತವಾಗಿ ಭಾಷೆಯನ್ನು ಬ್ಲಾಕ್ ಹಾಗೂ ಟ್ರೆಗರ್ ಅವರು ಸೂತ್ರಿಸಿರುವುದರಿಂದ ಇದಕ್ಕೆ ಮಹತ್ವ ಬಂದಿದೆ. ಅಂತೆಯೇ ಈ ವ್ಯಾಖ್ಯೆಯನ್ನು ಸ್ವಲ್ಪ ವಿವರವಾಗಿ ಈಗ ನೋಡೋಣ.

ಕನ್ನಡದಲ್ಲಿ ಈ ವ್ಯಾಖ್ಯೆಯನ್ನು ಹೀಗೆ ಹೇಳಬಹುದು–"ಯಾದೃಚ್ಛಿಕ ಮೌಖಿಕ ಧ್ವನಿಸಂಕೇತಗಳ ವ್ಯವಸ್ಥೆಯಿಂದ ಕೂಡಿ ಸಾಮಾಜಿಕ ಸಮೂಹದ ಸಹಕಾರಕ್ಕೆ ಕಾರಣ ವಾಗುವುದೇ ಭಾಷೆ". ಇಲ್ಲಿ ನಾಲ್ಕು ಮುಖ್ಯ ಅಂಶಗಳನ್ನು ಗುರುತಿಸಬಹುದು.

೧. ಭಾಷೆ ಒಂದು ವ್ಯವಸ್ಥೆ [System]. ೨. ಭಾಷೆಯಲ್ಲಿ ಮೌಖಿಕ ಧ್ವನಿ ಸಂಕೇತಗಳಿರುತ್ತವೆ. [Vocal Symbols] ೩. ಆ ಸಂಕೇತಗಳು ಯಾದೃಚ್ಛಿಕವಾಗಿ ರುತ್ತವೆ. [Arbitrary]. ೪. ಭಾಷೆ ಸಾಮಾಜಿಕ ಸಹಕಾರವನ್ನುಂಟು ಮಾಡುತ್ತದೆ [Social group Co— operates].

## 2.1.1.1 ಭಾಷೆ ಒಂದು ವ್ಯವಸ್ಥೆ :

ಭಾಷೆ ಒಂದು ಕಟ್ಟಡವಿದ್ದಂತೆ. ಕಟ್ಟಡ ಕಟ್ಟಲು ಒಂದು ವ್ಯವಸ್ಥಿತವಾದ ಕ್ರಮ ಇರುತ್ತದೆ. ಒಂದು ಮನೆಯ ಯೋಜನೆಯಂತೆ ಅದಕ್ಕೆ ನಿರ್ದಿಷ್ಟವಾದ ಪ್ರಮಾಣದಲ್ಲಿ ಮಣ್ಣು, ಸಿಮೆಂಟ್, ಇಟ್ಟಂಗಿ, ಕಟ್ಟಿಗೆ, ಕಲ್ಲು, ಬಣ್ಣ ಇತ್ಯಾದಿ ಬೇಕಾಗುತ್ತವೆ. ಅವೆಲ್ಲವನ್ನೂ ವಿಶಿಷ್ಟ ರೀತಿಯಲ್ಲಿ ಬಳಸಿ ಸೌಧವನ್ನು ನಿರ್ಮಿಸ ಲಾಗುತ್ತದೆ. ಹಾಗೇಯೆ ಭಾಷೆಯಲ್ಲೂ ಕೂಡ ಧ್ವನಿ, ಸಂಕೇತ, ಶಬ್ದ, ಅರ್ಥ ವಾಕ್ಯ ಮುಂತಾದವು ವ್ಯವಸ್ಥಿತವಾದ ರೀತಿಯಲ್ಲಿ ಬಳಕೆಗೊಂಡಿರುತ್ತವೆ. ಒಂದೊಂದು ಭಾಷೆಗೂ ತನ್ನದೇ ಆದ ವ್ಯವಸ್ಥೆ, ಕ್ರಮ ಇರುತ್ತದೆ. ಆನುವಂಶಿಕವಾಗಿ ಒಂದೇ ವರ್ಗಕ್ಕೆ ಸೇರುವ ಬೇರೆ ಬೇರೆ ಭಾಷೆಗಳಲ್ಲಿ ವ್ಯವಸ್ಥೆ ಮೂಲಭೂತ ಅಂಶಗಳಲ್ಲಿ ಹೋಲುತ್ತಿರುತ್ತದೆ. ಭಿನ್ನ ವರ್ಗಕ್ಕೆ ಸೇರುವ ಭಾಷೆಗಳಲ್ಲಿ ವ್ಯವಸ್ಥೆ ಬೇರೆ ಬೇರೆ ಯಾಗಿರುತ್ತದೆ. ಧ್ವನಿಮಾ ಅಥವಾ ವರ್ಣ ವ್ಯವಸ್ಥೆಯನ್ನೇ ಉದಾಹರಣೆಗಾಗಿ ಎತ್ತಿಕೊಂಡರೆ ದ್ರಾವಿಡ ವರ್ಗದ ಭಾಷೆಗಳಲ್ಲಿ ಮಹಾಪ್ರಾಣಗಳು, ಶ್, ಷ್ ಕ್ಷ್, ಜ್ಞ್, ವಿಸರ್ಗ ಮುಂತಾದ ವರ್ಣಗಳು ಇಲ್ಲ. ಆದರೆ ಇತ್ತೀಚಿತ್ತಲಾಗಿ ಕನ್ನಡ-ತೆಲುಗು ಮೊದಲಾದ ಭಾಷೆಗಳು ಅವುಗಳಲ್ಲಿ ಕೆಲವನ್ನು ರೂಢಿಸಿಕೊಳ್ಳುತ್ತಿವೆ. ಆರ್ಯ ವರ್ಗದ ಭಾಷೆಗಳಲ್ಲಿ ಸಹಜವಾಗಿ ಇವು ದೊರೆಯುತ್ತವೆ. ಲಿಂಗವ್ಯವಸ್ಥೆ ಆರ್ಯ ಭಾಷೆಗಳಲ್ಲಿರುವಂತೆ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಹೀಗೆ ಭಾಷೆಯ ವ್ಯವಸ್ಥೆ ಒಂದು ವರ್ಗದ ಭಾಷೆಗಳಿಂದ ಮತ್ತೊಂದು ವರ್ಗದ ಭಾಷೆಗಳಿಗೆ ಭಿನ್ನವಾಗಿದ್ದರೂ, ಒಂದೇ

ವರ್ಗದ ಭಿನ್ನ ಭಾಷೆಗಳಲ್ಲೂ ಅವು ತಾವಾಗೇ ಬೆಳೆಸಿಕೊಂಡು ಬಂದ ವಿಶಿಷ್ಟ ವ್ಯವಸ್ಥೆಯೂ ಇರಬಹುದು.

ಗೋಪಾಲ ಹಾಲನ್ನು ಕುಡಿಯುತ್ತಾಳೆ-ಎಂದು ಕನ್ನಡದಲ್ಲಿ ಹೇಳಿದರೆ ತಪ್ಪಾಗುತ್ತದೆ. ಏಕೆಂದರೆ ಗೋಪಾಲ ಪುಲ್ಲಿಂಗವಿರುವುದರಿಂದ ಕುಡಿಯುತ್ತಾನೆ ಎಂಬ ರೂಪವೇ ಕೊನೆಯಲ್ಲಿರಬೇಕೆಂಬ ವ್ಯವಸ್ಥೆಯಿದೆ, ಹಾಗೆಯೆ ಶಕುಂತಲೆ ಸೀರೆಯಿಂದ ಉಡುತ್ತಾಳೆ ಎನ್ನಲೂ ಬಾರದು. ಇಲ್ಲಿ ಲಿಂಗಕ್ಕೆ ಸಂಬಂಧಿಸಿದಂತೆ ಉಡುತ್ತಾಳೆ ರೂಪವು ಸರಿ ಇದ್ದರೂ 'ಸೀರೆಯಿಂದ' ಎಂಬುದು 'ಸೀರೆಯನ್ನು' ಆಗಬೇಕು. ಆದ್ದರಿಂದ ಯಾವ ರೂಪವನ್ನು ಎಲ್ಲಿಡಬೇಕು ಅವುಗಳಿಗೆ ಯಾವ ಪ್ರತ್ಯಯ ಹಚ್ಚಬೇಕು, ಎಂಬುದೆಲ್ಲ ನಿಶ್ಚಿತವಾಗಿ ಸಮಾಜ ಒಪ್ಪಿಕೊಂಡ ವ್ಯವಸ್ಥೆಗೆ ಅನುಗುಣವಾಗಿಯೇ ನಡೆಯಬೇಕು. ಭಾಷೆಯಲ್ಲಿ ವ್ಯವಸ್ಥೆ ಎಲ್ಲ ಮಟ್ಟದಲ್ಲೂ ಇರುತ್ತದೆ. ಭಾಷೆ ಬದಲಾಗುತ್ತ ಸಾಗಿದರೂ ಸಾಮಾಜಿಕ ಒಪ್ಪಿಗೆಯೊಡನೆ ವ್ಯವಸ್ಥೆಯೂ ಅದಕ್ಕನುಗುಣವಾಗಿ ಹೊಂದಿಕೊಳ್ಳುತ್ತ ಸಾಗುತ್ತದೆ. ಹಲ್ಲಿ-ಗಿಲ್ಲಿ, ಮಾತು-ಗೀತು, ಚಪ್ಪಲಿ-ಗಿಪ್ಪಲಿ, ರೊಟ್ಟಿ-ಗಿಟ್ಟಿ, ಕಟಿಗಿ- ಗಿಟಿಗಿ, ಇಂಥ ಹಲವಾರು ಪ್ರತಿಧ್ವನಿ ಶಬ್ದಗಳ **(Echo words)** ಉತ್ತರಾರ್ಧದಲ್ಲಿ 'ಗಿ' ನಿಯಮಿತವಾಗಿ ಬಂದಿರುವುದು ಎದ್ದು ತೋರುತ್ತದೆ. ಇನ್ನು ಕೆಲವು ಶಬ್ದಗಳಲ್ಲಿ 'ಗಿ' ಬರುವ ಸ್ಥಾನದಲ್ಲಿ 'ಪ' ಬರಬಹುದು. ಉದಾ : ಗಿಡ-ಪಡ, ಸುಣ್ಣ-ಪಣ್ಣ, ಸೈಕಲ್-ಪೈಕಲ್, ಆದರೂ 'ಪ' ಬರುವ ಶಬ್ದಗಳ ಸಂಖ್ಯೆ ಕಡಿಮೆ. ಭಾಷೆಯಲ್ಲಿ ಬಳಕೆಗೊಳ್ಳುವ ಧ್ವನಿ, ಧ್ವನಿಮಾ, ಆಕೃತಿಮಾ ಹಾಗೂ ವಾಕ್ಯಗಳು ಒಂದು ವ್ಯವಸ್ಥೆಗೆ ಒಳಪಟ್ಟಿರುತ್ತವೆ. ಹೀಗೆ ಭಾಷೆಯಲ್ಲಿ ಒಂದು ಕ್ರಮವಿರುವುದರಿಂದಲೇ ಅದನ್ನು ವಿವರಿಸಲು ಸಾಧ್ಯವಾಗುತ್ತದೆ. ಒಂದು ಕಾಲದ ಭಾಷಾ ವ್ಯವಸ್ಥೆ ಎಲ್ಲ ಕಾಲದಲ್ಲೂ ಒಂದೇ ಬಗೆಯಾಗಿದ್ದು ಸ್ಥಿರವಾಗಿ ಉಳಿಯುತ್ತದೆ ಎಂದು ಹೇಳಲಾಗದು. ಬಹಳ ಕಾಲ ಬದಲಾಗದೇ ಉಳಿಯಲೂ ಬಹುದು. ಇಲ್ಲವೆ ಯಾವ ಕಾಲದಲ್ಲಾದರೂ ಅದು ಬದಲಾವಣೆಗೆ ಒಳಪಡಬಹುದು. ಉದಾಹರಣೆಗೆ ದ್ರಾವಿಡ ಭಾಷೆಯು ಮೂಲತಃ ಮೇಲುವರ್ಗ, ಕೆಳವರ್ಗ ಎಂಬ ವರ್ಗಾನುಸಾರಿಯಾದ ಲಿಂಗ ವ್ಯವಸ್ಥೆಯನ್ನು ಹೊಂದಿತ್ತು. ಪುಲ್ಲಿಂಗವನ್ನು ಮೇಲು ವರ್ಗದಲ್ಲೂ, ಸ್ತ್ರೀಲಿಂಗ ಹಾಗೂ ನಪುಂಸಕ ಲಿಂಗಗಳನ್ನು ಕೆಳವರ್ಗದಲ್ಲೂ, ಪರಿಗಣಿಸಲಾಗುತಿತ್ತು. ಆದರೆ ಕನ್ನಡ, ತಮಿಳು, ತೆಲುಗು ಮುಂತಾದ ಭಾಷೆಗಳು ಸ್ತ್ರೀಲಿಂಗವನ್ನು ಕೆಲಕಾಲಾನಂತರ ಮಹತ್ ವರ್ಗದಲ್ಲಿ ಸೇರಿಸಿ ಬಳಸ ತೊಡಗಿದವು. ಭಾಷಾ ರಚನೆಗೆ ಭಂಗ ಬರದಂತೆ ಇಂತಹ ಬೆಳವಣಿಗೆಗಳು ಭಾಷೆಯ ವ್ಯವಸ್ಥೆಯಲ್ಲಿ ಆಗುವುದು ಸಹಜ.

**2.1.1.2. ಧ್ವನಿಸಂಕೇತಗಳು :**

ಮನುಷ್ಯ,ಜೀವನದಲ್ಲಿ ತನ್ನ ವ್ಯವಹಾರಕ್ಕಾಗಿ ಅನೇಕ ಬಗೆಯ ಸಂಕೇತಗಳನ್ನು ಬಳಸುತ್ತಾನೆ. ತನ್ನ ಕಣ್ಣಳತೆಯಲ್ಲಿರುವ ಒಬ್ಬ ವ್ಯಕ್ತಿಯನ್ನು ಕರೆಯಬೇಕಾದರೆ ಕೈ ಬೀಸಬಹುದು, ಇಲ್ಲವೆ ತಲೆ ಅಲುಗಾಡಿಸಬಹುದು, ಚಪ್ಪಾಳೆ ತಟ್ಟಬಹುದು, ಶಿಳ್ಳು ಹಾಕಬಹುದು. ಕಣ್ಣು ಹೊಡೆಯಬಹುದು. ಹೀಗೆಯೇ ಹಸಿರುದೀಪ ಅಥವಾ ಹಸಿರು ನಿಶಾನೆ ತೋರಿಸಿದರೆ ರೈಲು ಹೊರಡುತ್ತದೆ. ಕೆಂಪು ತೋರಿಸಿದರೆ ನಿಲ್ಲುತ್ತದೆ. ನಿಲ್ದಾಣದಲ್ಲಿ ಕೈ (Signal) ಕೆಳಕ್ಕೆ ಇಳಿದಿದ್ದರೆ ರೈಲು ಒಳಪ್ರವೇಶಿಸುತ್ತದೆ. ಇಲ್ಲದಿದ್ದರೆ ನಿಲ್ಲುತ್ತದೆ. ಕೆಂಪು ತ್ರಿಕೋನವು ಕುಟುಂಬ ಕಲ್ಯಾಣವನ್ನು ಸೂಚಿಸುತ್ತದೆ. ಕರೆ ಗಂಟೆಯ ಗುಂಡಿಯನ್ನು ಒತ್ತಿದರೆ ಮನೆಬಾಗಿಲು ತೆರೆಯುತ್ತಾರೆ. ಟೇಬಲ್ ಗಂಟೆಯನ್ನು ಬಾರಿಸಿದರೆ ಸೇವಕ ಹಾಜರಾಗುತ್ತಾನೆ. ಕಂಡಕ್ಟರ ಶೀಟಿ ಊದಿ ಬಸ್ಸನ್ನು ನಿಲ್ಲಿಸುವ, ಹೊರಡಿಸುವ ನಿಯಂತ್ರಣ ಪಡೆಯುತ್ತಾನೆ. ಇವೆಲ್ಲವು ಸಂಕೇತಗಳ ಮೂಲಕ ನಡೆಯುವ ಚಟುವಟಿಕೆಗಳು. ಸಂಕೇತಗಳಲ್ಲಿ ಕಣ್ಣಿಗೆ ಗೋಚರಿಸುವಂಥವು ಕಿವಿಗೆ ಕೇಳಿಸುವಂಥವು, ಸ್ಪರ್ಶಕ್ಕೆ ಅನುಭವವೇದ್ಯವಾಗುವಂಥವು ಎಂದು ಮೂರು ಬಗೆ. ರೇಲ್ವೆ ಸಿಗ್ನಲ್, ನಿಶಾನೆ, ಕೆಂಪು ತ್ರಿಕೋನ ಇತ್ಯಾದಿ ದೃಶ್ಯಸಂಕೇತಗಳಾದರೆ ಗಂಟೆ, ಶೀಟಿ ಇತ್ಯಾದಿ ಶ್ರವಣ ಸಂಕೇತಗಳು. ಕುರುಡರು ಸ್ಪರ್ಶಮೂಲಕ ವಸ್ತುಗಳನ್ನು ಗುರುತಿಸುತ್ತಾರೆ. ಅವರ ವಿದ್ಯಾಭಾಸಕ್ಕಾಗಿ ಸ್ಪರ್ಶಕ್ಕೆ ಅನುಕೂಲವಾಗುವಂತೆ ಸಂಕೇತಗಳಿರುತ್ತವೆ. ಅವು ಸ್ಪರ್ಶ ಸಂಕೇತಗಳು. ಇಂತಹ ವಿವಿಧ ಬಗೆಯ ಸಂಜ್ಞೆ, ಸಂಕೇತಗಳನ್ನು ಬಳಸಿ ಜಗತ್ತಿನಲ್ಲಿ ಸೀಮಿತವಾದ ಬಗೆಯಲ್ಲಿ ಸಮಾಚಾರ, ಭಾವ, ಸಂದೇಶ ಮುಂತಾದವುಗಳ ವಿನಿಮಯವೂ ನಡೆಯುತ್ತಿದ್ದಂತೆ ತೋರುತ್ತದೆ. ಅಮೇರಿಕೆಯ ಇಂಡಿಯನ್‌ರ ರಗ್ಗಿನ ಭಾಷೆ (Blanket Language) ದರ್ಪಣ ಭಾಷೆ (Mirror Language) ನಗಾರಿ ಭಾಷೆ (Drum Language) ಆಸ್ಟ್ರೇಲಿಯದ ಕೈಭಾಷೆ (Hand Language) ಇವು ಒಂದಾನೊಂದು ಕಾಲದಲ್ಲಿ ಕೆಲವು ಜನರ ಗುಂಪುಗಳು ಬಳಸುತ್ತಿದ್ದ ಸಾಂಕೇತಿಕ ಭಾಷೆಗಳು. ತಂತಿ ಭಾಷೆ(Telegraphic Language)ಸಂಖ್ಯಾ ಭಾಷೆ (Statistical Language) ಸೈನಿಕ ಭಾಷೆ, ಇಂತಹವು ಈಗಲೂ ಕೂಡ ಜಗತ್ತಿನಲ್ಲಿ ಬಳಕೆಯಲ್ಲಿವೆ. ಆದರೆ ಇವೆಲ್ಲ ಸೀಮಿತ ವ್ಯಾಪ್ತಿಯುಳ್ಳವು, ನಿರ್ದಿಷ್ಟ ಗುರಿಯುಳ್ಳವು.

ಭಾಷೆಯಲ್ಲಿ ಧ್ವನಿ (ಶ್ರವಣ) ಸಂಕೇತಗಳಿಗೆ ಮಾತ್ರ ಸ್ಥಾನ. ಆದರೆ ಸಿಕ್ಕ ಸಿಕ್ಕ ಧ್ವನಿಗಳಿಗೆ ಭಾಷೆಯಲ್ಲಿ ಸ್ಥಾನವಿಲ್ಲ. ಮನುಷ್ಯ ಮೌಖಿಕವಾಗಿ ಹೊರಡಿಸಬಹುದಾದ

ಧ್ವನಿಗಳಿಗೆ ಮಾತ್ರ ಇಲ್ಲಿ ಮಹತ್ವ. ಮನುಷ್ಯ ತನ್ನ ಬಾಯಿಯ ಮೂಲಕ ಅಸಂಖ್ಯಾತ ಬಗೆಯ ಧ್ವನಿಗಳನ್ನು ಹೊರಡಿಸಲು ಶಕ್ತನಾಗಿದ್ದಾನೆ. ಧ್ವನಿಪೆಟ್ಟಿಗೆಯೊಂದನ್ನು ಬಿಟ್ಟು ಇತರ ಯಾವ ಅಂಗವೂ ಧ್ವನಿಯನ್ನು ಹುಟ್ಟಿಸುವದಕ್ಕಾಗಿಯೇ ಇಲ್ಲವಾದರೂ ನಾಲಗೆ, ತುಟಿ, ನಾಸಿಕ, ಗಂಟಲು, ಪುಪ್ಪುಸ, ತಾಲು, ಹಲ್ಲು ಇವೆಲ್ಲವೂ ಧ್ವನಿ ವೈವಿಧ್ಯತೆಗೆ ಕಾರಣವಾಗುತ್ತವೆ. ಇವೆಲ್ಲವುಗಳಿಗೆ ಧ್ವನ್ಯಂಗಗಳೆನ್ನುತ್ತಾರೆ. ಧ್ವನ್ಯಂಗಗಳು ಹೊರಡಿಸುವ ಅಗಣಿತ ಧ್ವನಿಗಳೆಲ್ಲವನ್ನೂ ಭಾಷೆ ಹೊಂದಿರುವದಿಲ್ಲ. ಉದಾಹರಣೆಗೆ- ಸೀನಿದಾಗ, ಕೆಮ್ಮಿದಾಗ, ಬಿಕ್ಕಿದಾಗ, ಬಾಯಿ ಚಪ್ಪರಿಸಿದಾಗ ಉಂಟಾಗುವ ಧ್ವನಿಗಳನ್ನು ಭಾಷೆಯಲ್ಲಿ ಬಳಸಲಾಗದು. ಉಚ್ಚಾರಕ್ಕೆ ಅನುಕೂಲವಾದವುಗಳನ್ನು ಮಾತ್ರ ಆಯ್ದುಕೊಳ್ಳಲಾಗುತ್ತದೆ. ಹಾಗೆ ಆಯ್ದುಕೊಂಡ ಧ್ವನಿ ಘಟಕಗಳನ್ನು ವ್ಯವಸ್ಥಿತವಾಗಿ ಒಂದರನಂತರ ಒಂದನ್ನು ಹೊರಡಿಸಿ ಉಚ್ಚರಿಸಲಾಗುತ್ತದೆ. ಒಂದು, ಎರಡು, ಮೂರು, ನಾಲ್ಕು, ಐದು ಹೀಗೆ ತನಗನುಕೂಲವಾದಂತೆ ಧ್ವನಿ ಘಟಕಗಳನ್ನು ಹೊಂದಿಸಿ ಸಂಕೇತಗಳನ್ನು ನಿರ್ಮಿಸಲಾಗುತ್ತದೆ. 'ಗುಡಿ' ಎಂಬ ಶಬ್ದದಲ್ಲಿ ಗ್, ಉ, ಡ್, ಇ ಎಂಬ ನಾಲ್ಕು ಧ್ವನಿಗಳು ಇವೆ. ಹಾಗೂ ಗ್‌ದ ಮುಂದೆ ಉ, ಅದರ ಮುಂದೆ ಡ್, ಅನುಕ್ರಮವಾಗಿ ಒಂದರ ನಂತರ ಒಂದು ಉಚ್ಚರಿಸಲ್ಪಡುತ್ತವೆ. ಮಂದಿರಕ್ಕೆ 'ಗುಡಿ' ಎಂಬ ಧ್ವನಿವೊತ್ತದ ಸಂಕೇತ ನಿಗದಿಪಡಿಸಲಾಗಿದೆ. ಈ ಸಂಕೇತವನ್ನು ಕನ್ನಡ ಭಾಷೆಯನ್ನಾಡುವವರೆಲ್ಲರೂ ಒಪ್ಪಿಕೊಂಡಿರುತ್ತಾರೆ. ಒಂದೊಂದು ವಸ್ತು, ಪ್ರಾಣಿ, ಭಾವಕ್ಕೂ ಒಂದೊಂದು ಇಲ್ಲವೆ ಹಲವಾರು ಇಂತಹ ಧ್ವನಿ ಸಂಕೇತಗಳನ್ನು ಬಳಸಬಹುದು. ಉದಾಹರಣೆಗೆ- ಪುಸ್ತಕ, ಗ್ರಂಥ; ಹೊತ್ತಗೆ. ಒಂದೇ ಧ್ವನಿಗಳ ಮೊತ್ತ ಹಲವು ಅರ್ಥಗಳಿಗೆ ಸಂಕೇತವಾಗಿರಲೂ ಬಹುದು. ಉದಾ:--ಆಡು ಎಂಬ ಶಬ್ದವು ಪ್ರಾಣಿಯನ್ನು ಸೂಚಿಸುವಂತೆ ಆಟ ಆಡುವ ಕ್ರಿಯಾರ್ಥಸೂಚಕ ಪದವೂ ಆಗುತ್ತದೆ. ಹೀಗೆ ಧ್ವನಿಸಂಕೇತಗಳು ಒಂದರಿಂದ ಹಲವು ಆಗಿ ಸಂಕೀರ್ಣಗೊಳ್ಳುತ್ತ ಬಳಕೆಯಾಗುತ್ತ ಹೋಗುತ್ತವೆ.

### ೧.1.1.3 ಯಾದೃಚ್ಛಿಕತೆ :

ಧ್ವನಿಸಂಕೇತಗಳು ಭಾಷೆಯಲ್ಲಿ ಯಾದೃಚ್ಛಿಕವಾಗಿ ಬಳಕೆಗೊಳ್ಳುತ್ತವೆಂಬುದು ಮುಖ್ಯವಾದುದು. ಸಾಮಾನ್ಯವಾಗಿ ಪ್ರತಿಯೊಂದು ವಸ್ತು, ಪ್ರಾಣಿ, ಅಥವಾ ಭಾವಕ್ಕೆ ನಿಗದಿಪಡಿಸಿ ಸಾರ್ವತ್ರಿಕವಾಗಿ ಒಪ್ಪಿಗೆ ಪಡೆದ ಧ್ವನಿಸಂಕೇತಗಳು ಒಂದೊಂದು ಭಾಷೆಯಲ್ಲಿ ಬಳಕೆಗೊಳ್ಳುತ್ತವೆ. ಇಂತಹ ವಸ್ತು, ಪ್ರಾಣಿ, ಭಾವಕ್ಕೆ

ಇಂತಹುದೇ ಧ್ವನಿ ಸಂಕೇತಗಳನ್ನು ನೀಡಬೇಕೆಂಬ ನಿರ್ದಿಷ್ಟವಾದ ನಿಯಮವೇನೂ ಇಲ್ಲ.

ಒಂದು ಧ್ವನಿಸಂಕೇತದ ಮೊತ್ತಕ್ಕೆ ಒಂದೇ ಅರ್ಥವಿರಬೇಕೆಂಬ ನಿಯಮವೂ ಇಲ್ಲ. ಅದು ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಹೊಂದಿರಬಹುದು. 'ಸರಿ' ಎಂಬ ಕನ್ನಡ ಶಬ್ದ ಸಮ, ಒಂದು ಬಗೆಯ ಆಟ, ಚಲಿಸು, ಆಗಲಿ, ಎಂಬ ಹಲವು ಅರ್ಥಗಳನ್ನು ಹೊಂದಿದೆ. ಹೀಗೆಯೇ ಹಲವು ಶಬ್ದಗಳು ಒಂದೇ ಅರ್ಥವನ್ನು ಹೊಂದಿರಬಹುದಾಗಿದೆ. ಮಂಗ, ಕಪಿ, ಕೋತಿ, ಮರ್ಕಟ ಮುಸ್ಯಾ, ಸೊಲಗ, ಬಾಲ್ಯಾ ಇವೆಲ್ಲವೂ ಕನ್ನಡದಲ್ಲಿ ಮಂಗವನ್ನು ಸೂಚಿಸುತ್ತವೆ. ಹೀಗೆ ಒಂದೇ ಅರ್ಥಕ್ಕೆ ಹಲವು ಧ್ವನಿಸಂಕೇತ ಮೊತ್ತಗಳನ್ನು, ಒಂದೇ ಧ್ವನಿ ಸಂಕೇತ ಮೊತ್ತಕ್ಕೆ ಹಲವು ಅರ್ಥಗಳನ್ನು ಹೊರಡಿಸುವ ಅದರಂತೆ ಬಳಸುವ ಈ ಯಾದೃಚ್ಛಿಕತೆ ಅಥವಾ ಸ್ಥೂಲ ಅರ್ಥದಲ್ಲಿ ಮನಸೇಚ್ಛೆ ಭಾಷೆಯ ಒಂದು ಪ್ರಮುಖ ಲಕ್ಷಣವಾಗಿದೆ.

## 2.1.1.4. ಸಾಮಾಜಿಕ ಸಹಕಾರ :

ಭಾಷೆಯ ಮೂಲ ಉದ್ದೇಶವೆಂದರೆ ಜನರಲ್ಲಿ ಪರಸ್ಪರ ವ್ಯವಹಾರವನ್ನು ಸರಳಗೊಳಿಸುವುದು. ಒಂದು ಮಾವಿನ ಮರದ ತುದಿಯಲ್ಲಿ ಒಂದು ಹಣ್ಣಿದೆ ಎಂದಿಟ್ಟುಕೊಳ್ಳೋಣ. ಅದನ್ನು ಒಬ್ಬ ಬಾಲಕಿ ನೋಡಿ ತಿನ್ನಲು ಆಸೆಪಡುತ್ತಾಳೆ. ಅದೇ ಸಮಯಕ್ಕೆ ಒಬ್ಬ ಬಾಲಕ ಅಲ್ಲಿಗೆ ಬರುತ್ತಾನೆ. ಹುಡಿಗಿಗೆ ಮಾತನಾಡಲು ಬರುತ್ತಿರಲಿಲ್ಲವೆಂದರೆ ಅವಳು ತನ್ನ ಕೈಬಾಯಿಗಳ ಸಂಕೇತಗಳ ಮೂಲಕ ಹಣ್ಣು ಕಿತ್ತುಕೊಡಲು ಸೂಚಿಸುತ್ತಾಳೆ ಆದರೆ ಕೇವಲ ಸನ್ನೆಯಿಂದ ತನ್ನ ಮನಸ್ಸಿನ ಇಚ್ಛೆಯನ್ನು ತಿಳಿಸುವುದು ಸ್ವಲ್ಪ ಕಠಿಣವೇ ಸರಿ. ಹಣ್ಣು ಕಣ್ಣಿಗೆ ಕಾಣುವ ವಸ್ತುವಾದ್ದರಿಂದ ಇಲ್ಲಿ ಹುಡುಗನಿಗೆ ಹುಡುಗಿಯ ಇಚ್ಛೆ ಬೇಗ ಅರ್ಥವಾಗಿ ಅವನು ಸರಸರನೆ ಗಿಡ ಹತ್ತಿ ಹಣ್ಣು ಹರಿದು ಅವಳಿಗೆ ಕೊಟ್ಟಿರಬಹುದು. ಇಲ್ಲವೆ ತನಗೂ ಗಿಡಹತ್ತಲು ಬರುವುದಿಲ್ಲವೆಂದು ಸನ್ನೆ ಮಾಡಿ ಸೂಚಿಸಿರಬಹುದು ಆದರೆ ಎಲ್ಲ ಸಮಯದಲ್ಲೂ ಅದು ಸಾಧ್ಯವಿಲ್ಲ.

"ಐದು ಮೈಲು ದೂರವಿರುವ ಮುರಗೋಡ ಎಂಬ ಊರಲ್ಲಿ ನನ್ನ ಅಣ್ಣನ ಮಗಳ ಮಗನಿಗೆ ನಿನ್ನೆ ಕೆಟ್ಟ ಕನಸು ಬಿದ್ದಿತ್ತಂತೆ ಅದಕ್ಕೆ ಹಾಲು ದಾನ ಮಾಡಬೇಕು ಎಂದು ತಿಳಿಸು" ಈ ವಿಚಾರಗಳನ್ನು ಧ್ವನಿರಹಿತ ಸನ್ನೆಗಳ ಮೂಲಕ ತಿಳಿಸುವುದು

ಹೇಗೆ ? ಅಂತೆಯೇ ಮನುಷ್ಯರ ವ್ಯವಹಾರಕ್ಕಾಗಿ ಭಾಷೆಯಲ್ಲಿ ಧ್ವನಿ ಸಂಕೇತಗಳು ಅತ್ಯವಶ್ಯ ಹಾಗೂ ಅತ್ಯಮೌಲ್ಯವೆನಿಸಿವೆ. ಭಾಷೆ ಎರಡು ಅಥವಾ ಅದಕ್ಕೂ ಹೆಚ್ಚು ವ್ಯಕ್ತಿಗಳಲ್ಲಿ ಪರಸ್ಪರ ವ್ಯವಹಾರಗಳನ್ನು ಸುಲಭಗೊಳಿಸುತ್ತದೆ. ಅವರ ಮನಸ್ಸಿನ ಭಾವನೆಗಳನ್ನು ವಿನಿಮಯಗೊಳಿಸುತ್ತದೆ. ಅವರಲ್ಲಿ ಸಹಕಾರ ಹೊಂದಾಣಿಕೆ ಯನ್ನು ಒಕ್ಕಟ್ಟನ್ನು ಹೆಚ್ಚಿಸುತ್ತದೆ. ಕೇವಲ ಭಾಷಾ ಕೌಶಲ್ಯದಿಂದಲೇ ಮಾನವರು ಅನೇಕ ಕಾರ್ಯಸಾಧನೆಗಳನ್ನು ಮಾಡಿಕೊಳ್ಳುತ್ತಾರೆ. ಮಾನವನ ಸಂಸ್ಕೃತಿ ನಾಗರಿಕತೆ ಮುನ್ನಡೆಯಲು ಭಾಷೆ ಸಹಕರಿಸುತ್ತದೆ.

ವ್ಯಕ್ತಿ-ವ್ಯಕ್ತಿಗಳಲ್ಲಿ ಸಾಮಾಜಿಕ ಸಹಕಾರವನ್ನು ಉಂಟು ಮಾಡುವಲ್ಲಿ ಭಾಷೆ ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಸಮಾಜದ ತೊಟ್ಟಿಲಲ್ಲಿ ಬೆಳೆಯುತ್ತ ಸಾಮಾಜಿಕ ಸಹಕಾರವನ್ನುಂಟು ಮಾಡುವುದೇ ಭಾಷೆಯ ಮುಖ್ಯ ಕಾರ್ಯ. ಬ್ಲಾಕ್ ಹಾಗೂ ಟ್ರೇಗರ್ ಅವರು ನೀಡಿದ ಭಾಷೆಯ ಬಗೆಗಿನ ವ್ಯಾಖ್ಯೆಯಲ್ಲಿ ಮೊದಲ ಮೂರು ಅಂಶಗಳು ಭಾಷೆಯೆಂದರೇನು ಅದು ಏನನ್ನು ಒಳಗೊಂಡಿರು ತ್ತದೆ ಎಂಬುದನ್ನು ಸೂಚಿಸಿದರೆ ಕೊನೆಯ ಅಂಶವು ಭಾಷೆಯ ಕಾರ್ಯವನ್ನು ಸೂಚಿಸುತ್ತದೆ. ಮಾನವನು ತನ್ನ ಭಾವನೆ, ವಿಚಾರ, ಅನಿಸಿಕೆಗಳನ್ನು ಇತರರಿಗೆ ಅಭಿವ್ಯಕ್ತಪಡಿಸಲು ಇರುವ ಅತ್ಯಂತ ಸಮರ್ಥ ಮಾಧ್ಯಮವಾಗಿರುವ ಭಾಷೆ ಮಾನವ-ಮಾನವರಲ್ಲಿ ಸಂಪರ್ಕವನ್ನುಂಟುಮಾಡಿ ಅವರಲ್ಲಿ ಪರಸ್ಪರ ಸಹಕಾರಕ್ಕೆ ಅನುವುಮಾಡಿಕೊಡುತ್ತದೆ. ವ್ಯಕ್ತಿಯಿಂದ, ವ್ಯಕ್ತಿ ಅಥವಾ ವ್ಯಕ್ತಿಗಳಿಗಾಗಿ ಭಾಷೆ ಇದ್ದರೂ ವ್ಯಕ್ತಿಗಳಲ್ಲಿಯೇ ಅದರ ಹುಟ್ಟು ಮತ್ತು ಬೆಳವಣಿಗೆ ಇರುತ್ತದೆ. ಭಾಷೆ ಯನ್ನು ಬಳಸುವುದರಿಂದ ಮನುಷ್ಯನು ತನ್ನ ಸೂಕ್ಷ್ಮ ಭಾವನೆಗಳನ್ನೂ ಕೂಡ ಇತರರಿಗೆ ಹೇಳಬಹುದು. ಭಾಷೆಗೆ ಲಿಪಿಯೊಂದನ್ನು ರೂಢಿಸಿಕೊಂಡರಂತೂ ತಲೆತಲಾಂತರವಾಗಿ ತಮ್ಮ ಅನುಭವಗಳನ್ನು ಸಾಗಿಸಬಹುದು. ಪ್ರಾಚೀನ ತಲೆ ಮಾರಿನವರ ಸಂಸ್ಕೃತಿ-ನಾಗರಿಕತೆಗಳನ್ನು ಗ್ರಂಥಸ್ಥ ಭಾಷೆಯ ಮೂಲಕ ಅರಿಯ ಬಹುದು. ನಾಡವರ ಇತಿಹಾಸವನ್ನು ಬರವಣಿಗೆಯ ಮೂಲಕ ಕಾಯ್ದಿಡ ಬಹುದು. ಜನಾಂಗದವರ ಚಟುವಟಿಕೆಗಳನ್ನು ಭಾಷೆಯ ಮೂಲಕ ದಾಖಲೆಯಾಗಿ ಉಳಿಸಬಹುದು. ಈ ರೀತಿ ಭಾಷೆ ಸಾಮಾಜಿಕ ಕ್ರಿಯೆಯಾಗಿ ಸಾಮಾಜಿಕ ಸಹಕಾರ ವನ್ನು ಪರಸ್ಪರ ವ್ಯವಹಾರವನ್ನು ಬೆಳೆಯಿಸುವ ಪ್ರಮುಖ ಮಾಧ್ಯಮವಾಗಿ ಮುಂದುವರಿಯುತ್ತದೆ.

ಭಾಷೆ ಸಮಾಜದ ಎಲ್ಲ ವ್ಯಕ್ತಿಗಳ ಸೊತ್ತು. ಅದು ಕೆಲವರ ಸೊತ್ತಾಗಿ, ತೊತ್ತಾಗಿ ಬದುಕಲಾರದು. ಜನಪದದಲ್ಲಿ ಜೀವಂತವಾಗಿರುವವರೆಗೂ ಭಾಷೆಗೆ ಬೆಲೆ

ಇದೆ. ಜನತೆಯ ನಾಲಗೆಯಿಂದ ದೂರವಾದಾಗ ಅದು ಮೃತಭಾಷೆಯಾಗುತ್ತದೆ. ಅದಕ್ಕೆ ಮುಂದೆ ಭವಿಷ್ಯವೆಂಬುದಿಲ್ಲ. ಜನಸಮೂಹದ ಸಹಕಾರದಿಂದ. ಯಾದೃಚ್ಛಿಕ ಧ್ವನಿಗಳ ಸಂಕೇತಗಳಿಂದ ಕೂಡಿ ವ್ಯವಸ್ಥಿತವಾಗಿ ಬಳಸಲ್ಪಡುವ ಸಮರ್ಥ ಮಾಧ್ಯಮವೇ ಭಾಷೆಯಾಗಿದೆ. ಮಾನವನು ಇಂತಹ ಅದ್ಭುತ ಮಾಧ್ಯಮವನ್ನು ರೂಪಿಸಿಕೊಂಡಿರುವುದರಿಂದಲೇ ಪ್ರಾಣಿಗಳಿಗಿಂತ ಬಹಳ ಉನ್ನತ ಮಟ್ಟದಲ್ಲಿ ಭಿನ್ನ ಸ್ವರೂಪವಾಗಿ ನಿಂತಿದ್ದಾನೆ. ವಿಶ್ವವನ್ನೇ ಆಳುವ ಶಕ್ತಿ ಪಡೆದಿದ್ದಾನೆ. ಇಂದಿನ ಎಲ್ಲ ಬಗೆಯ ಅಭಿವೃದ್ಧಿಗೂ ಜೀವವಾಹಿನಿಯಾಗಿ ಭಾಷೆ ನಿಂತಿದೆ. ಒಂದೊಂದು ಜನಸಮೂಹಕ್ಕೂ ಭಾಷೆ ಬೇರೆ ಬೇರೆಯಾಗಿದ್ದಿರಬಹುದು. ಮಾನವ ಮಾನವನೇ ಆಗಿದ್ದರಿಂದ ಅವನ ಭಾವನೆಗಳು ಯಾವ ಭಾಷೆಯಲ್ಲಿ ಅಭಿವ್ಯಕ್ತಗೊಂಡರೂ ಅವುಗಳಲ್ಲಿ ಮಹತ್ವದವುಗಳು ಮನುಷ್ಯನಿಗೆ ಪ್ರಯೋಜನಕಾರಿಯೇ ಆಗಿವೆ. ಹೆಚ್ಚು ಹೆಚ್ಚು ಭಾಷೆಗಳನ್ನು ಕಲಿತಷ್ಟೂ ಆಯಾ ಭಾಷೆಗಳಲ್ಲಿ ಮೂಡಿಬಂದ ವಿಚಾರಗಳಿಂದ ಮಾನವನ ಜ್ಞಾನದ ಪರಿಧಿ ಹೆಚ್ಚುತ್ತಲೇ ಹೋಗುವುದು.

———

೩

# ಕನ್ನಡ ವ್ಯಾಕರಣ ಪರಂಪರೆ

3.0 ಕನ್ನಡ ಭಾಷೆಗೆ ಸುಮಾರು ಎರಡು ಸಾವಿರ ವರ್ಷಕ್ಕಿಂತಲೂ ಹೆಚ್ಚಿನ ಇತಿಹಾಸವಿದೆ. ಮೂಲ ದ್ರಾವಿಡ ಭಾಷೆಯಿಂದ ಉತ್ತರ, ಮಧ್ಯ ಹಾಗೂ ದಕ್ಷಿಣ ದ್ರಾವಿಡ ಭಾಷಾಶಾಖೆಗಳು ಸ್ವತಂತ್ರವಾದ ಮೇಲೆ ಮೂಲ ದಕ್ಷಿಣದ್ರಾವಿಡ ಭಾಷೆಯಿಂದ ಕನ್ನಡವು ಕ್ರಿ. ಶ. ಪೂ. ೩೦೦ ರ ವೇಳೆಗೆ ತನ್ನ ಸ್ವತಂತ್ರ ಅಸ್ತಿತ್ವವನ್ನು ಪಡೆಯಿತೆಂದು ದ್ರಾವಿಡಭಾಷಾವಿಜ್ಞಾನಿಗಳ ಊಹೆ. ಕನ್ನಡವು ತನ್ನದೇ ಆದ ಲಿಪಿಯನ್ನು ಪಡೆದದ್ದು ಕ್ರಿ. ಶ. ಸು. ೨–೩ ನೆಯ ಶತಮಾನದ ವೇಳೆಗೆ. ಕೆಲವು ಕನ್ನಡ ಶಾಸನಗಳು, ಗ್ರೀಕ ನಾಟಕದಲ್ಲಿ ದೊರೆಯುವ ಕನ್ನಡ ಶಬ್ದಗಳು, ತಮಿಳು ಪ್ರಾಚೀನ ಗ್ರಂಥ (ಕ್ರಿ. ಶ. ೨ ನೆಯ ಶತಮಾನ) ದಲ್ಲಿ 'ಕನ್ನಡರ್' ರ ನೃತ್ಯ ಸಂಗೀತದ ಪ್ರಸ್ತಾಪ, ಶಾತವಾಹನ ಹಾಲರಾಜನ ಗಾಥಾ ಸಪ್ತಶತಿಯಲ್ಲಿ ಅತ್ತೆ, ತುಪ್ಪ, ತೀರ, ಪೊಟ್ಟ ಇಂಥ ಕನ್ನಡ ಶಬ್ದಗಳ ಲಭ್ಯತೆ ಮುಂತಾದ ಆಧಾರದಿಂದ ಕನ್ನಡವನ್ನು ಕ್ರಿಸ್ತಶಕದ ಆರಂಭಕ್ಕಿಂತ ಮೊದಲೇ ಕೆಲಜನ ವಿದ್ವಾಂಸರು ಗುರುತಿಸಿದ್ದಾರೆ. ಕನ್ನಡದಲ್ಲಿ ನಮಗೆ ದೊರೆತ ಅತ್ಯಂತ ಪ್ರಾಚೀನ ಆಧಾವೆಂದರೆ ಕ್ರಿ. ಶ. ೪೫೦ ರ ಹಲ್ಮಿಡಿ ಶಾಸನ. ಹತ್ತನೆಯ ಶತಮಾನಕ್ಕಾಗಲೆ ಕನ್ನಡ ಭಾಷೆ ಸಾಕಷ್ಟು ಸಮೃದ್ಧವಾಗಿತ್ತಷ್ಟೇ ಅಲ್ಲ ಉನ್ನತಮಟ್ಟದ ಸಾಹಿತ್ಯವನ್ನೂ ಹೊಂದಿತ್ತು. ಕಾವೇರಿಯಿಂದ ಗೋದಾವರಿ ನದಿಯವರೆಗೂ ಕನ್ನಡದ ಪ್ರಾದೇಶಿಕ ವ್ಯಾಪ್ತಿ ಪಸರಿಸಿತ್ತು, ಕುರಿತೋದದೆಯೂ ಇಲ್ಲಿನ ಜನರನ್ನು ಕಾವ್ಯಪ್ರಯೋಗ ಪರಿಣತ ಮತಿಗಳನ್ನಾಗಿಸುವಷ್ಟು ಸಾಮರ್ಥ್ಯ ಪಡೆದಿತ್ತು. ಕನ್ನಡ ಭಾಷೆ ಹುಟ್ಟಿ ೬–೭ ಶತಮಾನಗಳ ಅವಧಿಯಲ್ಲಿಯೇ ಸಾಕಷ್ಟು ಪ್ರಬುದ್ಧ ಸಾಹಿತ್ಯ ಪಡೆದು ಜನಜೀವನದ ಎಲ್ಲ ಹಂತಗಳಲ್ಲೂ ಹಾಸುಹೊಕ್ಕಾಗಿತ್ತು. ಕನ್ನಡದಲ್ಲಿ ಪ್ರೌಢ ಸಾಹಿತ್ಯದ ಸುಗ್ಗಿಯ ಕಾಲ, ಸುವರ್ಣಕಾಲ ಬಂದುಹೋದಾಗ ಇನ್ನೂ ಇಂಗ್ಲೀಷ ಆಗಲಿ ಮಲೆಯಾಳಂ ಆಗಲಿ ಜನ್ಮ ತಳೆದಿರಲಿಲ್ಲ. ಮರಾಠಿ, ಹಿಂದಿ ಇನ್ನೂ ಶೈಶವಾವಸ್ಥೆಯಲ್ಲಿದ್ದವು.

ಮನುಷ್ಯ ಸಮಾಜಜೀವಿಯಾದಾಗಿನಿಂದ ಭಾಷಾವ್ಯಾಪಾರದ ಮೂಲಕ ಬದುಕಿನ ವಿವಿಧ ಹಂತಗಳಲ್ಲಿ ಅವನು ತನ್ನ ವ್ಯಕ್ತಿತ್ವದ ವಿಕಸನವನ್ನು ಮಾಡಿಕೊಳ್ಳುತ್ತ ಭಾಷೆಯನ್ನು ಬದುಕಿನ ಮಹತ್ವದ ಅಂಗವನ್ನಾಗಿಸಿಕೊಂಡನು. ಹೀಗೆ ಭಾಷೆಯನ್ನು ತನ್ನ ವಿಕಾಸದ ಪ್ರಮುಖ ಮಾಧ್ಯಮವನ್ನಾಗಿಸಿಕೊಳ್ಳಲು ಸಾಧ್ಯವಾಗಿರುವುದು ಈ ಸೃಷ್ಟಿಯಲ್ಲಿ ಕೇವಲ ಮನುಷ್ಯನಿಗೆ ಮಾತ್ರ ಎಂಬುದನ್ನು ನಾವು ಮರೆಯಬಾರದು. ಅಂತೆಯೆ ಮನುಷ್ಯನ ಮೆದುಳು ಒಂದು ಅದ್ಭುತ ಯಂತ್ರ. ಅದಕ್ಕೆ ಕಲಿಸುವ, ಕಲಿಯುವ, ನೆನಪುಗಳನ್ನು ಸಂಗ್ರಹಿಸುವ ಹೊಸ ಭಾವನೆಗಳನ್ನು ಸೃಷ್ಟಿಸುವ, ಅಭಿವ್ಯಕ್ತಿಸುವ ಇತ್ಯಾದಿ ಸೃಜನಾತ್ಮಕ (creative) ಶಕ್ತಿ ಇದೆ. ಆ ಶಕ್ತಿಯನ್ನು ಸಮರ್ಥವಾಗಿ ಬಳಸಿಕೊಳ್ಳಲು ಮಾತಿನ ಮಾಧ್ಯಮದ ಮೂಲಕ ಅವನಿಗೆ ಸಾಧ್ಯವಾಗಿದೆ. ಉಚ್ಚರಿಸಲ್ಪಡುವ ಉಚ್ಚಾರಗಳಿಗೆ ಧ್ವನಿ ಇದೆ, ಅರ್ಥವಿದೆ, ಭಾವವಿದೆ, ಪರಿವರ್ತನಶೀಲತೆ ಇದೆ, ಉತ್ಪಾದಕ ಗುಣವಿದೆ, ಅಂತೆಯೆ ಭಾಷೆ ಎಷ್ಟು ಸುಲಭವೋ ಅಷ್ಟೇ ಸಂಕೀರ್ಣವೂ ಆಗಿದೆ. ಹೀಗಿರುವುದರಿಂದಲೆ ಭಾಷೆಯ ವಿವರಣೆ ಅದರ ಮೇಲು ನೋಟದ ಅಥವಾ ಸ್ಥೂಲರಚನೆಯ [Surface Structure] ಆಧಾರಗಳಿಂದ ಎಷ್ಟೋ ಸಲ ಸಾಧ್ಯವಾಗದೆ ಹೋಗುತ್ತದೆ. ಆದ್ದರಿಂದ ಯಾವ ವ್ಯಾಕರಣವೂ ವಿಧಾಯಕವಾಗಿ ನಿಲ್ಲಲಾರದೆಂಬುದನ್ನು ಆಧುನಿಕ ಭಾಷಾವಿಜ್ಞಾನಿಗಳು ಕಂಡುಕೊಂಡಿದ್ದಾರೆ.

ಭಾಷೆ ಬಳಕೆಗೊಂಡಂತೆಲ್ಲ ಭಾಷೆಯ ಹುಟ್ಟು ಬೆಳವಣಿಗೆ ಅದರ ವೈಶಿಷ್ಟ್ಯ ಇತ್ಯಾದಿಗಳನ್ನು ತಿಳಿದುಕೊಳ್ಳುವ ಜ್ಞಾನಾರ್ಜನೆಯ ಆಸಕ್ತಿ ಜಿಜ್ಞಾಸೆಗಳು ಬೆಳೆದವು. ಭಾಷೆಯನ್ನು ಬಳಸುವ ಪ್ರತಿಯೊಬ್ಬನೂ ಒಂದು ಬಗೆ ವೈಯಾಕರಣನಾದರೂ ಅದರ ತಿರುಳನ್ನು ಎಳೆ ಎಳೆಯಾಗಿ ಬಿಡಿಸಿ ವಿವರಿಸುವ ಶಾಸ್ತ್ರಚಿಕಿತ್ಸಕ ವೈಯಾಕರಣರು ವ್ಯಾಕರಣ, ಭಾಷಾವಿಜ್ಞಾನಗಳ ಶಾಸ್ತ್ರೀಯ ಇಲ್ಲವೆ ವೈಜ್ಞಾನಿಕ ಪರಿಧಿಯನ್ನು ನಿರ್ಮಿಸಿ ಬೆಳೆಸಿದರು. ವಿಶಿಷ್ಟ ಸಂಪ್ರದಾಯಗಳು, ಶಾಖೋಪಶಾಖೆಗಳು ಹುಟ್ಟಿಕೊಂಡು ಕಾಲಕಾಲಕ್ಕೆ ನವೀನತಮ ಶೋಧನೆಗಳ ಶಾಖೆಗಳ ಮೂಲಕ ಹೊಸ ಹೊಸ ಸಿದ್ಧಾಂತಗಳು ಬೆಳೆದು ಬಂದವು. ವಿವಿಧ ಭಾಷೆಗಳನ್ನು ವಿಶ್ಲೇಷಿಸುವ ಸಿದ್ಧಾಂತಗಳು, ಸಂಪ್ರದಾಯಗಳು ಕಾಲಕಾಲಕ್ಕೆ ವಿವಿಧ ದೇಶ ಕಾಲಗಳಲ್ಲಿ ವಿಭಿನ್ನವಾಗಿ ಬೆಳೆದು ಬಂದಿದ್ದರೂ ಮಾನವ ಭಾಷೆಯ ಮೂಲಭೂತ ಅಂಶಗಳನ್ನು ಶೋಧಿಸಿ ವಿವರಿಸುವಲ್ಲಿ ಕೆಲವು ಮಹತ್ವದ ಸಂಪ್ರದಾಯಗಳು, ಸಿದ್ಧಾಂತಗಳು ವಿಧಾನಗಳು, ಗಮನಾರ್ಹ ಕಾಣಿಕೆಗಳಾಗಿ ನಿಂತಿವೆ.

ಗ್ರೀಕ ಮಾದರಿಯನ್ನು ಲ್ಯಾಟಿನ ಮಾದರಿಯನ್ನು ಇಂಗ್ಲಿಷ್ ಅನುಸರಿಸಿ ವ್ಯಾಕರಣ ಸಂಪ್ರದಾಯವೊಂದು ಬೆಳೆದು ಬಂದಂತೆ ತೋರುತ್ತದೆ. ಸಂಸ್ಕೃತ ವ್ಯಾಕರಣ ಪರಂಪರೆ ಭಾರತೀಯ ಭಾಷೆಗಳಲ್ಲಿ ಇಳಿದು ಬಂದಿದೆ. ಗ್ರೀಕ ಮತ್ತು ಸಂಸ್ಕೃತ ವ್ಯಾಕರಣ ಪರಂಪರೆಯೇ ಪ್ರಪಂಚದಲ್ಲಿ ಅತಿ ಪ್ರಾಚೀನ. ಮಾನವ ಭಾಷೆಯ ಮೂಲವನ್ನು ಹುಡುಕಲು ಹೊರಟದ್ದೇ ವ್ಯಾಕರಣಕ್ಕೆ ನಾಂದಿಯಾಯಿತು. ತತ್ತ್ವಜ್ಞಾನಿಗಳಾದ ಸಾಕ್ರೆಟಿಸ್, ಪ್ಲೇಟೋ ಮುಂತಾದವರು ತತ್ತ್ವಜ್ಞಾನದ ತರ್ಕಬದ್ಧವೂ ಊಹಾತ್ಮಕವೂ ಆದ ಹಿನ್ನೆಲೆಯನ್ನು ಭಾಷೆಯ ವಿವರಣೆಗೆ ಬಳಸಿಕೊಂಡರು.೧

ಪಾಶ್ಚಾತ್ಯ ದೇಶಗಳಲ್ಲಿ ಗ್ರೀಕ್, ಹಿಬ್ರು, ಲ್ಯಾಟಿನ್, ಇಂಗ್ಲಿಷ್ ಭಾಷೆಗಳಲ್ಲಿ ಪ್ರಮುಖ ವ್ಯಾಕರಣ ಪರಂಪರೆ ಬೆಳೆದು ಬಂದಿತು. ೧೯ನೆಯ ಶತಮಾನದ ಅನಂತರವೇ ಇಂಗ್ಲಿಷ್‌ನಲ್ಲಿ ಆಧುನಿಕ ಭಾಷಾವಿಜ್ಞಾನದ ಕಲ್ಪನೆ ಒಡಮೂಡಿತು. ಸರ್ ವಿಲ್ಯಂ ಜೋನ್ಸ (೧೭೮೬), ಎಫ್. ಡಿ. ಸಸ್ಸೂರ (1857) ಎಡ್ವರ್ಡ ಸಪೀರ (1884), ಫ್ರಾಂಜ ಬಾಸ್ (1858), ಲಿಯೊನಾರ್ಡ ಬ್ಲೂಮಫೀಲ್ಡ (1887), ಕೆ. ಎಲ್. ಪೈಕ್ ಮತ್ತು ಅವನ ಅನುಯಾಯಿಗಳು ಇತ್ತೀಚೆ–ಜೆ.ಆರ್. ಫರ್ಥ, ಎಂ. ಎ. ಕೆ. ಹ್ಯಾಲಿಡೇ, ಬ್ಲಾಕ್ ಮತ್ತು ಟ್ರೇಗರ್, ಗ್ಲೀಸನ್, ರಾಬರ್ಟ ಹಾಲ್, ಸಿ ಎಫ್. ಹಾಕೆಟ್, ನಿಯೊಮ್ ಚೋಮ್‌ಸ್ಕಿ ಮುಂತಾದ ಹಲವಾರು ಪಾಶ್ಚಾತ್ಯ ಭಾಷಾವಿಜ್ಞಾನಿಗಳು ಹೊಸ ಹೊಸ ಸಿದ್ಧಾಂತಗಳನ್ನು ಮಂಡಿಸಿದರು. ಇಲ್ಲವೆ ಅವುಗಳನ್ನು ವಿಶದ ಪಡಿಸಿದರು. ಭಾರತಕ್ಕೆ ಆಧುನಿಕ ಭಾಷಾವಿಜ್ಞಾನದ ಪಾಶ್ಚಾತ್ಯ ಸಿದ್ಧಾಂತಗಳ ಪರಿಚಯವಾಗತೊಡಗಿದ್ದು ಹತ್ತೊಂಬತ್ತನೆ ಶತಮಾನದ ಕೊನೆ ಕೊನೆಗೆ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ. ಆದರೆ ಅವನ್ನು ಭಾರತೀಯ ಭಾಷೆಗಳಿಗೆ ಅನ್ವಯಗೊಳಿಸುವುದು ಇನ್ನೂ ತಡವಾಯಿತು.

### 3.1. ಭಾರತೀಯ ವ್ಯಾಕರಣ ಪರಂಪರೆ :

ಪ್ರಪಂಚದ ವ್ಯಾಕರಣದ ಇತಿಹಾಸಕ್ಕೆ ಭಾರತದ ಕೊಡುಗೆ ಅತ್ಯಂತ ಮಹತ್ವಪೂರ್ಣವೂ ಅಪಾರವಾದುದೂ ಆಗಿದೆ. ಸಂಸ್ಕೃತದಲ್ಲಿ ವ್ಯಾಕರಣದ ಇತಿಹಾಸ ವೇದಗಳಷ್ಟು ಹಳೆಯದು. ಋಗ್ವೇದದ ಹತ್ತನೆಯ ಮಂಡಲದಲ್ಲಿ ಇದಕ್ಕೆ ಉಲ್ಲೇಖ ದೊರೆಯುತ್ತದೆ. ಕ್ರಿ.ಶ.ಪೂ. ೮ನೆಯ ಶತಮಾನದ ನಿಘಂಟುಕಾರನಾದ

---

೧ ಉದಾಹರಣೆಗೆ– ಗ್ರೀಕ ಭಾಷೆಯಲ್ಲಿ ರೇಫವು ಚಲನೆಯ ಸಂಕೇತವಾದರೆ ಪಾರ್ಶ್ವಿಕ 'ಲ್' ಧ್ವನಿಯು ಮೃದುತ್ವದ ಸಂಕೇತ. ಇತ್ಯಾದಿ.

ಯಾಸ್ಕನು ಮೊದಲ ಭಾಷಾಶಾಸ್ತ್ರಜ್ಞನೆನಿಸಿದ್ದಾನೆ. ಅಲ್ಲಿಂದ ಮುಂದೆ ಸಂಸ್ಕೃತದಲ್ಲಿ ಸುಮಾರು 14 ವ್ಯಾಕರಣ ಸಂಪ್ರದಾಯಗಳು ಬೆಳೆದು ಬಂದವು. ನೂರಾರು ವ್ಯಾಕರಣಗಳ ಸಹಸ್ರಾರು ವೃತ್ತಿ ವ್ಯಾಖ್ಯಾನಗಳ ಪರಂಪರೆಯೆ ಬೆಳೆಯಿತು. ಯಾಸ್ಕನ ತರುವಾಯ ಸುಮಾರು ಒಂದು ಶತಮಾನ ಗತಿಸಿದ ಮೇಲೆ ಪಾಣಿನಿ ಸುಮಾರು 4000 ಸೂತ್ರಗಳ ಬೃಹತ್ 'ಅಷ್ಟಾಧ್ಯಾಯೀ' ವ್ಯಾಕರಣ ಕೃತಿಯನ್ನು ರಚಿಸಿ ತನ್ನ ಸಂಪ್ರದಾಯವೊಂದನ್ನು ಗಟ್ಟಿ ಬುನಾದಿಯ ಮೇಲೆ ನಿಲ್ಲಿಸಿದನು. ಯಾಸ್ಕ ಹಾಗೂ ಪಾಣಿನಿ ಇವರ ನಡುವಿನ ಕಾಲದಲ್ಲಿ ಇಂದ್ರಗೋಮಿನ್ ಎಂಬ ವೈಯಾಕರಣ ಪ್ರಾರಂಭಿಸಿದ ಐಂದ್ರ ಎಂಬ ವ್ಯಾಕರಣ ಸಂಪ್ರದಾಯವೊಂದಿರ ಬೇಕೆಂಬ ಊಹೆ ಇದೆ. ಆದರೆ ಅಷ್ಟಾಧ್ಯಾಯಿಯ ಸಶಾಸ್ತ್ರೀಯತೆ, ಅಚ್ಚುಕಟ್ಟು ಮುಂದೆ ಬಂದ ಯಾವ ಸಂಪ್ರದಾಯದಲ್ಲೂ ಬಾರದೆ ಇರುವುದರಿಂದ ಇಂದಿಗೂ ಅದುವೆ ಸಂಸ್ಕೃತದ ಪ್ರಮಾಣ ವ್ಯಾಕರಣವೆನಿಸಿದೆ. ಅಂತೆಯೆ ಕನ್ನಡ ವ್ಯಾಕರಣ ಗಳೂ ಅದರ ಪ್ರಭಾವದಡಿಯಲ್ಲಿ ಬೆಳೆದು ಬಂದವು. ಕಾತ್ಯಾಯನ [ಕ್ರಿ.ಶ.ಪೂ. ಸು-350] ಪತಂಜಲಿ [ಕ್ರಿ.ಶ.ಪೂ. ಸು-150] ಚಂದ್ರಗೋಮಿ [ಕ್ರಿ. ಶ. ಸು. 470], ವಿಜಯಾದಿತ್ಯ [ಕ್ರಿ.ಶ.ಸು. 650], ಜಿನೇಂದ್ರ ಬುದ್ಧಿ [ಕ್ರಿ.ಶ.ಸು. 750], ಹರದತ್ತ [ಸು. 1100, ಭರ್ತೃಹರಿ [ಸು. 650], ಕಯ್ಯಟ [ಸು. 1300], ಭಟ್ಟೋಜಿ [ಸು. 1630] ಮುಂತಾದವರು ಪಾಣಿನಿಯ ಸಂಪ್ರದಾಯ ವನ್ನು ಕಾಲಕಾಲಕ್ಕೆ ಭಾಷ್ಯ, ವ್ಯಾಖ್ಯಾನಗಳನ್ನು ಬರೆದು ನಿರಂತರವಾಗಿ ಉಳಿಸಿ ಕೊಂಡು ಬಂದರು. ಪತಂಜಲಿಯ ಭಾಷ್ಯದಿಂದ ಅಷ್ಟಾಧ್ಯಾಯಿಗೆ ಎಲ್ಲಿಲ್ಲದ ಮಹತ್ವ ಬಂದಿತು. ಅಷ್ಟಾಧ್ಯಾಯಿಯನ್ನೆ ಆಶ್ರಯಿಸಿದ ಚಂದ್ರಗೋಮಿಯ ವ್ಯಾಕರಣ ಚಾಂದ್ರಸಂಪ್ರದಾಯ ಎಂಬ ಸಂಪ್ರದಾಯವನ್ನೇ ನಿರ್ಮಿಸುವಷ್ಟು ಜನಪ್ರಿಯವಾಯಿತು. ಇದು ಬೌದ್ಧ ವ್ಯಾಕರಣವೆನಿಸಿದೆ. ಕ್ರಿ.ಶ.ಸು. ೫ನೆಯ ಶತ ಮಾನದಲ್ಲಿದ್ದ ಕರ್ನಾಟಕದ ದೇವನಂದಿ ಅಥವಾ ಪೂಜ್ಯಪಾದ ಜೈನೇಂದ್ರ ವ್ಯಾಕ ರಣವನ್ನು ಪಾಣಿನಿಯನ್ನನುಸರಿಸಿ ಬರೆದರೂ ಕನ್ನಡ ವೈಯಾಕರಣರು ಅದೇಕೋ ಅದಕ್ಕೆ ಅಷ್ಟಾಗಿ ಋಣಿಯಾದಂತೆ ತೋರುವುದಿಲ್ಲ. ಕರ್ನಾಟಕದ ಇನ್ನೊಬ್ಬ ಪ್ರಾಚೀನ ಜೈನ ವೈಯಾಕರಣ ಶಾಕಟಾಯನ ನೃಪತುಂಗನ ಆಸ್ಥಾನ ಪಂಡಿತ. ಇವನು 'ಶಬ್ದಾನುಶಾಸನ' ವಲ್ಲದೆ ಇನ್ನೂ ಕೆಲವು ಕೃತಿಗಳನ್ನು ರಚಿಸಿದ್ದಾನೆ. ಭಟ್ಟಾಕಳಂಕ ಈ ಶಬ್ದಾನುಶಾಸನದಿಂದ ಸೂತ್ರಗಳನ್ನು ಉದಾಹರಿಸಿದ್ದಾನೆ. ಆದರೆ ನಾಗವರ್ಮ ಕೇಶಿರಾಜರು ಇದರಿಂದ ಪ್ರಭಾವಿತರಾದಂತೆ ತೋರುವುದಿಲ್ಲ. ಪಾಣಿನಿ ಸಂಪ್ರದಾಯದಿಂದ ೧೧ನೆಯ ಶತಮಾನದಲ್ಲಿ ಹುಟ್ಟಿದ ಮತ್ತೊಂದು ವ್ಯಾಕರಣ

ಹೇಮಚಂದ್ರನ 'ಶಬ್ದಾನುಶಾಸನ', ಪಾಣಿನಿಯನ್ನು ಅನುಸರಿಸಿಯೂ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡು ಕ್ಲಿಷ್ಟತೆಗಳನ್ನು ತೊಡೆದುಹಾಕಿ ಸಾಮಾನ್ಯರೂ ಅರ್ಥಮಾಡಿಕೊಳ್ಳುವಂತೆ ಜನಪ್ರಿಯ ವ್ಯಾಕರಣವನ್ನು ರಚಿಸಿರುವ ಕೀರ್ತಿ ಪ್ರಾಯಶಃ ಕರ್ನಾಟಕದವನಾಗಿರಬಹುದಾದ **ಶರ್ವವರ್ಮ** ನಿಗೆ ಸಲ್ಲುತ್ತದೆ. ಇವನ '**ಕಾತಂತ್ರ**' ವ್ಯಾಕರಣ ಸಂಪ್ರದಾಯ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ತುಂಬ ಪ್ರಚಲಿತವಿದ್ದಂತೆ ತೋರುತ್ತದೆ. ಕನ್ನಡ ವೈಯಾಕರಣರು ಶರ್ವವರ್ಮನ ಸಂಪ್ರದಾಯಕ್ಕೆ ಹೆಚ್ಚು ಋಣಿಯಾಗಿದ್ದಾರೆ, ಸಂಸ್ಕೃತದಲ್ಲಿ ಸ್ವರೂಪಾಚಾರ್ಯನ ಸಾರಸ್ವತ ಸಂಪ್ರದಾಯ, 'ಮುಗ್ಧಬೋಧ' ರಚಿಸಿದ ಬೋಪದೇವನ ಸಂಪ್ರದಾಯ, 'ಸಂಕ್ಷಿಪ್ತಸಾರ'ದ ಕರ್ತೃ ಜುಮಾರನಂದಿಯ ಸಂಪ್ರದಾಯ, ಪದ್ಮನಾಭಭಟ್ಟನ 'ಸೌಪದ್ಮಸಂಪ್ರದಾಯ' ಮುಂತಾದ ಸಂಪ್ರದಾಯಗಳು ಬಂದರೂ ಅವಾವವೂ ಕನ್ನಡ ವ್ಯಾಕರಣಗಳ ಮೇಲೆ ಏನೂ ಪ್ರಭಾವ ಬೀರಲಿಲ್ಲ.

## 3.2 ಪ್ರಾಚೀನ ಕನ್ನಡ ವ್ಯಾಕರಣಗಳು :

**3.2.1 ಕವಿರಾಜಮಾರ್ಗ :** ಕನ್ನಡ ವ್ಯಾಕರಣದ ಇತಿಹಾಸ ಪ್ರಾರಂಭವಾಗುವುದು ಕನ್ನಡದ ಉಪಲಬ್ಧ ಪ್ರಥಮ ಕೃತಿ ಕವಿರಾಜ ಮಾರ್ಗದಿಂದ. ಆದರೆ ಶ್ರೀವಿಜಯ (814–877) ನಿಗೂ ಮುಂಚೆಯೆ ಕನ್ನಡ ವ್ಯಾಕರಣ ಸಂಪ್ರದಾಯ ಬೆಳೆದು ಬಂದಿರಬಹುದುದೆಂಬ ಸೂಚನೆಗಳು ಕವಿರಾಜಮಾರ್ಗದಲ್ಲೇ ದೊರೆಯುತ್ತವೆ. ಕವಿರಾಜಮಾರ್ಗ ಮೂಲತಃ ಅಲಂಕಾರಶಾಸ್ತ್ರಕ್ಕೆ ಮೀಸಲಾದ ಕೃತಿಯಾದರೂ ಅದರ ಮೊದಲ ಪರಿಚ್ಛೇದದಲ್ಲಿಯೇ ಕಾವ್ಯವು ವ್ಯಾಕರಣ ದೋಷರಹಿತವಾಗಲು ಬೇಕಾಗುವ ಕೆಲವು ವ್ಯಾಕರಣ ವಿಷಯಗಳನ್ನು ವಿವರವಾಗಿ ಸೂಚಿಸಿದ್ದಾನೆ. ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರು ಇವುಗಳ ಬಹಳಷ್ಟು ವಿಷಯಗಳನ್ನು ತಪ್ಪದೇ ತಮ್ಮ ವ್ಯಾಕರಣದಲ್ಲಿ ನಮೂದಿಸಿದ್ದಾರೆ. ಪಳಗನ್ನಡವನ್ನು ಪೊಲೆಗೆಡಿಸಿ ನುಡಿಯುತ್ತಿದ್ದರೆಂದು ಹೇಳುವಲ್ಲಿ ಶ್ರೀವಿಜಯನು ಕನ್ನಡದ ಅವಸ್ಥಾಂತರಗಳನ್ನು ಗಮನವಿಟ್ಟು ನೋಡಿದ್ದಾನೆ. ತಿರುಳುಗನ್ನಡ ಪ್ರದೇಶದ ಮೇರೆಗಳನ್ನು ಹೇಳುವಲ್ಲಿ ಕನ್ನಡದ ಪ್ರಾದೇಶಿಕತೆಯನ್ನು ಸೂಚಿಸಿದ್ದಾನೆ. ದಕ್ಷಿಣೋತ್ತರ ಮಾರ್ಗಗಳನ್ನು ಹೇಳುವಲ್ಲಿ ಭಾಷಾಶೈಲಿಯನ್ನು ಗಮನಿಸಿದ್ದಾನೆ. ಶ್ರೀವಿಜಯನು ಹೇಳಿರುವ ಕಾರಕ ವಿಷಯ, ವಚನ ವಿಚಾರ, ಕ್ರಿಯಾವಿಶೇಷಣ ಪ್ರಯೋಗ, ವಿಶೇಷಣ ವಿಶೇಷ್ಯ ಪದಗಳ ಸಮಾನ, ಅರಿಸಮಾಸ (ಈ ಪದವನ್ನು ಶ್ರೀವಿಜಯನು ಬಳಸಿಲ್ಲ), ಸನ್ನು ಸಂಸ್ಕೃತ ಮುಂತಾದ ಅನೇಕ ವ್ಯಾಕರಣ ವಿಷಯಗಳನ್ನು, ಕುರಿತು ವಿವ...

...ಳುವಲ್ಲಿ

ಆಪನೊಬ್ಬ ವೈಯಾಕರಣನಾಗಿ ನಮಗೆ ತೋರುತ್ತಾನೆ. ಕೇಶಿರಾಜ, ಭಟ್ಟಾಕಳಂಕರು ಅದೇಕೋ ಶ್ರೀವಿಜಯನ ವ್ಯಾಕರಣ ವಿಚಾರಗಳೆಡೆಗೆ ಲಕ್ಷ್ಯ ಕೊಟ್ಟಿಲ್ಲ, ಕವಿರಾಜಮಾರ್ಗದ ವ್ಯಾಕರಣ ವಿಚಾರಗಳನ್ನು ಅವರು ಎತ್ತಿಕೊಂಡಿದ್ದರೆ ಅವರ ವ್ಯಾಕರಣಗಳು ಇನ್ನೂ ಉತ್ತಮವಾಗಬಹುದಾಗಿತ್ತು.

### 3.2.2. ಅನುಪಲಬ್ಧ ವ್ಯಾಕರಣಗಳು :

ಕವಿರಾಜಮಾರ್ಗದ ಅನಂತರ ಸುಮಾರು ಇನ್ನೂರು ವರ್ಷಗಳ ಸುದೀರ್ಘ ಅವಧಿಯಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಯಾವ ಕೃತಿಗಳೂ ಸೃಷ್ಟಿಯಾಗದೆ ಇರಲಾರವು ಆದರೆ ದುರ್ದೈವದಿಂದ ಅಂಥ ಯಾವ ಕೃತಿ ಈವರೆಗೆ ಸಿಕ್ಕಿಲ್ಲ. ಧರ್ಮಾಮೃತದ ನಯಸೇನನಲ್ಲದೆ ವ್ಯಾಕರಣದ ನಯಸೇನನೊಬ್ಬ ಇರಬೇಕೆಂದು ಊಹಿಸಲಾಗಿದೆ. ಶಂಖವರ್ಮ, ಗುಣವರ್ಮ, ಒಂದನೆಯ ನಾಗವರ್ಮ, 'ಶಬ್ದಾವತಾರ' ಕೃತಿಯನ್ನು ರಚಿಸಿದ ದುರ್ವಿನೀತ (೬ ನೇ ಶತಮಾನ) ಇವರ ಕೃತಿಗಳು ದೊರೆಯುವವರೆಗೆ ಇವರ ವ್ಯಾಕರಣತ್ವ ಊಹೆಯ ಕೂಸು ಮಾತ್ರ. ಕವಿ ರನ್ನ ವೈಯಾಕರಣ ಎಂಬುದಿನ್ನೂ ಖಚಿತವಾಗಬೇಕಾಗಿದೆ.

### 3.2.3 ಉಪಲಬ್ಧ ವ್ಯಾಕರಣಗಳು :

ಉಪಲಬ್ಧವಾಗಿರುವ ಪ್ರಾಚೀನ ಕನ್ನಡ ವ್ಯಾಕರಣಗಳು ಒಟ್ಟು ಮೂರುವರೆ.

೧. ನಾಗವರ್ಮನ (ಕ್ರಿ. ಶ. 1042) ಕರ್ನಾಟಕ ಭಾಷಾಭೂಷಣ

೨. ಅವನದೇ ಆದ (?) ಕಾವ್ಯಾವಲೋಕನದಲ್ಲಿಯ 'ಶಬ್ದಸ್ಮೃತಿ ಭಾಗ'೧.

೩. ಕೇಶಿರಾಜನ (ಕ್ರಿ. ಶ. 1260) ಶಬ್ದಮಣಿದರ್ಪಣ.

೪. ಭಟ್ಟಾಕಳಂಕನ (ಕ್ರಿ. ಶ. 1586–1615) ಶಬ್ದಾನುಶಾಸನ.

ಕನ್ನಡ ಭಾಷೆ ಪ್ರಬುದ್ಧಗೊಂಡು ಸು. 1400 ವರ್ಷಗಳ ಸುದೀರ್ಘ ಅವಧಿಯಲ್ಲಿ ಕೇವಲ ಬೆರಳೆಣಿಕೆಯಷ್ಟಿರುವ ಈ ವ್ಯಾಕರಣಗಳಲ್ಲಿ ಮೊದಲನೆಯದು ಹಾಗೂ ಕೊನೆಯದು ಸಂಸ್ಕೃತದಲ್ಲಿ ಬರೆಯಲ್ಪಟ್ಟ ಕನ್ನಡ ವ್ಯಾಕರಣಗಳಾದರೆ

---

೧ ಕಾವ್ಯಾವಲೋಕನ ಹಾಗೂ ಭಾಷಾಭೂಷಣ ಕೃತಿಗಳು ಇಬ್ಬರು ಬೇರೆ ಬೇರೆ ನಾಗವರ್ಮರಿಂದ ರಚಿತವಾಗಿವೆ. ಒಬ್ಬ ನಾಗವರ್ಮನಿಂದಲ್ಲ- ಎಂಬ ಅಭಿಪ್ರಾಯವೂ ಇದೆ. (ನೋಡಿ ಪಿ. ಕೃಷ್ಣಭಟ್ ಕರ್ನಾಟಕ ಭಾರತಿ 8–4–1976 ಪುಟ 313)

'ಶಬ್ದಸ್ಮೃತಿ' ಮತ್ತೊಂದು ಕೃತಿಯ ಭಾಗ ಮಾತ್ರವಾಗಿ ಬಂದಿರುವುದರಿಂದ ಅದಕ್ಕೆ ಗ್ರಂಥ ವ್ಯಾಪ್ತಿ ಇಲ್ಲ. ಹೀಗಾಗಿ ಕನ್ನಡದಲ್ಲಿ ಸಮಗ್ರವ್ಯಾಕರಣ ಗ್ರಂಥ ಒಂದೇ ಒಂದು ಅದುವೆ ಕೇಶಿರಾಜನ ಶಬ್ದಮಣಿದರ್ಪಣ. ನಾಗವರ್ಮ ಭಟ್ಟಾಕಳಂಕರು ತಮ್ಮ ಕೃತಿಗಳನ್ನು ಸಂಸ್ಕೃತದಲ್ಲಿ ಬರೆದಿರುವುದಕ್ಕೆ ಅವರಿಗೆ ನಿರ್ದಿಷ್ಟ ಕಾರಣಗಳಿರಬೇಕು. 'ಶಬ್ದಸ್ಮೃತಿ' ಕನ್ನಡದಲ್ಲಿದ್ದುದರಿಂದ ತಕ್ಕಮಟ್ಟಿಗೆ ಸಂಸ್ಕೃತದಿಂದ ಭಿನ್ನ ರೀತಿಯಲ್ಲಿ ವ್ಯಾಕರಣಾಂಶಗಳನ್ನು ನಿರೂಪಿಸಲು ನಾಗವರ್ಮನಿಗೆ ಸಾಧ್ಯವಾಯಿತು. [ಉದಾಹರಣೆಗೆ- ಶಬ್ದಸ್ಮೃತಿಯಲ್ಲಿ ಪ್ರತ್ಯಾಹಾರ ಸೂತ್ರಗಳನ್ನು ಬಿಟ್ಟಿರುವುದು].

ಕರ್ನಾಟಕ ಲಕ್ಷಣ ಶಬ್ದಶಾಸ್ತ್ರವೆಂದು ತಾನೇ ಕರೆದ ಕೇಶಿರಾಜನ ಶಬ್ದಮಣಿದರ್ಪಣವು ಕನ್ನಡ ವ್ಯಾಕರಣಕ್ಷೇತ್ರದ ಅಮೌಲ್ಯ ಕೊಡುಗೆ. ಶಬ್ದಮಣಿದರ್ಪಣವು ಬಹುಜನಪ್ರಿಯ ವ್ಯಾಕರಣವಾದ್ದರಿಂದ ಬಹು ಸಂಖ್ಯೆಯ ಹಸ್ತ ಪ್ರತಿಗಳು ಲಭಿಸಿವೆ. ಅವುಗಳಲ್ಲಿಯ ವೃತ್ತಿ, ಪ್ರಯೋಗ, ಪಾಠಭೇದದಿಂದಾಗಿ ಸರಿಯಾಗಿ ಸಂಪಾದನೆ ಮಾಡುವುದೇ ಕಷ್ಟವೆಂದು ಡಿ.ಎಲ್.ಎನ್. ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ನಿರ್ಮಾಣವಾದ ಪ್ರಾಚೀನ ವ್ಯಾಕರಣಗಳಲ್ಲಿ ಶಬ್ದಮಣಿದರ್ಪಣ ವಿಶೇಷ ಮನ್ನಣೆ ಪಡೆದಿದೆ, ಸಂಸ್ಕೃತದ ಚೌಕಟ್ಟಿನಲ್ಲಿ ಕನ್ನಡ ವ್ಯಾಕರಣವನ್ನು ರಚಿಸಿದ್ದರೂ, ತನ್ನಕಾಲದವರೆಗಿನ ಕನ್ನಡದ ಬೆಳವಣಿಗೆಗಳೆಡೆಗೆ ಅವನು ಎಚ್ಚರಿಕೆಯಿಂದ ಗಮನ ನೀಡಿದುದು ಒಂದು ವಿಶೇಷ. ಹಾಗೆಯೆ ತನ್ನ ವ್ಯಾಕರಣಕ್ಕೆ ಕಾವ್ಯಲೇಪನವನ್ನು ನೀಡಿ ಅದನ್ನು ಶುಷ್ಕವಾಗದಂತೆ ನೋಡಿಕೊಂಡಿದ್ದಾನೆ. ತನ್ನ ಹಿಂದಿನ 400 ವರ್ಷಗಳ ಅವಧಿಯ ಕನ್ನಡವನ್ನು ವರ್ಣನಾತ್ಮಕ ಶೈಲಿಯಲ್ಲಿ ಸಂಸ್ಕೃತ ಮಾದರಿಯನ್ನು ಇಟ್ಟುಕೊಂಡು ವಿವರಿಸಿರುವುದರಿಂದ ಕೆಲವು ಅಭಾಸಗಳೂ ಉಂಟಾಗಿವೆ.

ಗಮಕ ಸಮಾಸದಿಂ ಅಱಕುಳಕ್ಷಳದಿಂ ಪ್ರತಿಸಹ್ಯಸಂಧಿಯಿಂ
ಸಮುಚಿತವಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ
ವಮಹಪಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂ ಪದೋ
ತ್ತಮ ಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ

ಎಂದು ಕನ್ನಡದ ವೈಶಿಷ್ಟ್ಯಗಳನ್ನು ಪಟ್ಟಿಮಾಡಿದರೂ ಇವು ದರ್ಪಣದ ವೈಶಿಷ್ಟ್ಯಗಳೆಂದರೆ ಹೆಚ್ಚು ಉಚಿತ.

ಭಟ್ಟಾಕಳಂಕನ (1604) ಶಬ್ದಾನುಶಾಸನ ಸಂಸ್ಕೃತದಲ್ಲಿದ್ದರೂ ಕನ್ನಡ ವ್ಯಾಕರಣ ವಿಷಯಗಳನ್ನು ಸಮಗ್ರವಾಗಿ ಒಳಗೊಂಡ ಬೃಹತ್ ವ್ಯಾಕರಣ ಕೃತಿ. ಕೇವಲ ಗಾತ್ರದ ದೃಷ್ಟಿಯಿಂದಲ್ಲ, ಸತ್ವ, ಕ್ರಮಬದ್ಧತೆ ಹಾಗೂ ಶಾಸ್ತ್ರದೃಷ್ಟಿಗಳಲ್ಲಿಯೂ ಇದು ಉತ್ತಮ ಕೃತಿ. ಅಂತೆಯೆ ಇದನ್ನು ಕನ್ನಡದ ಅಷ್ಟಾಧ್ಯಾಯಿ ಎಂದೂ ಹೇಳಲಾಗುತ್ತದೆ. ಎಂ. ವಿ. ಸೀತಾರಾಮಯ್ಯ ಅವರು ಕೇಶಿರಾಜನನ್ನು ಕನ್ನಡದ ಪಾಣಿನಿ ಎಂದು ಕರೆದರೆ ಭಟ್ಟಾಕಳಂಕನನ್ನು ಅಭಿನವ ಪಾಣಿನಿ ಎಂದಿದ್ದಾರೆ[೧] ಆದರೆ ಶಬ್ದಾನುಶಾಸನವನ್ನು ಬರೆದವನೊಬ್ಬ ಬೇರೆ (ಪ್ರಾಯಶಃ ಅವನ ಗುರು ಅಕಲಂಕ) ಇರಬೇಕು. ಭಟ್ಟಾಕಳಂಕನು ಸೂತ್ರ ವೃತ್ತಿ, ಮಾತ್ರ ಬರೆದನೆಂಬ ಅಭಿಪ್ರಾಯವೂ ಇದೆ.[೨] ಅಷ್ಟಾಧ್ಯಾಯಿ ಕಾತಂತ್ರ ಜೈನೇಂದ್ರ ವ್ಯಾಕರಣ, ಶಬ್ದಮಣಿದರ್ಪಣಗಳಿಗೆ ಶಬ್ದಾನುಶಾಸನ ಋಣಿಯಾಗಿದೆ. ಭಾಷಾಭೂಷಣದಿಂದ ಕೇವಲ ಒಂದೆರಡು ಸೂತ್ರ ಪದ್ಧತಿಯನ್ನೇ ಹೆಚ್ಚು ಅನುಸರಿಸಿದ್ದಾನೆ. ಹೀಗಾಗಿ ಭಟ್ಟಾಕಳಂಕನು ಸಂಸ್ಕೃತ ಮಾದರಿಯನ್ನು ಕಟ್ಟುನಿಟ್ಟಾಗಿ ಅನುಸರಿಸಲು ಹೆಣಗಿ[೩] ಟೀಕೆಗೆ ಗುರಿಯಾಗಿದ್ದಾನೆ. ಕನ್ನಡ ಕಾವ್ಯಗಳಿಂದ ಉದಾಹರಣೆಗಳನ್ನು ಭಟ್ಟಾಕಳಂಕ ಅಷ್ಟಾಗಿ ಎತ್ತಿಕೊಟ್ಟಿಲ್ಲ. ಗಣಪಾಠಗಳನ್ನು ಎಚ್ಚರಿಕೆಯಿಂದ ಸಿದ್ಧಪಡಿಸಿ ಕೊಟ್ಟಿದ್ದಾನೆ.

### 3.2.4 ಶಬ್ದಸ್ಮೃತಿ :

ಎರಡನೆಯ ನಾಗವರ್ಮನ (1042) ಕಾವ್ಯಾವಲೋಕನವೆಂಬ ಗ್ರಂಥದ ಮೊದಲನೆಯ ಭಾಗ ಕನ್ನಡ ವ್ಯಾಕರಣವನ್ನು ಒಳಗೊಂಡ ಶಬ್ದಸ್ಮೃತಿ. ಕಾವ್ಯಾವಲೋಕನ ಕಾವ್ಯಮೀಮಾಂಸೆಗೆ ಮೀಸಲಾಗಿರುವ ಕೃತಿ. ಕವಿರಾಜಮಾರ್ಗದ ಅನಂತರ ಸುಮಾರು ಮುನ್ನೂರು ವರ್ಷಗಳ ಮೇಲೆ ಕನ್ನಡದಲ್ಲಿ ಮತ್ತೆ ವ್ಯಾಕರಣ ವಿವರಣೆ ಬಂದುದು ಕಾವ್ಯಾವಲೋಕನದಲ್ಲಿಯೇ. ಕಾವ್ಯಾವಲೋಕನದಲ್ಲಿ ೧. ಶಬ್ದಸ್ಮೃತಿ ೨. ಕಾವ್ಯಮಲವ್ಯಾವೃತ್ತಿ ೩. ಗುಣವಿವೇಕ ೪. ರೀತಿಕ್ರಮರಸನಿರೂಪಣ ೫. ಕವಿ

---

೧ ಪ್ರಾಚೀನ ಕನ್ನಡ ವ್ಯಾಕರಣಗಳು ಪು. ೧೦೩ (ಪ್ರಥಮ ಆವೃತ್ತಿ)

೨ ಪಿ. ರಾಮಭಟ್ ಕರ್ನಾಟಕ ಶಬ್ದಾನುಶಾಸನದ ಕರ್ತೃ - ಕರ್ನಾಟಕ ಭಾರತಿ ೧೦-೪ (೧೯೭೮)

೩ ತೇಚ ಸಂಸ್ಕೃತ ಶಬ್ದವತ್ ಸಕಲ ದೇಶ ಪ್ರಸಿದ್ಧ : ಸಕಲ ಶಾಸ್ತ್ರೋಪಯೋಗಿ ತಯಾ ಸಕಲಮಹಾಜನ ಪರಿಗ್ರಾಹ್ಯಾಶ್ಚೈವ ಭವಂತಿ ನ ಪಂಡಿತಾನಾಮಿತಿ ನೈತೆ ಅನುಶಾಸ್ಯಾ। ಪ್ರಯೋಗಾ ಸಹಂತ್ವಾತ್.

—ಭಟ್ಟಾಕಳಂಕ

ಸಮಯ ಎಂಬ ಐದು ಅಧಿಕರಣಗಳಿವೆ. ಇವುಗಳಲ್ಲಿ ಮೊದಲನೆಯದು ಕನ್ನಡ ವ್ಯಾಕಣರಕ್ಕೆ ಸಂಬಂಧಿಸಿದರೆ ಉಳಿದವು ಕಾವ್ಯಮೀಮಾಂಸೆಗೆ ಸಂಬಂಧಿಸಿವೆ. 'ಶಬ್ದ ಸ್ಮೃತಿ' ಯನ್ನು [ಶಬ್ದ ಸಂಸ್ಮರಣವನ್ನೂ] ಜನರು ತಿಳಿಯುವಂತೆ ಮಾಡಿ ಬರೆದುದ ರಿಂದ ವಿದ್ವಜ್ಜನರ ಸಭೆಯಲ್ಲಿ ನಾಗವರ್ಮನಿಗೆ ಅಗ್ರಪೂಜೆ ಲಭಿಸಿತಂತೆ ! ಮಹಾಮಹಿ ಮಾನುಭಾವದಿಂದ 'ಅಭಿನವ ಶರ್ವವರ್ಮ' ಎಂಬ ಬಿರುದು ನೀಡಿ ನಾಗವರ್ಮ ನನ್ನು ಗೌರವಿಸಲಾಯಿತೆಂದು ತಾನೇ ಶಬ್ದಸ್ಮೃತಿಯ ಕೊನೆಯ ನುಡಿಯಲ್ಲಿ ಹೇಳಿ ಕೊಂಡಿದ್ದಾನೆ. ೯೭ ಸೂತ್ರಗಳಲ್ಲಿ ಸಂಕ್ಷಿಪ್ತವಾಗಿ ಕನ್ನಡ ವ್ಯಾಕರಣ ವಿವೇಚನೆ ಅಲ್ಲದೆ ೩೨೪ ಉದಾಹರಣೆಗಳ ನುಡಿಗಳಿಂದ ಇದು ಒಳಗೊಂಡಿದೆ. ಕವಿರಾಜ ಮಾರ್ಗದಲ್ಲಿ ಅಲ್ಲಲ್ಲಿ ಚದುರಿದಂತೆ ಬರುವ ವ್ಯಾಕರಣ ವಿವರಣೆಗೂ ಕಾವ್ಯಾವ ಲೋಕನದಲ್ಲಿ ಆರಂಭದ ಒಂದು ಸಂಪೂರ್ಣ ಅಧಿಕರಣವೇ ಪ್ರತ್ಯೇಕವಾಗಿ ಮೀಸ ಲಾಗಿ ಬರುವ ವ್ಯಾಕರಣ ವಿವರಣೆಗೂ ಬಹಳ ವ್ಯತ್ಯಾಸವಿದೆ. ಆ ದೃಷ್ಟಿಯಲ್ಲಿ ಶಬ್ದಸ್ಮೃತಿ ಒಂದು ಸ್ವತಂತ್ರ ವ್ಯಾಕರಣವೇ ಆಗಬಹುದು.

ನಾಗವರ್ಮನೇ ಕನ್ನಡದ ಆದಿವ್ಯಾಕರಣಕಾರ. ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲೂ (ಕರ್ನಾಟಕ ಭಾಷಾಭೂಷಣ) ರಚಿಸಿದುದು ಇವನ ಇನ್ನೊಂದು ವೈಶಿಷ್ಟ್ಯ. ಕನ್ನಡ ಭಾಷೆಯ ಬಗೆಗೆ ರಚಿತವಾದ ಮೊಟ್ಟಮೊದಲ ವ್ಯಾಕರಣ ಸಂಸ್ಕೃತದಲ್ಲಿ ಮೂಡಿ ಬಂದುದೊಂದು ವಿಶೇಷವೇ. ನಾಗವರ್ಮನ ಅನಂತರ ಬಂದ ವೈಯಾಕರಣರು ಒಂದಿಲ್ಲೊಂದು ಬಗೆಯಲ್ಲಿ ಇವನ ಪ್ರಭಾವಕ್ಕೆ ಒಳಗಾಗಿದ್ದಾರೆ. ೧ ನಾಗವರ್ಮನು ಸಂಸ್ಕೃತ ಹಾಗೂ ಕನ್ನಡಗಳೆರಡರಲ್ಲಿಯೂ ಪಂಡಿತನಾಗಿದ್ದ ನೆಂಬುದು ಅವನ ಕೃತಿಗಳಿಂದಲೇ ವ್ಯಕ್ತವಾಗುತ್ತದೆ. ಆದುದರಿಂದ ಸಹಜವಾಗಿಯೇ ಸಂಸ್ಕೃತದ ಪಡಿಯಚ್ಚಿನಲ್ಲಿಯೇ ಕನ್ನಡ ವ್ಯಾಕರಣವನ್ನು ಎರಕಹೊಯ್ದನು. ಪ್ರಾಯಶಃ ಈ ಪರಂಪರೆ ಹಾಗೆಯೆ ೧೯ ನೆಯ ಶತಮಾನದವರೆಗೂ ಮುನ್ನಡೆಯಿತು. ೧೭ ನೆಯ ಶತಮಾನದ ಭಟ್ಟಾಕಳಂಕನಿಗೂ ನಾಗವರ್ಮ ಸಂಸ್ಕೃತದಲ್ಲಿ ಬರೆದ ಕನ್ನಡ ವ್ಯಾಕರಣ ಸ್ಫೂರ್ತಿ ನೀಡಿತು. ಅಂತೆಯೇ ಅವನೂ 'ಶಬ್ದಾನುಶಾಸನ' ವೆಂಬ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ರಚಿಸಿದನು. ಛಂದೋವಿಚಿತಿ, ಕರ್ನಾಟಕ ಭಾಷಾಭೂಷಣ, ವಸ್ತುಕೋಶ, ಕಾವ್ಯಾವಲೋಕನ ಇಂಥ ಕೃತಿಗಳನ್ನು

---

೧. ಕೇಶಿರಾಜನಂತೂ ತನ್ನ ದರ್ಪಣದಲ್ಲಿ ಒಂದನೂರಕ್ಕೂ ಹೆಚ್ಚು ಉದಾಹರಣೆ ಗಳನ್ನು ನಾಗವರ್ಮನಿಂದ ಪಡೆದಿದ್ದಾನೆ.

ಅವಲೋಕಿಸಿದರೆ ನಾಗವರ್ಮ ಒಳ್ಳೆಯ ಶಾಸ್ತ್ರಜ್ಞನಾಗಿದ್ದನೆಂಬುದು ತಿಳಿಯುತ್ತದೆ. ಶಬ್ದಸ್ಮೃತಿ ಎಂದರೆ ಶಬ್ದಗಳ ಸಂಸ್ಮರಣವನ್ನು ಜನಕ್ಕೆ ಉಂಟು ಮಾಡಿ ಕೊಡುವುದರ ಮೂಲಕ ಅವರಿಗೆ ಜ್ಞಾನ ನೀಡುವುದಾಗಿದೆ ಎಂದು ನಾಗವರ್ಮನ ಅಭಿಪ್ರಾಯ.

ಶಬ್ದಸ್ಮೃತಿಯಲ್ಲಿ ೧. ಸಂಜ್ಞಾಪ್ರಕರಣ ೨. ಸಂಧಿಪ್ರಕರಣ ೩. ನಾಮ ಪ್ರಕರಣ ೪. ಸಮಾಸಪ್ರಕರಣ ೫. ತದ್ಧಿತಪ್ರಕರಣ ಹಾಗೂ ೬. ಅಖ್ಯಾತ ಪ್ರಕರಣಗಳಲ್ಲಿ ಕನ್ನಡ ನುಡಿಯನ್ನು ವಿವರಿಸಲಾಗಿದೆ. ಯಾವ ವಿಚಾರವೇ ಇರಲಿ ನಾಗವರ್ಮನು ಹೆಚ್ಚು ನಿರ್ದಿಷ್ಟವಾಗಿ, ಖಚಿತವಾಗಿ, ನಿರ್ಣಾಯಕವಾಗಿ, ಸೋದಾಹರಣವಾಗಿ ವಿವರಿಸುತ್ತಾನೆ.

ಕಾವ್ಯಾವಲೋಕನವನ್ನು ಸಂಪೂರ್ಣವಾಗಿ ಕ್ರಿ.ಶ. ೧೯೦೩ರಲ್ಲಿ ಬೆಂಗಳೂರಿನಲ್ಲಿ ಆರ್. ನರಸಿಂಹಾಚಾರ್ಯರು ಮೊದಲ ಬಾರಿ ಬೇರೆಬೇರೆ ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿ ಪ್ರಕಟಿಸಿದರು. ೧೯೩೯ ರಲ್ಲಿ ಎಂ. ಎಸ್. ಬಸವಲಿಂಗಯ್ಯ ಅವರ ಸಂಪಾದಕತ್ವದಲ್ಲಿ ಅದರ ಪರಿಷ್ಕೃತ ಎರಡನೆಯ ಮುದ್ರಣ ಹೊರಬಂದಿತು. ಈ ಎರಡೂ ಮುದ್ರಿತ ಗ್ರಂಥಗಳನ್ನು ಹಾಗೂ ಎರಡು ಹೊಸ ಓಲೆ ಪ್ರತಿಗಳ ಆಧಾರದಿಂದ ಮತ್ತೊಮ್ಮೆ ಮೈಸೂರು ವಿಶ್ವವಿದ್ಯಾಲಯದಿಂದ ಎಚ್. ದೇವಿರಪ್ಪನವರ ಸಂಪಾದಕತ್ವದಲ್ಲಿ ಸಂಪಾದಿಸಲ್ಪಟ್ಟು ಕ್ರಿ. ಶ. ೧೯೬೭ ರಲ್ಲಿ ಮತ್ತೆ ಪ್ರಕಟಿತಗೊಂಡಿತು. ಕ್ರಿ. ಶ.೧೯೩೯ ರಲ್ಲಿಯೆ ಉತ್ತರ ಕರ್ನಾಟಕದಲ್ಲಿ ಶಿ. ಶಿ. ಬಸವನಾಳ ಹಾಗೂ ಕೆ. ಶಂಕರ ನಾರಾಯಣ ಅವರೂ ತಮಗೆ ದೊರೆತ ತಾಡೋಲೆಗಳ ಆಧಾರದಿಂದ ಕಾವ್ಯಾವಲೋಕನವನ್ನು ಸಂಪಾದಿಸಿ ವಿದ್ಯಾವರ್ಧಕ ಸಂಘ ಧಾರವಾಡದಿಂದ ಪ್ರಕಟಿಸಿದ್ದಾರೆ. ಇದೀಗ ಜಿ. ಎಸ್. ಕಾಪಸೆ ಅವರು ಶಬ್ದಸ್ಮೃತಿಯಷ್ಟನ್ನೇ ಸಂಪಾದಿಸಿ ಪ್ರಕಟಿಸಿದ್ದಾರೆ.

### 3.2.5 ಕರ್ನಾಟಕ ಭಾಷಾಭೂಷಣ :

ಕರ್ನಾಟಕ ಭಾಷಾಭೂಷಣವು ನಾಗವರ್ಮನ ಮೂರನೆಯ ಕೃತಿ. ಸಂಸ್ಕೃತದಲ್ಲಿ ಕನ್ನಡ ಭಾಷೆಯ ವ್ಯಾಕರಣವನ್ನು ಸಾದ್ಯಂತವಾಗಿ ವಿವರಿಸುತ್ತದೆ. ಶಬ್ದಸ್ಮೃತಿಯನ್ನು ರಚಿಸಿದ್ದ ಕವಿಗೆ ಇದನ್ನು ಬರೆಯುವುದು ಕಷ್ಟವೇನಾಗಲಿಲ್ಲ. ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆಯುವುದರ ಔಚಿತ್ಯವೇನೋ ತಿಳಿಯದು. ಆದರೆ ನಾಗವರ್ಮನು ತನ್ನ ಪಾಂಡಿತ್ಯವನ್ನು ಸಂಸ್ಕೃತದಲ್ಲೂ ಈ ಮೂಲಕ

ತೋರಿಸಿದನೆನ್ನಬಹುದು. ಕನ್ನಡದಲ್ಲೇ ಈ ವ್ಯಾಕರಣವನ್ನು ಅವನು ಬರೆದಿದ್ದರೆ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಒಂದು ಒಳ್ಳೆಯ ಕಾಣಿಕೆ ಲಭಿಸಿದಂತೆ ಆಗುತ್ತಿತ್ತು. ವಿಭಕ್ತಿಕಾರಕ ವಿಧಾನಗಳ ಬಹು ಸಂಖ್ಯೆಯ ಸೂತ್ರಗಳಲ್ಲಿ ಬಹಳಷ್ಟನ್ನು ಪಾಣಿನಿಯ ಅಷ್ಟಾಧ್ಯಾಯಿಯಿಂದ ಇದ್ದಕ್ಕಿದ್ದಂತೆ ಎತ್ತಿ ಕೊಂಡಿದ್ದಾನೆ.

ಕರ್ನಾಟಕ ಭಾಷಾಭೂಷಣದಲ್ಲೂ ಪ್ರಕರಣ ವಿಭಜನೆ ಸ್ವಲ್ಪ ಹೆಚ್ಚು-ಕಡಮೆ ಶಬ್ದಸ್ಮೃತಿಯಲ್ಲಿಯಂತೆಯೆ ಇದೆ.

೧. ಸಂಜ್ಞಾ ೨. ಸಂಧಿ ೩. ವಿಭಕ್ತಿ ೪. ಕಾರಕ ೫. ಶಬ್ದರೀತಿ ೬. ಸಮಾಸ ೭. ತದ್ಧಿತ ೮. ಆಖ್ಯಾತ ೯. ಅವ್ಯಯ ೧೦. ನಿಪಾತ ಎಂಬ ಹತ್ತು ಬಗೆಯ ಪ್ರಕರಣಗಳಲ್ಲಿ ೨೭೯ ಸೂತ್ರಗಳಲ್ಲಿ ವಿವೇಚನೆ ಹರಡಿದೆ. ನಾಗವರ್ಮ ತಾನೇ ಬರೆದ (?) ವೃತ್ತಿಯೂ ಇಲ್ಲಿ ಇದೆ. ಇದಕ್ಕೆ ಟೀಕೆಯೂ ಇದೆ. ೧ ಆದರೆ ಇದನ್ನು ಬೇರೆ ಯಾರೋ ಬರೆದಂತೆ ತೋರುತ್ತದೆ. ಕರ್ನಾಟಕ ಭಾಷಾಭೂಷಣವು ಮೊಟ್ಟಮೊದಲಿಗೆ ಕ್ರಿ.ಶ. ೧೮೮೦ ರಲ್ಲಿ ಅಳಸಿಂಗಾಚಾರ್ಯರಿಂದ ಸಂಪಾದಿಸಲ್ಪಟ್ಟು ಮೈಸೂರಿನಲ್ಲಿ ಪ್ರಕಾಶಗೊಂಡಿತು. ೧೮೮೪ ರಲ್ಲಿ ಬಿ. ಎಲ್. ರೈಸ್ ಅವರು ೧೯೦೩ ರಲ್ಲಿ ಆರ್. ನರಸಿಂಹಾಚಾರ್ಯರು ಸಂಪಾದಿಸಿ ಪ್ರಕಟಿಸಿದರು. ೧೯೩೯ರಲ್ಲಿ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್ ಅವರಿಂದ ಪರಿಷ್ಕೃತವಾಗಿ ಬೆಳಕು ಕಂಡಿತು. ಎಚ್. ದೇವೀರಪ್ಪ ಅವರಿಂದ ಸಂಪಾದಿಸಲ್ಪಟ್ಟು ಮೈಸೂರು ವಿಶ್ವ ವಿದ್ಯಾಲಯದಿಂದ ಮತ್ತೆ ಎರಡು ಸಲ ಮುದ್ರಣಗೊಂಡಿದೆ. ಶಬ್ದಸ್ಮೃತಿಯು ವಿಸ್ತೃತರೂಪವೆನಿಸಿದರೂ ವ್ಯಾಕರಣದ ಮುಖ್ಯಾಂಶಗಳನ್ನೆಲ್ಲ ಬಹಳ ಮಟ್ಟಿಗೆ ಕರ್ನಾಟಕ ಭಾಷಾಭೂಷಣ ಒಳಗೊಂಡಿದೆ. ಸಂಸ್ಕೃತದಲ್ಲಿದ್ದುದರಿಂದ ಪಂಡಿತರಿಗೆ ಮಾತ್ರ ಇದು ಮೀಸಲಾದಂತಾಗಿ ಜನಸಾಮಾನ್ಯರಿಗೆ ತಲುಪಲೇ ಇಲ್ಲ. ಆದ್ದರಿಂದ ಶಬ್ದಮಣಿದರ್ಪಣದಂತೆ ಜನಾದರಣೆಯನ್ನು ಪಡೆಯದೇ ಹೋಯಿತು.

### 3.2.6 ಶಬ್ದಮಣಿದರ್ಪಣ :

'ಕರ್ನಾಟಕ ಲಕ್ಷಣ ಶಬ್ದಶಾಸ್ತ್ರ'ವೆಂದು ತಾನೇ ಕರೆದ ಕೇಶಿರಾಜನ ಶಬ್ದಮಣಿ ದರ್ಪಣ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಅಮೌಲ್ಯ ಕೊಡುಗೆಯಾಗಿದೆ. ಪರಂಪರಾಗತ

---

೧ ಈ ಟೀಕುವನ್ನು ೧೭ನೆಯ ಶತಮಾನದಲ್ಲಿ ರಚಿಸಿರಬಹುದೆಂದು ಆರ್. ನರಸಿಂಹಾಚಾರ್ಯರು ಊಹಿಸಿದ್ದಾರೆ.

ಪ್ರಾಚೀನ ಕನ್ನಡ ವ್ಯಾಕರಣಗಳಲ್ಲಿ ಏಕಮೇವಾದ್ವಿತೀಯವಾಗಿ ಮೆರೆದ ಈ ಕೃತಿಯನ್ನು ಮೆಚ್ಚದ ಪಂಡಿತರೇ ಇಲ್ಲ. ನಾಗವರ್ಮನ ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣಗಳಲ್ಲಿ ವಿವರಿಸಿದ್ದನ್ನೇ ಕನ್ನಡದಲ್ಲಿ ಛಟ್ಟಿ ಇಳಿಸಿದ್ದಾನೆಂದು ಕೆಲವರು ಹೇಳುವರಾದರೂ ಕೇಶಿರಾಜನು ತನ್ನ ಹಿಂದಿನ ಕಾಲದ ಎಲ್ಲ ವ್ಯಾಕರಣ ಗ್ರಂಥಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡು ತನ್ನ ಸ್ವಂತಿಕೆಯನ್ನೂ, ಸ್ವತಂತ್ರ ವಿಚಾರಶೀಲತೆಯನ್ನೂ, ಕನ್ನಡ ಭಾಷೆಯ ರಚನೆಯ ಸೂಕ್ಷ್ಮ ಆಳ ಮತ್ತು ಅಗಲಗಳನ್ನು ಅರಿತ ಕುಶಾಗ್ರಮತಿಯನ್ನು ಮೆರೆದಿದ್ದಾನೆ.

ಸೂತ್ರಗಳಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಪ್ರಮುಖ ಪ್ರಕರಣಗಳಲ್ಲಿ ಸಮಗ್ರ ಕನ್ನಡಭಾಷೆಯ ಎಳೆ ಎಳೆಗಳನ್ನು ಹಿಂಜಟ್ಟಿದ್ದಾನೆ. ಆರಂಭದಲ್ಲಿ ಪೀಠಿಕೆ, ಕೊನೆಯಲ್ಲಿ ಪ್ರಯೋಗಸಾರವೆಂಬ ಶಬ್ದಾರ್ಥನಿರ್ಣಯವೆಂಬ ಪ್ರಕರಣಗಳೂ ಇವೆ. ಸೂತ್ರಗಳ ಅರ್ಥ ಸಾಮಾನ್ಯರಿಗೂ ಅರ್ಥವಾಗಲಿ, ಸಂದಿಗ್ಧತೆ ಉಂಟಾಗದಿರಲಿ ಎಂಬ ಇಚ್ಛೆಯಿಂದ ಕೇಶಿರಾಜನು ತನ್ನ ಸೂತ್ರಗಳಿಗೆ ತಾನೇ ವೃತ್ತಿಯನ್ನು ಬರೆದು ಉಪಕರಿಸಿದ್ದಾನೆ. ಆದರೂ ಲಿಂಗಣಾರಾಧ್ಯನೆಂಬವನು (ಕ್ರಿ. ಶ. ೧೬೦೦) ಶಬ್ದಮಣಿದರ್ಪಣಕ್ಕೆ 'ಸೂತ್ರಾನ್ವಯ ರತ್ನಮಾಲೆ' ಎಂಬ ವ್ಯಾಖ್ಯಾನವನ್ನೂ, ನಿಟ್ಟೂರ ನಂಜಯ್ಯನೆಂಬುವನು (ಕ್ರಿ. ಶ. ೧೭೦೦) ಟೀಕೆಯನ್ನೂ ಬರೆದಿದ್ದಾನೆ. ಅವಶ್ಯವೆನಿಸಿದೆಡೆಯಲ್ಲಿ ತನ್ನ ವಿಚಾರವನ್ನೂ ವ್ಯಕ್ತಪಡಿಸಿರುವನೇ ಹೊರತು ಮೂಲ ಸೂತ್ರವನ್ನು ತಿದ್ದಹೋಗಿಲ್ಲ. ಆದ್ದರಿಂದ ನಂಜಯ್ಯನ ಟೀಕು, ವಿಚಾರಗಳಿಂದ ಕೂಡಿದ ಶಬ್ದಮಣಿದರ್ಪಣವನ್ನೇ ಡಿ. ಎಲ್. ನರಸಿಂಹಾಚಾರ್ಯರು ಸಮರ್ಪಕವಾಗಿ ಸಂಪಾದಿಸಿದ್ದಾರೆ. ಅದುವೆ ಜನಪ್ರಿಯ ಆವೃತ್ತಿಯಾಗಿದೆ.

ದರ್ಪಣವು ೧೮೬೮ ರಲ್ಲಿ ಮೊಟ್ಟಮೊದಲು ಜೆ. ಗ್ಯಾರೆಟ್ ಅವರಿಂದ ಸಂಪಾದಿಸಲ್ಪಟ್ಟು ಪ್ರಕಟವಾಯಿತು. ೧೮೭೨ರಲ್ಲಿ ಕಿಟೆಲ್ಲರು ಹೆಚ್ಚು ವ್ಯವಸ್ಥಿತವಾಗಿ ಸಂಪಾದಿಸಿ ಪ್ರಕಟಿಸಿ. ಇಂಗ್ಲೀಷಿನಲ್ಲಿ ಟಿಪ್ಪಣಿಗಳನ್ನು ಬರೆದು ಸೇರಿಸಿದರು. ಅವರ ಆವೃತ್ತಿ ಕೆಲಕಾಲ ಬಹಳ ಜನಪ್ರಿಯವಾಯಿತು. ಅದನ್ನೇ ೧೮೬೫ರಲ್ಲಿ ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ ಅವರು ಪರಿಷ್ಕರಿಸಿ ಧಾರವಾಡದಿಂದ ಪ್ರಕಟಿಸಿದರು. ೧೮೩೦ ರಿಂದ ೧೮೪೦ ರ ಮಧ್ಯೆ ಪಂಜೆ ಮಂಗೇಶರಾಯರು, ಕನ್ನಡ ಸಾಹಿತ್ಯ ಪರಿಷತ್ತಿನವರು, ಬಳ್ಳಾವೆ ವೆಂಕಟನಾರಾಯಣಪ್ಪನವರು ಹಾಗೂ ಮದ್ರಾಸ

ವಿಶ್ವವಿದ್ಯಾಲಯದವರು ಪ್ರತ್ಯೇಕವಾಗಿ ದರ್ಪಣವನ್ನು ಪ್ರಕಟಿಸಿದರು, ಇವು ಗಳಲ್ಲಿ ಎಚ್. ಚೆನ್ನಕೇಶವ ಅಯ್ಯಂಗಾರ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಂಪಾದಿಸಿದ ಎ. ವೆಂಕಟರಾವ ಹಾಗೂ ಶೇಷ ಅಯ್ಯಂಗಾರ ಅವರ ಮದ್ರಾಸ ವಿಶ್ವವಿದ್ಯಾನಿಲಯದಿಂದ ಪ್ರಕಟಿತ ಆವೃತ್ತಿ ಹೆಚ್ಚು ಉಪಯುಕ್ತವೂ ಜನಪ್ರಿಯವೂ ಆಯಿತು. ೧೯೫೮ ನವಂಬರದಲ್ಲಿ ಡಿ. ಎಲ್. ಎನ್. ಅವರು ಹಿಂದಿನ ಮುಖ್ಯ ಆವೃತ್ತಿಗಳನ್ನು ಎದುರಿಗಿಟ್ಟುಕೊಂಡು ಸಂಪಾದಿಸಿ ಪ್ರಕಟಿಸಿದರು. ಅದೇ ಈ ವರೆಗೂ ಐದು ಮುದ್ರಣಗಳನ್ನು ಕಂಡಿದೆ.

ಪಂಡಿತ ಪರಿಸರದಲ್ಲಿ ಬೆಳೆದ ಕೇಶಿರಾಜನಿಗೆ ಒಳ್ಳೆಯ ಪರಿಕರವೂ ಇತ್ತು. ತಂದೆ ಮಲ್ಲಿಕಾರ್ಜುನನ ಗ್ರಂಥಸಂಪತ್ತೂ ಸಹಜವಾಗಿ ಲಭಿಸಿತ್ತು. ಹೀಗಾಗಿ ೧೩ ನೆಯ ಶತಮಾನದಲ್ಲಿ ತಾನಿದ್ದು ಕನ್ನಡ ವ್ಯಾಕರಣವನ್ನು ಬರೆಯುತ್ತಿದರೂ ಅವನ ದೃಷ್ಟಿಯೆಲ್ಲ ಹೆಚ್ಚಾಗಿ ಪ್ರಾಚೀನ ಕವಿಗಳ ಪ್ರಯೋಗಗಳ ಕಡೆಗೆ ಇದ್ದುದನ್ನು ಗಮನಿಸಬಹುದು. ಕೇಶಿರಾಜನ ಕಾಲಕ್ಕಾಗಲೇ ಕನ್ನಡ ಭಾಷೆ ಹಾಗೂ ಸಾಹಿತ್ಯದಲ್ಲಿ ಗಮನಾರ್ಹ ಕ್ರಾಂತಿಯಾಗಿತ್ತು. ಆದರೂ ಕೇಶಿರಾಜನು ತನ್ನ ಸಮಕಾಲೀನ ಸಾಮಾನ್ಯರ ಆಡುನುಡಿಗೆ ವಿಶೇಷ ಗಮನ ಕೊಡಲಿಲ್ಲ. ಅವನು ಪುರಾತನೋಕ್ತಿಗಳೇ ಪ್ರಮಾಣವೆಂದು ಪರಿಗ್ರಹಿಸಿದನು ನಾಗವರ್ಮನ ವ್ಯಾಕರಣಗಳ ಪ್ರಭಾವ ಕೇಶಿರಾಜನ ಮೇಲೆ ಬಹುದಟ್ಟವಾಗಿದೆ. ಒಟ್ಟು ೩೨೨ ಸೂತ್ರಗಳಲ್ಲಿ ೧೨೦ ರಷ್ಟು ಸೂತ್ರಗಳು ನಾಗವರ್ಮನ ಸೂತ್ರಗಳಿಗೆ ಸಂವಾದಿಯಾಗಿರುವುದನ್ನು ಅಲ್ಲದೆ ೧೭೦ಕ್ಕೂ ಹೆಚ್ಚು ಪ್ರಯೋಗಗಳು ಅಲ್ಲಿಂದ ಎತ್ತಿ ಕೊಂಡಂಥವುಗಳಾಗಿವೆಯೆಂಬುದನ್ನು ಗಮನಿಸಿದರೆ ಪ್ರಭಾವದ ಅರಿವಾಗುತ್ತದೆ. ಕೇಶಿರಾಜನು ಆಯ್ದುಕೊಂಡ ಉದಾಹರಣೆಗಳು ಪಂಪಭಾರತ, ಗದಾಯುದ್ಧ, ಕವಿರಾಜಮಾರ್ಗ, ಆದಿಪುರಾಣ, ತ್ರೈಲೋಕ್ಯಚೂಡಾಮಣಿ, ಯಶೋಧರ ಚರಿತೆ, ಅನಂತನಾಥಪುರಾಣ, ಪಂಪ-ರಾಮಾಯಣ, ಮಲ್ಲಿನಾಥಪುರಾಣ, ಹರಿವಂಶ, ಶೂದ್ರಕ, ಗಿರಿಜಾಕಲ್ಯಾಣ, ಅಜಿತ ತೀರ್ಥಂಕರ ಪುರಾಣ, ಶಾಂತಿಪುರಾಣ, ಲೀಲಾವತಿ ಚಂದ್ರಪ್ರಭಪುರಾಣ, ಕಾದಂಬರಿ ಮುಂತಾದ ಕಾವ್ಯಗಳಿಂದ ಎತ್ತಿಕೊಳ್ಳಲ್ಪಟ್ಟಿವೆ. ಕೇಶಿರಾಜನು ಕಾತಂತ್ರ ವ್ಯಾಕರಣ ಪರಂಪರೆಯನ್ನು ಹೆಚ್ಚು ಅನುಸರಿಸಿದಂತೆ ತೋರುತ್ತದೆ. ಆದರೂ ವೈದಿಕ ಪರಂಪರೆಯ ಪಾಣಿನಿಯನ್ನು ಹಲವೆಡೆ ಅನುಸರಿಸಿದ್ದಾನೆ. ಕೇವಲ ಅನುಕರಣ ಶೀಲನೂ ಆಗದೆ ಬಹಳಷ್ಟು ಗಡೆಗೆ ತನ್ನ ಸ್ವಂತಿಕೆಯನ್ನು ಮೆರೆದಿರುವನು. ಹೇಳಬೇಕಾದುದನ್ನು ನೇರವಾಗಿ, ಸ್ಪಷ್ಟವಾಗಿ ಹೇಳಿ ಪ್ರತಿಯೊಂದಕ್ಕೂ ತನ್ನ ಉದಾ

ಹರಣೆ ನೀಡಿ ಸಮರ್ಥಿಸುತ್ತಾನೆ. ತನಗೆ ಸರಿತೋರದುದನ್ನು ಖಂಡಿತವಾಗಿ ಅಲ್ಲಗಳೆಯುತ್ತಾನೆ. ಸೂಕ್ಷ್ಮ ಭಾಷಾ ವೈಜ್ಞಾನಿಕ ದೃಷ್ಟಿ, ಪಾಂಡಿತ್ಯದಿಂದಾಗಿ ಹಳಗನ್ನಡದ ಅವಸ್ಥೆಯನ್ನು ಅಧಿಕೃತವಾಗಿ ವಿವರಿಸುವ ಅವನ ಹಿರಿಮೆ, ಹೆಗ್ಗಳಿಕೆ ಹೆಚ್ಚಿನದಾಗಿದೆ. ಱಳ ಕುಳಕ್ಷಳ ವಿಚಾರ, ಗಮಕಸಮಾಸ, ವಿಭಕ್ತಿ ಪಲ್ಲಟ, ಸಮಸಂಸ್ಕೃತ ಇತ್ಯಾದಿ ಅವನ ವಿಶಿಷ್ಟ ಕಾಣಿಕೆಗಳು.

### 3.2.7 ಶಬ್ದಾನುಶಾಸನ :

ಕೇಶಿರಾಜನ ಶಬ್ದಮಣಿದರ್ಪಣ ಬಂದ ಮೇಲೆ ಸುಮಾರು ಮೂರುನೂರು ವರ್ಷಗಳ ಕಾಲ ಯಾರೂ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಕೈಹಾಕಲಿಲ್ಲ. ಭಟ್ಟಾಕಳಂಕನೂ (1604) ಸಹಿತ ಕನ್ನಡದಲ್ಲಿ ಸರ್ವ ಕಾಲಕ್ಕೆ ಶಬ್ದಮಣಿದರ್ಪಣವೊಂದೇ ಸಾಕು ಎನ್ನುವಂತೆ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದನು. ಅದೇ ಅವನ ಶಬ್ದಾನುಶಾಸನ. ಒಂದು ಬಗೆಯಲ್ಲಿ ಇದು ಅನುಶಾಸನವೇ ಸರಿ. ಭಟ್ಟಾಕಳಂಕ ಸಮಗ್ರ ಕನ್ನಡ ಭಾಷೆಯನ್ನು ತನಗಿಂತ ಹಿಂದಿನ ಯಾವ ವ್ಯಾಕರಣವೂ ವಿವರಿಸದ ರೀತಿಯಲ್ಲಿ ವಿಸ್ತೃತವಾಗಿ ವಿವರಿಸಿದ್ದಾನೆ. 592 ಸೂತ್ರಗಳ ಈ ಬೃಹದ್ಗ್ರಂಥವನ್ನು ಕನ್ನಡದಲ್ಲಿ ಬರೆದಿದ್ದರೆ ಅತ್ಯಮೌಲ್ಯ ಕೊಡುಗೆಯೇ ಆಗುತ್ತಿತ್ತು. ನಾಗವರ್ಮನ ಕಾಲದಲ್ಲಿದ್ದಷ್ಟು ಸಂಸ್ಕೃತ ಪಂಡಿತರು ಭಟ್ಟಾಕಳಂಕನ ಕಾಲದಲ್ಲಿ (೧೭ ನೆಯ ಶತಮಾನ) ಇರಲಿಲ್ಲವಷ್ಟೇ ಅಲ್ಲ, ಸಂಸ್ಕೃತದಲ್ಲಿದ್ದುದನ್ನು ಓದಿ ಅರಗಿಸಿಕೊಳ್ಳುವಂಥವರ ಸಂಖ್ಯೆಯೂ ದಿನೇ ದಿನೇ ಕಡಿಮೆಯಾಗುತ್ತಲಿತ್ತು. ಮುಡಿಪಾಗಿಟ್ಟ ಬೆಲೆಯುಳ್ಳ ದ್ರವ್ಯ ನೇರವಾಗಿ ದೇವರ ಸಾನಿಧ್ಯ ಸೇರುವಂತೆ ಸಂಸ್ಕೃತದಲ್ಲಿ ರಚಿಸಲ್ಪಟ್ಟ ಇವನ ಶಬ್ದಾನುಶಾಸನವು ನೇರವಾಗಿ ಪಂಡಿತ ಮಂಡಲಿಯ ಆಶ್ರಯ ಪಡೆದು ಸಾಮಾನ್ಯರ ಕೈಗೆಟುಕದೇ ಹೋಯಿತು. ಹೀಗಾಗಿ ಬೆಲೆಯುಳ್ಳ ರತ್ನ ದೇವರ ಮನೆಯ ಅಡಕಲಿನಲ್ಲಿದ್ದಂತೆ ಭಟ್ಟಾಕಳಂಕನ ಗ್ರಂಥದ ಮಹಿಮೆ ಎಷ್ಟೋ ಜನಕ್ಕೆ ಅರ್ಥವಾಗದೇ ಉಳಿದುಬಿಟ್ಟಿತು. ಆದರೆ ಭಟ್ಟಾಕಳಂಕನ ಉದ್ದೇಶವೇ ಬೇರೆಯಾಗಿತ್ತು.

ಕನ್ನಡವು ಪಂಡಿತರ ದೃಷ್ಟಿಯಲ್ಲಿ ಮನ್ನಣೆ ಕಳೆದುಕೊಳ್ಳುತ್ತಿರುವುದರಿಂದ ಕನ್ನಡಕ್ಕೆ ಗೌರವ ತಂದುಕೊಡಬೇಕೆಂಬ ಹಂಬಲದಿಂದ ಬೇಕೆಂದೇ ಸಂಸ್ಕೃತದಲ್ಲಿ ಪ್ರೌಢ ವ್ಯಾಕರಣವನ್ನು ರಚಿಸಿದನು. ಕನ್ನಡಿಗರಿಗೆ ಮಾತ್ರ ಅದು ಕಾಡುಕುಸುಮವಾಯಿತು. ಆದರೆ ಭಟ್ಟಾಕಳಂಕ ಮಾತ್ರ ಅದನ್ನು 'ಸೋಪಜ್ಞ ಶಬ್ದಾನುಶಾಸನ'

ವೆಂದೇ ಕರೆದಿರುವನು. ೫೯೨ ಸೂತ್ರಗಳಲ್ಲಿ [ನಾಲ್ಕು ಪಾದಗಳಲ್ಲಿ] ಸಾಕಷ್ಟು ಸುದೀರ್ಘವಾಗಿ, ವಿವೇಚನಾಪೂರ್ಣವಾಗಿ ಹಾಗೂ ಅಷ್ಟೇ ವ್ಯವಸ್ಥಿತವಾದ ಬಗೆಯಲ್ಲಿ ಕನ್ನಡ ವ್ಯಾಕರಣ ಅಂಶಗಳು ನಿರೂಪಿಸಲ್ಪಟ್ಟಿವೆ. ಬಿ. ಎಲ್. ರೈಸ್ ಅವರು ಈ ಬೃಹತ್ ವ್ಯಾಕರಣ ಗ್ರಂಥವನ್ನು ಪಾಣಿನಿಯ ಅಷ್ಟಾಧ್ಯಾಯಿಗೆ ಹೋಲಿಸಿದ್ದಾರೆ. ಪಾಣಿನಿಯ ಅಷ್ಟಾಧ್ಯಾಯಿಗೆ ಪತಂಜಲಿ ಭಾಷ್ಯವನ್ನು ಬರದಂತೆ, ಭಟ್ಟಾಕಳಂಕನ ಶಬ್ದಾನುಶಾಸನಕ್ಕೂ ವರದಾರ್ಯನೆಂಬುವನು 'ಶಬ್ದಾನುಶಾಸನ ತತ್ತ್ವಾಲೋಕ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಪಾಣಿನಿಯ ಸೂತ್ರ ಪದ್ಧತಿಯನ್ನೇ ಹೆಚ್ಚು ಅನುಕರಿಸಿ ಸಂಸ್ಕೃತ ಮಾದರಿಯನ್ನು ಕಟ್ಟುನಿಟ್ಟಾಗಿ ಅನುಸರಿಸಿದ್ದರಿಂದ ಟೀಕೆಗೂ ಗುರಿಯಾಗಿದ್ದಾನೆ.

ಭಟ್ಟಾಕಳಂಕನು ಸೂತ್ರಗಳಿಗೆ ತಾನೇ ವೃತ್ತಿಯನ್ನೂ ಬರೆದಿದ್ದಾನೆ. ಅದಕ್ಕೆ 'ಭಾಷಾಮಂಜರಿ' ಎಂದು ಹೆಸರಿಸಿದ್ದಾನೆ. ತಾನೇ ಸೂತ್ರಗಳನ್ನು ವ್ಯಾಖ್ಯಾನಿಸಿ 'ಮಂಜರೀ ಮಕರಂದ' ಎಂದು ಕರೆದಿದ್ದಾನೆ. ಸಂಜ್ಞಾವರ್ಣಮಾಲೆ, ಆಖ್ಯಾತ, ಅಪಭ್ರಂಶ, ವಿಭಕ್ತಿ ಪ್ರತ್ಯಯಗಳು, ಸಮಾಸ, ಸರ್ವನಾಮ, ಲಿಂಗ, ವಚನ, ಸಂಖ್ಯಾವಾಚಿ, ತದ್ಧಿತ ಪ್ರತ್ಯಯಗಳು, ನಿಪಾತ, ಕ್ರಿಯಾಪದ ಹಾಗೂ ಕ್ರಿಯಾ ಪ್ರತ್ಯಯ ಇವೆಲ್ಲವನ್ನೂ ಶಬ್ದಾನುಶಾಸನದಲ್ಲಿ ವಿವರಿಸಲಾಗಿದೆ. ಭಟ್ಟಾಕಳಂಕನೂ ಇಲ್ಲಿ ಪರಂಪರಾಗತ ಶೈಲಿಯನ್ನು ಬಿಡದೆ ತಾನು ಹೊಸಗನ್ನಡದ ಹೊಸ್ತಿಲಲ್ಲಿ ನಿಂತಿದ್ದರೂ ಹಳಗನ್ನಡವನ್ನೇ ತನ್ನ ವಿಶ್ಲೇಷಣೆಗೆ ಬಳಸಿಕೊಂಡ. ತನ್ನ ಕೃತಿಗೆ ಹೆಸರನ್ನು ಶಬ್ದಸ್ಮೃತಿ, ಶಬ್ದಮಣಿ ದರ್ಪಣಗಳಂತೆ ಶಬ್ದಾನುಶಾಸನವೆಂದೇ ಇಟ್ಟನು. ಶಬ್ದಮಣಿದರ್ಪಣಕ್ಕೆ ಸಾಕಷ್ಟು ಋಣಿಯೂ ಆಗಿರುವನು.

ಶಬ್ದಾನುಶಾಸನವನ್ನು ಕ್ರಿ. ಶ. ೧೮೯೦ ರಲ್ಲಿ ಬಿ. ಎಲ್. ರೈಸ್ ಅವರು ಮೊಟ್ಟಮೊದಲನೆಯ ಭಾರಿ ಸಂಪಾದಿಸಿ ಪ್ರಕಟಗೊಳಿಸಿದರು. ೧೯೨೩ ರಲ್ಲಿ ಆರ್. ನರಸಿಂಹಾಚಾರ್ಯರು ಸಂಪಾದಿಸಿ ಪ್ರಕಟಿಸಿದರು. ಈ ಮಧ್ಯೆ ೧೯೦೮ ರಲ್ಲಿ ಕುಂಡಲಿಗಿರಿಯಾಚಾರ್ಯ ಎಂಬುವರು ಶಬ್ದಾನುಶಾಸನವನ್ನು ಕನ್ನಡಕ್ಕೆ ಭಾಷಾಂತರಿಸತೊಡಗಿದ್ದರು. ಆದರೆ ದುರ್ದೈವದಿಂದ ಅದು ಪೂರ್ಣವಾಗುವ ಮೊದಲೇ ಆಚಾರ್ಯರು ತೀರಿಕೊಂಡರು. ಅವರು ಇನ್ನೂ ಉಳಿಸಿದ್ದ ೪೭೩ ನೆಯ ಸೂತ್ರದಿಂದ ಹಿಡಿದು ಸಂಪೂರ್ಣವಾಗಿ ಕನ್ನಡಕ್ಕೆ ಭಾಷಾಂತರಿಸಿ ಶ್ರೀನಿವಾಸಮೂರ್ತಾಚಾರ್ಯ ಕಟ್ಟಿ ಎನ್ನುವವರು 'ಶಬ್ದಾನುಶಾಸನ ಪ್ರಕಾಶಿಕಾ'

ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದರು. ನಂತರ ಬಸವನಾಳರು ೧೯೪೬ ರಲ್ಲಿ ಇದನ್ನೇ ಪರಿಷ್ಕರಿಸಿ ಪ್ರಕಟಿಸಿದರು.

3.3 ಪರಂಪರಾಗತ ಪ್ರಾಚೀನ ವ್ಯಾಕರಣಗಳೆಲ್ಲವೂ ಸಾಮಾನ್ಯವಾಗಿ ಹಳಗನ್ನಡ ಭಾಷೆಯನ್ನೇ ಲಕ್ಷಿಸಿದವು, ಕೇಶಿರಾಜನು ಕ್ವಚಿತ್ತಾಗಿ ಅಲ್ಲಲ್ಲಿ ತನ್ನ ಸಮಕಾಲೀನ ಕನ್ನಡದ ಜಾಡನ್ನು ಗಮನಿಸಿದರೂ ಅವನ ಪೂರ್ಣ ದೃಷ್ಟಿ ಹಳಗನ್ನಡದೆಡೆಗೇ ಹರಿದಿರುವುದು ಸ್ಪಷ್ಟ, ಸಂಸ್ಕೃತದ ಪ್ರಭಾವ ಕನ್ನಡವನ್ನು ಕುರಿತ ಎಲ್ಲ ಪ್ರಾಚೀನ ವ್ಯಾಕರಣಗಳಲ್ಲೂ ಒಡೆದು ಕಾಣುವ ಅಂಶವಾಗಿದೆ. ಸಂಸ್ಕೃತದ ಮಾದರಿಯಲ್ಲೇ, ಸಂಸ್ಕೃತದ ಚೌಕಟ್ಟಿನಲ್ಲಿಯೇ ಕನ್ನಡವನ್ನು ವಿವರಿಸ ಹೊರಟುದೊಂದು ಅನಿವಾರ್ಯ ದೋಷವಾಗಿ ಪರಿಣಮಿಸಿತು. ನಿಜವಾದ ಪ್ರತಿಭೆ ಇದ್ದೂ ಅವರು ಕನ್ನಡದ ಭಾಷಾರಚನೆಯ ಒಳತಿರುಳನ್ನು ಎಷ್ಟೋ ಸಲ ಗುರುತಿಸಲು ಸಾಧ್ಯವಾಗದೇ ಹೋಯಿತು. ಕೇಶಿರಾಜನು ಕನ್ನಡ ವರ್ಣಮಾಲೆಯನ್ನು ವಿವರಿಸುವಾಗಲೂ ಕೂಡ ಸಂಸ್ಕೃತದ ವರ್ಣಗಳನ್ನು ಮೊದಲು ಹೇಳಿ ಅದರಲ್ಲಿ ಕನ್ನಡದಲ್ಲಿ ಇಲ್ಲದವನ್ನು ಕಳೆಯಲು ಹೇಳುತ್ತಾನೆ (ಸೂ ೪೩). ಈ ರೀತಿ ತೀರ ಸಾಮಾನ್ಯ ವಿಷಯವನ್ನು ಸಂಸ್ಕೃತದ ಮೂಲಕವೇ ಹೇಳುವುದು ಈ ವ್ಯಾಕರಣಗಳ ಪರಂಪರೆಯಾಗಿದೆ. ಈ ಕೊಂಕಣ ಸುತ್ತಿ ಮೈಲಾರಕ್ಕೆ ಬರುವ ಪದ್ಧತಿಯಿಂದಾಗಿ ಕೇಶಿರಾಜನಂಥ ವೈಯಾಕರಣಿಯೂ ಅನೇಕ ಕಡೆಗೆ ಎಡವಬೇಕಾಯಿತು. ಸಂಸ್ಕೃತಕ್ಕೆ ಸಲ್ಲುತ್ತಿದ್ದ ಮನ್ನಣೆ, ಪರಂಪರಾಗತ ವ್ಯಾಕರಣಕಾರರು ಕನ್ನಡ, ಸಂಸ್ಕೃತಗಳೆರಡರಲ್ಲೂ ಪಂಡಿತರಾಗಿರುತ್ತಿದ್ದುದು, ಸಂಸ್ಕೃತ ದೇವಭಾಷೆ, ಅದರಿಂದಲೇ ಎಲ್ಲ ಭಾಷೆಗಳೂ ಹುಟ್ಟಿದವು ಎಂಬ ತಪ್ಪು ಕಲ್ಪನೆ ಇತ್ಯಾದಿ ಅಂಶಗಳು ಹೀಗೆ ಬರೆಯಲು ಅವರನ್ನು ಪ್ರೇರೇಪಿಸಿರಬಹುದು. ಭಟ್ಟಾಕಳಂಕನಂತೂ ಸಂಸ್ಕೃತದಲ್ಲಿ ಕನ್ನಡ ವ್ಯಾಕರಣ ಬರೆಯುವಲ್ಲಿ ಈ ಭಾವನೆಯನ್ನು ಸೂಕ್ಷ್ಮವಾಗಿ ವ್ಯಕ್ತಪಡಿಸಿದ್ದಾನೆ (—"ಕೇಚಸಂಸ್ಕೃತ ಶಬ್ದವತ್ ಸಕಲದೇಶಪ್ರಸಿದ್ಧಾಃ ಸಕಲ ಶಾಸ್ತ್ರೋಪಯೋಗಿ ತಯಾಸಕಲ ಮಹಾಜನ ಪರಿಗ್ರಾಹ್ಯಾಶ್ಚೈವ ಭವಂತಿನ ಪಂಡಿತಾನಾಮಿತಿ ನೈತೆ ಅನುಶಾಸ್ಯಾಃ ಪ್ರಯೋಗಾ ಸಹಂತ್ವಾತ್").

ಪರಂಪರಾಗತ ಪ್ರಾಚೀನ ವ್ಯಾಕರಣಗಳು ಹೆಚ್ಚಾಗಿ ಶಬ್ದಶಾಸ್ತ್ರವನ್ನು ಮಾತ್ರ ವಿವರವಾಗಿ ವಿಶ್ಲೇಷಿಸುವ ಕಾರ್ಯ ಮಾಡಿವೆ. ಧ್ವನಿಶಾಸ್ತ್ರಕ್ಕಾಗಲಿ, ವಾಕ್ಯಶಾಸ್ತ್ರಕ್ಕಾಗಲಿ, ಅರ್ಥವ್ಯವಸ್ಥೆಗಾಲಿ ಗಮನವನ್ನು ಅಷ್ಟಾಗಿ ನೀಡಿಲ್ಲ. ಅವರ ಪ್ರಕರಣ ವಿಭಜನೆಯಲ್ಲೂ ಸ್ವಂತಿಕೆಯನ್ನು ವಿಶೇಷವಾಗಿ ಕಾಣಲಾರೆವು. ಪಾರಿಭಾಷಿಕ ಪದ

ಗಳೆಲ್ಲವೂ ಸಂಸ್ಕೃತದವೇ ಆಗಿವೆ. ಸಂಸ್ಕೃತದಲ್ಲಿದ್ದುದೆಲ್ಲ ಕನ್ನಡದಲ್ಲಿದೆಯೆಂಬ ಭ್ರಮೆ ಈ ವ್ಯಾಕರಣಕಾರರಿಗಿದೆ. ಉದಾಹರಣೆಗೆ: ಕೇಶಿರಾಜನು ವಚನವನ್ನು ಪ್ರಸ್ತಾಪಿಸುವಾಗ "ದ್ವಿವಚನಮುಚಿತದೆ ಬರ್ಕುಂ" [ಸೂ. 104] ದ್ವಿವಚನ ಕನ್ನಡದಲ್ಲಿ ಉಚಿತವಾಗಿ ಬರುತ್ತದೆ ಎನ್ನುತ್ತಾನೆ. ಕೇಶಿರಾಜನ ಒಳಪ್ರಜ್ಞೆಗೆ ತಾನು ಕೇವಲ ಸಂಸ್ಕೃತಾನುಸಾರಿಯಾಗಿ ನಡೆದುದರ ಅರಿವಾದುದರಿಂದಲೋ ಏನೋ ಕೊನೆಗೆ ಕನ್ನಡ ಭಾಷೆಯ ವೈಲಕ್ಷಣ್ಯಗಳನ್ನು ಪಟ್ಟಿಮಾಡಬೇಕೆಂದೆನಿಸಿ ಕನ್ನಡದ ಅಸಾಧಾರಣ ಲಕ್ಷಣಗಳನ್ನು (ಗಮಕ ಸಮಾಸ, ಱಕುಳಕ್ಷಳ, ಪ್ರಕೃತಿಸಹ್ಯಸಂಧಿ, ಸತಿಸಪ್ತಮಿ, ಸಮಸಂಸ್ಕೃತೋಕ್ತಿ, ಸಮಹಪಭೇದ, ಅವ್ಯಯ ಸಂಸ್ಕೃತಲಿಂಗ ಪದೋತ್ತಮಶಿಥಿಲತ್ವ ಹಾಗೂ ಯತಿವಿಲಂಘನ) ಪಟ್ಟಿ ಮಾಡಿದನು. ಆದರೆ ಇವುಗಳಲ್ಲಿ ಬಹಳಷ್ಟು ಕನ್ನಡ ಅಸಾಧಾರಣ ಲಕ್ಷಣಗಳಲ್ಲವೆಂಬುದು ಆಧುನಿಕರ ಅಭಿಪ್ರಾಯ. ಗಮಕಸಮಾಸವು ಸಮಾಸವೇ ಅಲ್ಲ. ಱಕುಳಕ್ಷಳಗಳ ಗೊಂದಲ ಕೇಶಿರಾಜನ ಕಾಲಕ್ಕಾಗಲೇ ಸ್ತಬ್ಧವಾಗಿ ಬಿಟ್ಟಿತ್ತು. ಪ್ರಕೃತಿಸಹ್ಯಸಂಧಿ, ಸಮಸಂಸ್ಕೃತೋಕ್ತಿ, ಸಮಹಪ ಭೇದ, ಶಿಥಿಲತ್ವ ಇವೆಲ್ಲವು ಭಾಷೆಯಲ್ಲಿ ನಡೆಯಬಹುದಾದ ಸಹಜ ಪ್ರಕ್ರಿಯೆಗೆ ಒಳಪಡುತ್ತವೆ. ಸತಿಸಪ್ತಮಿಯಲ್ಲಿ ಕೇಶಿರಾಜನು ನಿಷೇಧಿಸುವ 'ಅಲ್' ಪ್ರಯೋಗ ಅವನ ಕಾಲದಲ್ಲೇ ಬಳಕೆಯಾಗುತ್ತಿತ್ತು. ಯತಿ ವಿಚಾರ ವ್ಯಾಕರಣ ವಿಷಯಕ್ಕೆ ಹೊರತಾಗಿದೆ. ಹೀಗೆ ಒಂದಿಲ್ಲೊಂದು ರೀತಿಯಲ್ಲಿ ಅವನು ಹೇಳಿರುವ ವೈಶಿಷ್ಟ್ಯಗಳಲ್ಲಿ ಹೆಚ್ಚಿನವು ನಿಲ್ಲುವುದಿಲ್ಲ. ಆದರೆ ಇದ್ದ ಮೂವರಲ್ಲಿ ಕೇಶಿರಾಜನೊಬ್ಬನಾದರೂ ಈ ನಿಟ್ಟಿನಲ್ಲಿ ಯೋಚಿಸಿದನು. ಅಲ್ಲಲ್ಲಿ ಹೊಸ ವಿಚಾರಗಳನ್ನು, ತನ್ನ ಸಮಕಾಲೀನ ನುಡಿಯನ್ನು ಗಮನಿಸಿ ಸೇರಿಸಿರುವುದನ್ನು ಮರೆಯಬಾರದು.

## ೩.4 ಆಧುನಿಕ ವ್ಯಾಕರಣಗಳು :

ಪರಂಪರಾಗತ ದೃಷ್ಟಿಯ ಪ್ರಾಚೀನ ಕನ್ನಡ ವ್ಯಾಕರಣಗಳು ಸಂಖ್ಯೆಯಲ್ಲಿ ವಿರಳವಾದರೂ ಸತ್ವದಲ್ಲಿ ಗಟ್ಟಿಯಾಗಿವೆ. ಹಳಗನ್ನಡದ ಅವಸ್ಥೆಯನ್ನು ಸಂಸ್ಕೃತದ ಪಡಿಯಚ್ಚಿನಲ್ಲಿ ಅವು ಪ್ರತಿಬಿಂಬಿಸಿದವು. ಭಟ್ಟಾಕಳಂಕನ ಅನಂತರ ಕನ್ನಡ ವ್ಯಾಕ್ಯರಣ ಪರಂಪರೆ ಹೊಸ ತಿರುವನ್ನು ಪಡೆಯಿತು. ಪಂಡಿತರಿಗೆ, ವಿಶೇಷ ಅಭ್ಯಾಸಿಗಳಿಗೆ ಮಾತ್ರ ಪ್ರಾಚೀನ ವ್ಯಾಕರಣಗಳು ಅರ್ಥವಾಗುವಂತಿದ್ದವು. ಸೂತ್ರರೂಪದಲ್ಲಿದ್ದ ಅವು ಜನಸಾಮಾನ್ಯರನ್ನು ತಲುಪಲಿಲ್ಲ. ೧೯ನೆಯ ಶತಮಾನದ ವೇಳೆಗೆ ಕನ್ನಡ ಭಾಷೆ ನಡುಗನ್ನಡದ ಗಡುವನ್ನು ದಾಟಿ ಹೊಸಗನ್ನಡದ ಹೊಸ್ತಿಲಲ್ಲಿ ಕಾಲಿಟ್ಟಿತ್ತು. ಹಳಗನ್ನಡದ ವ್ಯಾಕರಣಗಳು ಹೊಸ ಪೀಳಿಗೆಯವರಿಗೆ ಪ್ರಯೋಜನವಾಗುವಂತಿರ

ಲಿಲ್ಲ. ಅರ್ಥವೂ ಆಗುತ್ತಿರಲಿಲ್ಲ. ಆಂಗ್ಲರು ಭಾರತದಲ್ಲೆಲ್ಲ ಪಸರಿಸುತ್ತಿದ್ದಂತೆಯೆ ಅವರು ಇಲ್ಲಿನ ಸ್ಥಳೀಯ ಭಾಷೆಯನ್ನು ಕಲಿಯಬೇಕಾಯಿತು. ಈ ಪರಿಸರದಲ್ಲಿ ಹೊಸ ಬಗೆಯ ಸರಳ ವ್ಯಾಕರಣಗಳು ಕನ್ನಡ ವಿದ್ಯಾರ್ಥಿಗಳಿಗೆ ಹಾಗೂ ಅನ್ಯ ಭಾಷೀಯರಿಗೆ ಬೇಕಾಗಿದ್ದವು. ಈ ಅವಶ್ಯಕತೆಯನ್ನು ಪೂರೈಸುವುದಕ್ಕಾಗಿ ವಿದೇಶಿ ಹಾಗೂ ದೇಶಿ ಪಂಡಿತರಿಂದ ಸಂಕ್ಷಿಪ್ತ ವ್ಯಾಕರಣಗಳು ರಚಿತವಾಗತೊಡಗಿದವು. ೧೯ನೆಯ ಶತಮಾನದ ಆರಂಭದ ವೇಳೆಗಾಗಲೆ ಇಂತಹ ಆಧುನಿಕ ವ್ಯಾಕರಣಗಳು ಕ್ರೈಸ್ತ ಪಂಡಿತರಿಂದ ಪ್ರಕಟಗೊಳ್ಳತೊಡಗಿದವು. ಕ್ರಿ. ಶ.೧೮೦೦ ರಿಂದ ಇತ್ತೀಚಿನ ವರೆಗಿನ ಸುಮಾರು ೧೭೫ ವರ್ಷಗಳ ಅವಧಿಯಲ್ಲಿ ಬೆಳೆದು ಬಂದ ಕನಡ್ನ ವ್ಯಾಕರಣದ ಇತಿಹಾಸವನ್ನು ಮುಖ್ಯವಾಗಿ ಮೂರು ಹಂತಗಳಲ್ಲಿ ಗುರುತಿಸಬಹುದಾಗಿದೆ. ೧೯೫೦ ರ ವರೆಗಿನ ಹಂತ ಒಂದು ಬಗೆಯದು. ೧೯೫೦ ರಿಂದ ೧೯೬೯ರ ವರೆಗೆ ಇನ್ನೊಂದು ಅಲ್ಲಿಂದ ಇತ್ತೀಚಿನವರೆಗೆ ಮತ್ತೊಂದು.

### 3.4.1 ಪ್ರಥಮ ಹಂತ:

೧. ಸುಲಭ ವ್ಯಾಕರಣಗಳು ೨. ಪ್ರೌಢವ್ಯಾಕರಣಗಳು ಎಂದು ಎರಡು ವರ್ಗಗಳಲ್ಲಿ ಈ ಅವಧಿಯ (೧೮೦೦ ರಿಂದ ೧೮೯೯) ವ್ಯಾಕರಣಗಳನ್ನು ವಿಂಗಡಿಸುವುದು ಉಚಿತವೆನಿಸುತ್ತದೆ.

ಕನ್ನಡ ಬಾರದವರು ಸುಲಭವಾಗಿ ಕನ್ನಡವನ್ನು ಕಲಿಯುವುದಕ್ಕೆ ಅನುಕೂಲವಾಗುವಂತೆ ಕೆಲವು ಆಂಗ್ಲ ಭಾಷಾವಿದ್ವಾಂಸರು ಇಂಗ್ಲೀಷಿನಲ್ಲಿ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಆಂಗ್ಲರು ಭಾರತದಲ್ಲಿ ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುತ್ತಿರುವಾಗ ಇಂಗ್ಲಂಡಿನಿಂದ ಬಂದ ಅಧಿಕಾರಿಗಳು ಇಲ್ಲಿನ ಜನಸಾಮಾನ್ಯರೊಂದಿಗೆ ವ್ಯವಹರಿಸಬೇಕಾಗಿ ಬಂದಾಗ ಅವರಿಗೆ ಸ್ಥಳೀಯ ಭಾಷೆಯನ್ನು ಕಲಿಯಲೇಬೇಕಾಯಿತು. ಕೆಲವರು ಇಲ್ಲಿಯ ಭಾಷೆಯ ಬಗೆಗೆ ಕುತೂಹಲದಿಂದ ಆಳವಾದ ಅಧ್ಯಯನವನ್ನು ಕೈಕೊಂಡರು. ಅಂಥವರಲ್ಲಿ ಕಾಲ್ಡವೆಲ್, ಗುಂಡರ್ಟ್, ಕಿಟೆಲ್ ಮುಂತಾದ ಹಲವರನ್ನು ಇಲ್ಲಿ ಸ್ಮರಿಸಬಹುದು. ಆಂಗ್ಲರು ಅನಿವಾರ್ಯವಾಗಿ ಬಂದ ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಅವರು ತೀಕ್ಷ್ಣಬುದ್ಧಿ, ವೈಜ್ಞಾನಿಕ ವಿಚಾರ ವೈಖರಿ, ಪರಿಶ್ರಮಶೀಲತೆ, ಉತ್ಸಾಹ ಅಧ್ಯಯನಾಕಾಂಕ್ಷೆ ಮುಂತಾದವುಗಳಿಂದಾಗಿ ಭಾರತೀಯ ವಿದ್ವಾಂಸರೇ ನಾಚುವಂತೆ ಭಾಷಾಧ್ಯಯನ ಕ್ಷೇತ್ರದಲ್ಲಿ ಕೆಲಸಮಾಡಿ ತೋರಿಸಿ ಹೊಸ ದಿಗಂತಕ್ಕೆ ಮಾರ್ಗ

ಮಾಡಿಕೊಟ್ಟರು. ಕ್ರೈಸ್ತ ಪಂಡಿತರು ಒಂದೆಡೆ ಸಂಸ್ಕೃತವನ್ನೂ ಇನ್ನೊಂದೆಡೆ ಪ್ರಾದೇಶಿಕ ಭಾಷೆಗಳನ್ನೂ ಅಭ್ಯಸಿಸಿದರು, ಗ್ರಂಥರಚಿಸಿದರು, ಪ್ರಚಾರ ಮಾಡಿದರು. ಅವರು ಭಾಷೆಗಳನ್ನು ಕಲಿಯುವುದರಲ್ಲಿಯ ಇನ್ನೊಂದು ಮಹತ್ತರ ವಾದ ಉದ್ದೇಶವೆಂದರೆ ತಮ್ಮ ಧರ್ಮ ಪ್ರಚಾರ. ಹೀಗೆ ಭಾಷಾಧ್ಯಯನದಿಂದಾಗಿ ಅವರಿಗೆ ವ್ಯಾಪಾರ, ಆಡಳಿತ, ಧರ್ಮಪ್ರಚಾರ, ಆತ್ಮತೃಪ್ತಿ ಸುಲಭವಾದವು.

ಸುಲಭ ವ್ಯಾಕರಣಗಳೆಂದು ಕರೆಯುವ ಕಾರಣವೆಂದರೆ ಈ ವ್ಯಾಕರಣಗಳ ಉದ್ದೇಶವೇ ಕನ್ನಡ ಭಾಷೆಯ ರಚನೆಯ ಅಂಶಗಳನ್ನು ಸುಲಭವಾಗಿ ತಿಳಿಸಿಕೊಡ ಬೇಕೆಂಬುದು ಹಾಗೂ ಶಾಲಾಬಾಲಕರು ಸಹ ಸರಳವ್ಯಾಕರಣಗಳ ನಿಯಮಗಳನ್ನು ಅರ್ಥಮಾಡಿಕೊಳ್ಳಬೇಕೆಂಬುದಾಗಿತ್ತು. ಸರಳವಾದ ಗದ್ಯದಲ್ಲಿ ವ್ಯಾಕರಣ ನಿಯಮ ಗಳನ್ನು ನೀಡಿ ನಿತ್ಯ ಜೀವನದಲ್ಲಿ ಬಳಕೆಯಲ್ಲಿ ಇರುವ ಉದಾಹರಣೆಗಳನ್ನೇ ಅವುಗಳ ಸಮರ್ಥನೆಗೆ ಆಯ್ದುಕೊಂಡು ವಿವರಿಸಿರುವುದು ಇಲ್ಲಿ ಎದ್ದು ಕಾಣುವ ಅಂಶವಾಗಿದೆ. ಎಲ್ಲ ವ್ಯಾಕರಣಗಳಲ್ಲೂ ಸಾಮಾನ್ಯವಾಗಿ ಈ ಅಂಶಗಳನ್ನು ಕಾಣಬಹುದು. ಅತಂಹ ವ್ಯಾಕರಣಗಳಲ್ಲಿಯ ಕೆಲವು ಮಹತ್ವದವುಗಳನ್ನಿಲ್ಲಿ ಸೂಚಿಸಲಾಗಿದೆ.

3.4.1.1 ಕ್ರಿ. ಶ. ೧೮೧೭ ರಲ್ಲಿ ರೆವ್ಹರೆಂಡ್ ವಿಲಿಯಂ ಕ್ಯಾರಿ ಅವರು The Grammar of Karnataka Language, ಜಾನ್ ಮೆಕೆರೆಲ್ ಅವರ Karnataka Vyakarana (೧೮೨೦), ಥಾಮಸ್ ಹಡಸನ್ ಅವರ An Elementary Grammar of the Kannada or Canarese (೧೮೫೯), ರೆವ್ಹರೆಂಡ್ ಝಿಗ್ಲರ್ ಅವರ A practical key to the Canarese Language (೧೮೭೦) ಆರಂಭದಲ್ಲಿ ಮೂಡಿಬಂದ ವ್ಯಾಕರಣಗಳು. ಆನಂತರ ಕಿಟೆಲ್ ಅವರು ಎರಡು ವ್ಯಾಕರಣಗಳನ್ನು ಕನ್ನಡದಲ್ಲೂ ಒಂದನ್ನು ಇಂಗ್ಲೀಷಿನಲ್ಲಿಯೂ ಬರೆದು ಪ್ರಕಟಿಸಿದರು. : ೧. ಕನ್ನಡ ವ್ಯಾಕರಣ ಸೂತ್ರಗಳು, ೨. ಸಂಕ್ಷೇಪ ವ್ಯಾಕರಣ ಸೂತ್ರಗಳು, ೩. A Grammar of Kannada Language. ಮೊದಲಿನವು ೧೮೮೯ ರಲ್ಲಿಯೂ, ಕೊನೆಯದು ೧೯೦೩ ರಲ್ಲೂ ಬೆಳಕು ಕಂಡವು. ಕಿಟೆಲ್‌ರ ಕೊಡುಗೆ ಗಮನಾರ್ಹವಾಗಿದೆ. ಬಿ. ಗ್ರೇಟರ್ ಅವರ Tables of Canarese Language ೧೮೮೪ ರಲ್ಲಿ, ಹೆರಾಲ್ಡ್ ಸ್ಪೆನ್ಸರ್ ಅವರ A Canarese Language ೧೯೧೪ ರಲ್ಲಿ ಪ್ರಕಟಗೊಂಡವು. ಇದುವೆ ೧೯೫೦ ರಲ್ಲಿ ಡಬ್ಲ್ಯು, ಪರ್ಸಟನ್‌ರಿಂದ

ಪರಿಷ್ಕೃತಗೊಂಡು ಪುರುಮುದ್ರಣವಾಯಿತು. ಇವು ಮಹತ್ವದ ಕೆಲ ವ್ಯಾಕರಣಗಳಾದರೆ ಇನ್ನು ಕೆಲವು ಕೇವಲ ಶಾಲಾ ಮಕ್ಕಳಿಗಾಗಿಯೆ ರಚಿತವಾದವುಗಳಾಗಿವೆ. ಕನ್ನಡ ವ್ಯಾಕರಣಸಾರಂ (೧೮೪೯)- ಸಿ. ಕ್ಯಾಂಪ್‌ಬೆಲ್, ಕನ್ನಡ ವ್ಯಾಕರಣ (೧೮೫೫)- ಥಾಮಸ್ ಹಡ್‌ಸನ್ ಕನ್ನಡ ಶಾಲಾವ್ಯಾಕರಣ (೧೮೬೬) ರೆ. ಝಿಗ್ಲರ್, ಕನ್ನಡ ಬಾಲವ್ಯಾಕರಣ (೧೮೦೫)-ಜಿ. ಕೊಯ್ಜ್, ಶಾಲವ್ಯಾಕರಣ (೧೮೬೫)-ಜೆ. ಗ್ಯಾರೆಟ್, **Elements of Canarese Grammar for natives** (೧೮೭೦)—ರೆ. ಕ್ಯಾಂಪಬೆಲ್, **A Kannada Grammar** (೧೮೫೪) ಜಾನ್ ಥಾಮ್ಸನ್, ಇವುಗಳಲ್ಲದೆ ಇನ್ನೂ ಹಲವಾರು ಇಂತಹ ವ್ಯಾಕರಣಗಳು ಈ ಕಾಲದಲ್ಲಿ ರಚಿತವಾಗಿವೆ. ಈ ಎಲ್ಲ ವ್ಯಾಕರಣಗಳ ಉದ್ದೇಶವೇ ಸೀಮಿತವಾಗಿದ್ದುದರಿಂದ ವಿಶೇಷವೇನನ್ನೂ ನಾವು ಇವುಗಳಲ್ಲಿ ಕಾಣುವಂತಿಲ್ಲ. ಝಿಗ್ಲರ್ ಅವರ **A practical key to the Canarese Grammar** ಹಾಗೂ ಕಿಟೆಲ್‌ರ **A Gammar of Kannada Language** ಎರಡನ್ನು ಬಿಟ್ಟು ಉಳಿದೆಲ್ಲವೂ ಶಾಲಾ ಪಠ್ಯಕ್ರಮಕ್ಕನುಗುಣವಾಗಿ ಬರೆದವುಗಳು. ಅವುಗಳಲ್ಲಿ ಇಂಗ್ಲೀಷ್ ಪದ್ಧತಿ ಒಡೆದು ಕಾಣುತ್ತದೆ.

3.4.1.2 ಇದೇ ವೇಳೆಗೆ ಸ್ಥಳೀಯ ಪಂಡಿತರೂ ಕನ್ನಡದಲ್ಲಿ ವ್ಯಾಕರಣಗಳನ್ನು ರಚಿಸತೊಡಗಿದ್ದರು. ಒಂದೆರಡು ಒಳ್ಳೆಯ ವ್ಯಾಕರಣಗಳನ್ನು ಬಿಟ್ಟರೆ ಸುಮಾರು ೬೦ ಕ್ಕೂ ಹೆಚ್ಚು ಸಂಖ್ಯೆಯ ವ್ಯಾಕರಣಗಳು ಸಾಮಾನ್ಯ ಮಟ್ಟದವವೇ ಆಗಿದ್ದವು. ಕೆ. ಕೃಷ್ಣಮಾಚಾರ್ಯರು ೧೮೩೮ ರಲ್ಲಿ 'ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು' ಎಂಬ ವ್ಯಾಕರಣವನ್ನು ಬೆಳಕಿಗೆ ತಂದರು. '....ನಾನು ಕಾಲೇಜು ಬೋರ್ಡಿಗೆ ಸಿಕ್ರೇಟರಿಯಾಗಿದ್ದ ಕೆಪ್ಟನ್ ಹಾರ್ಕಿನನು ದೊರೆಯವರು ಇಂಗಲೀಷೂ, ಸಂಸ್ಕೃತವೂ ತಿಳಿಯದ ವಿದ್ಯಾರ್ಥಿಗಳಿಗೆ ಸುಲಭವಾಗಿ ತಿಳಿಯುವ ಹಾಂಗೆ ಕನ್ನಡದಲ್ಲಿ ಪ್ರಶ್ನೋತ್ತರವಾಗೊಂಡು ವ್ಯಾಕರಣವ ಮಾಡಹೇಳಿದ್ದರಿಂದ ಈ ಗ್ರಂಥವನ್ನು ನಾನು ಮಾಡಿದೆನು...." ಎಂದು ಅವರು ಹೇಳಿಕೊಂಡಿದ್ದಾರೆ. ಹೊಸಗನ್ನಡ ವ್ಯಾಕರಣ ಎಂಬುದನ್ನು ಮೊಟ್ಟಮೊದಲಬಾರಿಗೆ ಘೋಷಿಸಿದ್ದನ್ನು ನಾವಿಲ್ಲಿ ಕಾಣುತ್ತೇವೆ. ಈ ವ್ಯಾಕರಣ ಇನ್ನೂ ಎರಡು ದೃಷ್ಟಿಗಳಿಂದ ಗಮನಾರ್ಹವಾಗಿದೆ. ೧. ಇದು ಸಂಭಾಷಣೆಯ ರೂಪದಲ್ಲಿ ಇದೆ. ೨. ಕನ್ನಡದ ಆಡುನುಡಿಯನ್ನೇ ಪ್ರಥಮವಾಗಿ ವ್ಯಾಕರಣದಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿದೆ. ಕನ್ನಡ ಭಾಷೆಯು ಸಂಸ್ಕೃತದಿಂದ

ಭಿನ್ನವೆಂಬುದನ್ನು ಸಾರಿದೆ.೧ ಹೊಸಗನ್ನಡದಲ್ಲಿ ಈ ವೈಶಿಷ್ಟ್ಯಗಳೊಂದಿಗೆ ಗ್ರಂಥ ಮೂಡಿಬಂದುದು ಕನ್ನಡದ ಭಾಗ್ಯವೇ ಸರಿ. ಆದರೆ ಇದೂ ಕೂಡ ಹೆಚ್ಚು ಪ್ರಚುರತೆಯನ್ನು ಪಡೆಯಲಿಲ್ಲ. ೧೮೮೨ ರಲ್ಲಿ ಮತ್ತೆ ಪುನರ್ಮುದ್ರಣವನ್ನು ಮಾತ್ರ ಕಂಡಿತು. ಇವೇ ಲೇಖಕರು 'ಹಳಗನ್ನಡ ನುಡಿಗನ್ನಡಿ' ಎಂಬ ಮತ್ತೊಂದು ವ್ಯಾಕರಣವನ್ನು ಹಳಗನ್ನಡಕ್ಕೆ ಸಂಬಂಧಿಸಿ ಬರೆದರೂ ಅದು ಗಮನಸೆಳೆಯಲಿಲ್ಲ. ಅನಂತರ ಘೊಂಡೋ ನರಸಿಂಹ ಮುಳಬಾಗಿಲ ಅವರ 'ನುಡಿಗಟ್ಟು' ೧೮೯೨ ರಲ್ಲಿ ಬಂದಿತು. ಇದಾದ ಮೇಲೆ ಅತ್ಯಂತ ಗಮನಾರ್ಹವಾದ ಕೃತಿಯೆಂದರೆ ಮೈಸೂರು ವಿಶ್ವವಿದ್ಯಾಲಯದಿಂದ ೧೯೨೬ ರಲ್ಲಿ ಪ್ರಕಟಿಸಲ್ಪಟ್ಟ ಕನ್ನಡ ಕೈಪಿಡಿ. ಟಿ. ಶ್ರೀನಿವಾಸರಾಘವಾಚಾರ್ಯರು, ಬಿ. ಕೃಷ್ಣಪ್ಪ, ಬಿ. ಎಂ. ಶ್ರೀಕಂಠಯ್ಯ ಹಾಗೂ ಟಿ.ಎಸ್. ವೆಂಕಣ್ಣಯ್ಯ ಅವರಲ್ಲಿ ಮೊದಲ ಇಬ್ಬರು ಒಂದನೆಯ ಭಾಗವನ್ನು, ಕೊನೆಯ ಇಬ್ಬರು ನಾಲ್ಕನೆಯ ಭಾಗವನ್ನು ಬರೆದಿದ್ದಾರೆ. ಈ ಎರಡೂ ಭಾಗಗಳು ಸಂಕ್ಷಿಪ್ತ ಕನ್ನಡ ವ್ಯಾಕರಣ ವಿಷಯವನ್ನು ಒಳಗೊಂಡಿವೆ. ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾಗಿ, ಸಂಕ್ಷಿಪ್ತವಾಗಿದ್ದರೂ ಅಚ್ಚುಕಟ್ಟಾಗಿ ವ್ಯಾಕರಣಾಂಶಗಳನ್ನು ವಿವರಿಸಲಾಗಿದೆ. ಇದು ಹಲವಾರು ಮುದ್ರಣಗಳನ್ನು ಕಂಡಿದೆ. ೧೯೩೯ ರಲ್ಲಿ ತೀ. ನಂ. ಶ್ರೀಕಂಠಯ್ಯನವರು ಕನ್ನಡ ಮಧ್ಯಮ ವ್ಯಾಕರಣವನ್ನು ಬರೆದು ಪ್ರಕಟಿಸಿದರು. ಇದೂ ಕೂಡ ಪ್ರೌಢ ಶಾಲೆಯ ವಿದ್ಯಾರ್ಥಿಗಳಿಗಾಗಿ ಬರೆಯಲ್ಪಟ್ಟಿದ್ದರೂ ವಿಷಯ ವಿವೇಚನೆ ಅತ್ಯುತ್ತಮ ರೀತಿಯಲ್ಲಿರುವುದರಿಂದ ಒಳ್ಳೆಯ ಉತ್ತಮ ದರ್ಜೆಯ (Standard) ವ್ಯಾಕರಣವೆನ್ನಿಸಿತು.

ಇನ್ನಿತರ ಕೆಲವು ಮಹತ್ವದ ವ್ಯಾಕರಣ ಗ್ರಂಥಗಳನ್ನು ಹೆಸರಿಸಬೇಕೆಂದರೆ– ಕರ್ನಾಟಕ ವಾಗ್ವಿಧಾಯಿನಿ (೧೮೯೦)–ಎಂ. ರಾಮಸ್ವಾಮಿ ಶಾಸ್ತ್ರಿಯವರದು. ಏಳು ಆವೃತ್ತಿಗಳನ್ನು ಕಂಡಿದೆ. ಬಿ. ಮಲ್ಲಪ್ಪನವರ ಶಬ್ದಸಾರ (೧೯೩೩), ಮು. ಪ್ರ. ಪೂಜಾರ ಅವರ ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ (೧೯೨೮) ಬಹಳ ಜನಪ್ರಿಯವಾದುದಲ್ಲದೆ ೧೯೩೬ ರವರೆಗೆ ನಾಲ್ಕು ಮುದ್ರಣಗಳನ್ನು ಕಂಡಿತು. ಅವರೇ ಬರೆದ ನುಡಿಗನ್ನಡಿ ೪ ಭಾಗಗಳಲ್ಲಿ ವಿಸ್ತೃತವಾಗಿ ೧೯೩೨ ರಲ್ಲಿ ಬಂದಿತು. ಪಂಜೆ ಮಂಗೇಶರಾಯರ ಕನ್ನಡ ಮೂಲ ವ್ಯಾಕರಣ (೧೯೩೬) ೬ ಆವೃತ್ತಿಗಳನ್ನು ಕಂಡಿತು. ಎಸ್. ಎಸ್. ಬಸವನಾಳ ಹಾಗೂ ಪಂಡಿತ ಜಿ. ಎ. ಕವಲಿ ಅವರು

---

೧. ಇದರ ಪೀಠಿಕೆಯಲ್ಲಿ "ಈ ಭೂಮಂಡಲದೊಳಗಿರುವ ಭಾಷೆಗಳಿಗೆ ಸಂಸ್ಕೃತ ಭಾಷೆಯು ಆದಿ ಭಾಷೆಯಾಗಿದೆ"- ಎಂದು ಹೇಳಿ ತನ್ನ ಸಂಸ್ಕೃತ ನಿಷ್ಠೆಯನ್ನೂ ವ್ಯಕ್ತಪಡಿಸಿದ್ದಾನೆ.

ಜೊತೆಯಾಗಿ ಬರೆದು ಪ್ರಕಟಿಸಿದ ಕನ್ನಡ ಕೈಪಿಡಿ (೧೯೫೦) ಬಹು ಜನಪ್ರಿಯವಾಯಿತು. ಇದು ೪ ಭಾಗಗಳಲ್ಲಿ ಬಂದಿದೆ, ಒಟ್ಟಿನಲ್ಲಿ ಶಾಲಾ ವ್ಯಾಕರಣಗಳ ಹಾಗೂ ಜನಪ್ರಿಯ ವ್ಯಾಕರಣಗಳ ಸಂಖ್ಯೆ ಕ್ರಿ.ಶ. ೧೯೫೦ ರ ವರೆಗಿನ ಅವಧಿಯಲ್ಲಿ ೬೦ ಕೂ ಮೀರುತ್ತದೆ.

3.1.1.3, ಸರಳ ವ್ಯಾಕರಣಗಳ ಪ್ರವಾಹ ಹರಿಯುತ್ತಿದ್ದಂತೆಯೆ ಇನ್ನೊಂದೆಡೆ ಪಂಡಿತಮಾನ್ಯ ಪ್ರೌಢ ವ್ಯಾಕರಣಗಳೂ ಆಗಾಗ ರಚಿತವಾಗುತ್ತಲೇ ಇದ್ದವು. ಜಗತ್ತಿನಲ್ಲಿ ಇನ್ನೂ ಭಾಷೆಗಳ ತೌಲನಿಕ ಅಧ್ಯಯನದ ಪರಿಚಯದ ಕಲ್ಪನೆಯೂ ಇಲ್ಲದ ಕಾಲದಲ್ಲಿ ೧೮೫೬ರಲ್ಲಿ ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣವನ್ನು ಇಂಗ್ಲೀಷ ಭಾಷೆಯಲ್ಲಿ ರೆವ್ಹರೆಂಡ ಕಾಲ್ಡ್‌ವೆಲ್ಲರು ರಚಿಸಿ ಇಡೀ ಪ್ರಪಂಚದ ವಿದ್ವಾಂಸರ ಗಮನವನ್ನು ಸೆಳೆದರು. ದ್ರಾವಿಡ ಭಾಷೆಗಳ ಬೈಬಲ್ ಎನಿಸಿಕೊಳ್ಳುವ ಈ ಬೃಹದ್ಗ್ರಂಥದಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ವಿವರಿಸಲಾಗಿದೆ. ಇದೇ ರೀತಿ ೧೯೪೬ ರಲ್ಲಿ The Grmmatical Structure of Dravidian Languages ಎಂಬ ತೌಲನಿಕ ವ್ಯಾಕರಣಗ್ರಂಥವು ಜೂಲ್ಸಬ್ಲಾಕ ಅವರಿಂದ ಮೊದಲು ಫ್ರೆಂಚ್ ಭಾಷೆಯಲ್ಲಿ ಮೂಡಿ ಬಂತು. ೧೯೫೪ ರಲ್ಲಿ ಅದರ ಇಂಗ್ಲೀಷ್ ಭಾಷಾಂತರ ಪ್ರಕಟವಾಯಿತು. ಕನ್ನಡಕ್ಕಾಗಿ ಮಾತ್ರ ಮೀಸಲಾದ ಕೃತಿಗಳು ಇವಲ್ಲದಿದ್ದರೂ ಜಾಗತಿಕ ಗಮನವನ್ನು ಸೆಳೆಯುವಲ್ಲಿ ಈ ಎರಡೂ ಗ್ರಂಥಗಳು ಈ ಅವಧಿಯಲ್ಲಿ ಗಮನಾರ್ಹ ಕಾಣಿಕೆಗಳಾದುವಲ್ಲದೆ ಕನ್ನಡ ವ್ಯಾಕರಣ ರಚಿಸುವವರಿಗೆ ಹೊಸ ಆಯಾಮವನ್ನು ಒದಗಿಸಿದವು. ೧೯೩೪ ರಲ್ಲಿ ಬಂದ ಆರ್. ನರಸಿಂಹಾಚಾರ್ಯರ The History of Kannada Language ಕೂಡ ಈ ನಿಟ್ಟಿನಲ್ಲಿ ಬಹಳ ಉಪಯುಕ್ತವಾದ ಗ್ರಂಥವಾಗಿದೆ. ಕನ್ನಡ ಶಾಸನಗಳ ಭಾಷೆಯನ್ನು ವಿವರಿಸುವ ವ್ಯಾಕರಣ ಕೃತಿಗಳಲ್ಲಿ ಮಹತ್ವದವುಗಳನ್ನಿಲ್ಲಿ ಹೆಸರಿಸಬಹುದು. A Garmmar of the oldest Kanarese Inscriptions ಎಂಬ ಎ. ಎನ್. ನರಸಿಂಹಯ್ಯ ಅವರ Ph.D. ಪ್ರಬಂಧ ೬ ಮತ್ತು ೭ ನೆಯ ಶತಮಾನದ ಕನ್ನಡ ಶಾಸನಗಳ ಭಾಷೆಯ ವ್ಯಾಕರಣವನ್ನು ಒಳಗೊಂಡಿದೆ. Historical Grammar of old Kannada ಜಿ. ಎಸ್. ಗಾಯಿ ಅವರಿಂದ ೮, ೯, ಹಾಗೂ ೧೦ ನೆಯ ಶತಮಾನದ ಕನ್ನಡ ಶಾಸನಗಳ ಭಾಷೆಯನ್ನು ಅಧ್ಯಯನ ಮಾಡಿ ಬರೆದ Ph.D. ಪ್ರಬಂಧ ೧೯೪೬ ರಲ್ಲಿ ಪ್ರಕಟವಾಯಿತು. A Grammar of Kannada ಕೆ. ಕುಶಾಲಪ್ಪಗೌಡ ಅವರ Ph.D. ಪ್ರಬಂಧ ೧೦ ರಿಂದ ೧೪ ನೆಯ ಶತಮಾನದ

ಕನ್ನಡ ಶಾಸನಗಳ ಭಾಷಾ ವೈಜ್ಞಾನಿಕ ಅಧ್ಯಯನವನ್ನು ಒಳಗೊಂಡಿದೆ.ಕ್ರಿ.ಶ.೪೫೦ ರಿಂದ ೮೫೦ ರ ವರೆಗಿನ ಕನ್ನಡ ಶಾಸನಗಳ ಭಾಷಿಕ ಅಧ್ಯಯನವನ್ನು ಒಳಗೊಂಡ ಎಂ. ಬಿ. ನೇಗಿನಹಾಳ ಅವರ Ph.D. ಪ್ರಬಂಧ ಇತ್ತೀಚೆ ಪ್ರಕಟವಾಗಿದೆ. ಉತ್ತರ ಕರ್ನಾಟಕದ ಕನ್ನಡ ಶಾಸನಗಳ ಭಾಷೆಯ ( ೦೦೦–೧೪೦೦) ವಿವರಣೆಯ ಜೆ. ರಾಮಸ್ವಾಮಿ ಅವರ Ph.D. ಪ್ರಬಂಧ ಪ್ರಕಟವಾಗಬೇಕಾಗಿದೆ.

### 3.4.1.4 ದ್ವಿತೀಯ ಹಂತ :

೧೯೫೦ ರಿಂದ ೧೯೬೫ ರ ವರೆಗಿನ ಒಂದುವರೆ ದಶಕದಲ್ಲಿ ಕನ್ನಡ ವ್ಯಾಕರಣ ಅಧ್ಯಯನ ಕ್ಷೇತ್ರ ಇನ್ನೂ ವ್ಯಾಪಕವಾಯಿತು. ಸರಳ ಕನ್ನಡ ವ್ಯಾಕರಣಗಳ ಕಾಲ ಗತಿಸಿ ಹೋಗಿ ಸ್ವಾತಂತ್ರ್ಯ ನಂತರ ಅದರಲ್ಲೂ ೧೯೫೬ರಲ್ಲಿ ಭಾಷಾವಾರು ರಾಜ್ಯಗಳ ಅಸ್ತಿತ್ವದಿಂದಾಗಿ ಕನ್ನಡಕ್ಕೆ ಎಲ್ಲ ಬಗೆಯ ಹೆಚ್ಚಿನ ಪ್ರೋತ್ಸಾಹ ದೊರೆಯಲಾರಂಭಿಸಿತು. ಆಧುನಿಕ ಭಾಷಾಶಾಸ್ತ್ರ ಹಲವು ವಿದ್ವಾಂಸರನ್ನು ಆಕರ್ಷಿಸಿತು. ಕನ್ನಡ ಭಾಷೆಯನ್ನು ತೌಲನಿಕ, ಐತಿಹಾಸಿಕ ಮತ್ತು ವರ್ಣನಾತ್ಮಕ ದೃಷ್ಟಿಕೋನಗಳಿಂದ ಅಲ್ಲದೆ ಶಾಸನಗಳ, ಕಾವ್ಯಗಳ ಕನ್ನಡ ನುಡಿಯನ್ನು ವಿಶ್ಲೇಷಿಸುವ ಪ್ರಯತ್ನ ಆರಂಭವಾಯಿತು. ಆರ್.ವಾಯ್. ಧಾರವಾಡಕರ ಅವರ ಕನ್ನಡ ಭಾಷಾ ಶಾಸ್ತ್ರ ೧೯೫೧ ರಲ್ಲಿ ಬಂದು ಒಳ್ಳೆಯ ಹೆಸರು ಪಡೆಯಿತು. ೧೯೬೧ ರಲ್ಲಿ ಆರ್. ಸಿ. ಹಿರೇಮಠ ಅವರ **The Structure of Kannada** ಪ್ರಕಟವಾಯಿತು. ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಒಂದು ಪ್ರದೇಶದ ಆಡುನುಡಿಯನ್ನು ಆಯ್ದುಕೊಂಡು ವರ್ಣನಾತ್ಮಕವಾಗಿ ರಚಿಸಲ್ಪಟ್ಟ ವ್ಯಾಕರಣವೆಂಬ ಖ್ಯಾತಿ ಇದಕ್ಕಿದೆ. ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯ ಕನ್ನಡವನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಆಡುನುಡಿಯನ್ನು ಕುರಿತ ವ್ಯಾಕರಣಗಳಲ್ಲಿ ವಿಲ್ಯಂಬ್ರೈಟ್‌ಅವರ **An outline of Colloquial Kannada** (೧೯೫೮) ಹಾಗೂ ಹಾ. ಮಾ. ನಾಯಕ ಅವರ **Kannada literary and Colloquial** (೧೯೬೭) ಎರಡೂ ಮಹತ್ವದ ಕಾಣಿಕೆಗಳು.

ದ್ವಿತೀಯ ಹಂತದ ಕೊನೆಯ ದಶಕದಲ್ಲಿ ಪರಂಪರಾಗತ ವ್ಯಾಕರಣಗಳಿಂದ ಭಿನ್ನವಾದ ಆಧುನಿಕ ರೀತಿಯಲ್ಲಿ ಕನ್ನಡ ಭಾಷೆಯನ್ನು ವರ್ಣಿಸಬೇಕೆಂಬ ಒಲವು ಪ್ರಾರಂಭವಾಯಿತು. ೧೯೫೦ ರ ದಶಕ ಹಾಗೂ ಅನಂತರವಂತೂ ಆಧುನಿಕ ಭಾಷಾ ವಿಜ್ಞಾನದೆಡೆಗೆ ಸಾಗಿದ್ದನ್ನು ಸ್ಪಷ್ಟವಾಗಿ ಗುರುತಿಸಬಹುದು.ತೀ.ನಂ.ಶ್ರೀ. ನರಸಿಂಹಾಚಾರ್ಯ, ಗಾಯ್, ಧಾರವಾಡಕರ, ಅವರು ಒಂದು ಹಂತದಲ್ಲಿ ನಿಂತರೆ ಆರ್.ಸಿ.

ಹಿರೇಮಠ, ಹಾ. ಮಾ. ನಾಯಕ, ವಿಲ್ಯಂಬ್ರೈಟ್, ಬಿಳಿಗಿರಿ ಮುಂತಾದವರು ತತ್ಕಾಲೀನ ಭಾಷಾ ವಿಜ್ಞಾನದ ತತ್ತ್ವಗಳ ಆಧಾರದ ಮೇಲೆ ಕನ್ನಡ ಭಾಷೆಯನ್ನು ವಿವರಿಸುವುದರ ಮೂಲಕ ಇನ್ನೊಂದು ಮುಂದುವರಿದ ಹಂತದಲ್ಲಿ ನಿಲ್ಲುತ್ತಾರೆ. ಇಲ್ಲಿಂದ ಕನ್ನಡ ಭಾಷಾ ವ್ಯಾಸಂಗದ ನವೀನಮಾರ್ಗ ಮುನ್ನಡೆಯುತ್ತದೆ. ನಾ. ಶ್ರೀ. ರಾಜಪುರೋಹಿತರು ೧೯೨೮ ರಲ್ಲಿಯೇ ಪ್ರಚಲಿತ ಕನ್ನಡಭಾಷೆಗೆ ತಕ್ಕ ವ್ಯಾಕ್ಯರಣ ರಚನೆ ಆಗಬೇಕೆಂದು ಪ್ರತಿಪಾದಿಸಿದ್ದರು. ಇದೀಗ ಅದು ಕಾರ್ಯರೂಪಕ್ಕೆ ಬರತೊಡಗಿದ್ದುದು ಅವರ ಹಾರೈಕೆಯ ೪೦ ವರ್ಷಗಳ ನಂತರವೇ.

ಈ ಸಂದರ್ಭದಲ್ಲಿ ಒಂದೆರಡು ವಿಶಿಷ್ಟ ಅಂಶಗಳನ್ನು ಗಮನಿಸಬೇಕು.

೧. ತೀ. ನಂ. ಶ್ರೀ ಅವರು ಕನ್ನಡ ಭಾಷೆಯನ್ನು ಆಧುನಿಕ ಭಾಷಾ ವಿಜ್ಞಾನದ ದೃಷ್ಟಿಯಲ್ಲಿ ವಿವರಿಸಬೇಕೆಂಬ ಹಂಬಲದೊಡನೆ ಆ ದಿಶೆಯಲ್ಲಿ ಮಾಡಿರುವ ಅವರ ಸಾಧನೆ ಅವಿಸ್ಮರಣೀಯ, ದುರ್ದೈವದಿಂದ ಅವರ ಭಾಷಾವಿಜ್ಞಾನದ ಹೆಚ್ಚಿನ ಪಾಂಡಿತ್ಯವೆಲ್ಲ ಬಿಡಿ ಲೇಖನ, ಟಿಪ್ಪಣಿಗಳಲ್ಲಿ ಉಳಿದು ಬಿಟ್ಟಿತು.೧ ಅವರ ಕೃತಿ "ಕನ್ನಡ ಮಧ್ಯಮ ವ್ಯಾಕರಣ" ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿದೆ.

೨. ಶಿ. ಚೆ. ನಂದೀಮಠ ಅವರು ಇಂಗ್ಲಂಡಿಗೆ ಭಾಷಾ ಶಾಸ್ತ್ರದ ಅಧ್ಯಯನಕ್ಕಾಗಿ ಹೋಗಿ ಬಂದರು. ಆದರೆ ಭಾರತಕ್ಕೆ ಬಂದ ಮೇಲೆ ಅವರು ಆ ಕ್ಷೇತ್ರದಲ್ಲಿ ಅದೇಕೋ ಕೈಹಾಕಲಿಲ್ಲ.

೩. ಆರ್. ವಿ. ಜಾಗೀರದಾರರು ಇಂಡೋ ಆರ್ಯನ್ ಐತಿಹಾಸಿಕ ಭಾಷಾಭ್ಯಾಸವನ್ನು ಕುರಿತ "ಶಾರದೆಯ ಸಂಸಾರ" ಎಂಬ ಕೃತಿಯನ್ನು ೧೯೩೩ ರಷ್ಟು ಹಿಂದೆಯೇ ಪ್ರಕಟಿಸಿದರೂ ಅದರಲ್ಲಿನ ಸಾಹಿತ್ಯಕ ಕಸರತ್ತಿನಿಂದಾಗಿ ಮಹತ್ವ ಪಡೆಯದೆ ಹೋಯಿತು.

೪. ಶಂ. ಬಾ. ಜೋಶಿ ಅವರ ಕನ್ನುಡಿಯ ಹುಟ್ಟು (೧೯೩೭) ಕನ್ನಡದ ನೆಲೆ (೧೯೩೯) ಮುಂತಾದ ಕೃತಿಗಳು ಅವರ ಭಾವನಾತ್ಮಕ ಬರವಣಿಗೆಯಿಂದಾಗಿ ಮಹತ್ವ ಪಡೆಯದೆ ಹೋದವು.

೫. ಬಿ. ಎಂ. ಶ್ರೀ. ಹಾಗೂ ಡಿ. ಎಲ್. ಎನ್. ಅವರು ವ್ಯಾಕರಣ ಭಾಷಾಶಾಸ್ತ್ರಗಳನ್ನು ಅಧ್ಯಯನ ಮಾಡಿದ ಉನ್ನತ ಮಟ್ಟದ ಪಂಡಿತರಾಗಿದ್ದರೂ ಈ ಕ್ಷೇತ್ರದಿಂದ ಅದೇಕೋ ಅವರು ದೂರ ಉಳಿದರು.

---

೧ ಬಿ.ಬಿ. ರಾಜಪುರೋಹಿತ–ಭಾಷಾಶಾಸ್ತ್ರಕ್ಕೆ ತೀ. ನಂ.ಶ್ರೀ. ಅವರ ಕೊಡುಗೆ. ತೀ.ನಂ ಶ್ರೀ ಸಂಭಾವನಾ ಗ್ರಂಥ.

೬. ಪ್ರ. ಗೋ. ಕುಲಕರ್ಣಿ ಅವರು ಐತಿಹಾಸಿಕ, ವರ್ಣನಾತ್ಮಕ ತೌಲನಿಕ ಭಾಷಾ ವಿಜ್ಞಾನಗಳ ತತ್ವಗಳ ಸ್ಥೂಲವಾದ ಕಲಸು ಮೇಲೋಗರದಂತಹ ವಿಶಿಷ್ಟ ವ್ಯಾಕರಣ–"ಕನ್ನಡ ಭಾಷೆಯ ಚರಿತ್ರೆ"ಯನ್ನು ರಚಿಸಿದರು.

೭. ಎಚ್. ಎಸ್. ಬಿಳಿಗಿರಿ ಉನ್ನತ ದರ್ಜೆಯ ಭಾಷಾವಿಜ್ಞಾನಿಗಳು, ಆಲೋಕ, ವರ್ಣನಾತ್ಮಕ ವ್ಯಾಕರಣ ಒಂದೆರಡು ಕೃತಿಗಳನ್ನು ಹಾಗೂ ಕೆಲವು ಬಿಡಿ ಲೇಖನಗಳನ್ನು ಬರೆದು ಈಗ ೧೫ ವರ್ಷಗಳಿಂದ ಮೌನವಾಗಿದ್ದಾರೆ. ಇದೇ ರೀತಿ ಇನ್ನೊಬ್ಬ ಉನ್ನತ ಮಟ್ಟದ ಭಾಷಾವಿಜ್ಞಾನಿ ಡಿ. ಎನ್. ಶಂಕರಭಟ್ಟರು ಕನ್ನಡದಲ್ಲಿ ಬರೆಯುವುದನ್ನು ನಿಲ್ಲಿಸಿದ್ದಾರೆ.

೮. ಶಬ್ದಮಣಿದರ್ಪಣವನ್ನು ಮರು ಪರಿಶೀಲಿಸಿ ಸಂಪಾದಿಸುವ ಪ್ರಯತ್ನಗಳೂ ನಡೆದವು. ಈ ನಿಟ್ಟನಲ್ಲಿ ದುಡಿದವರೆಂದರೆ ಡಿ. ಪದ್ಮನಾಭ ಶರ್ಮ, ದೊಡ್ಡಸ್ವಾಮಿ, ಶಂಭುಲಿಂಗಪ್ಪ, ಕಲಬುರ್ಗಿ ಮುಂತಾದವರು ಮುಖ್ಯರಾಗಿದ್ದಾರೆ.

### 3.4.1.5 ತೃತೀಯ ಹಂತ :

೧೯೬೫ ರಿಂದ ಇತ್ತೀಚಿನವರೆಗೆ ಹಲಸಂದದಲ್ಲಿ ಕನ್ನಡ ಭಾಷೆಯ ಅಧ್ಯಯನ ನಡೆದು ಅನೇಕ ಆಧುನಿಕ ವ್ಯಾಕರಣಗಳು ಬೆಳಕಿಗೆ ಬಂದಿವೆ. ಕೆ. ಎಂ. ಕೃಷ್ಣರಾವ ಅವರ ಕನ್ನಡ ಭಾಷೆಯ ಸ್ವರೂಪ, ವಿಲ್ಯಂ ಮಾಡ್ತ ಅವರ ಕನ್ನಡ ಭಾಷೆಯ ರೂಪರೇಷೆಗಳು, ಡಿ. ಎನ್. ಶಂಕರಭಟ್ಟ ಅವರ ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಪ್ರ. ಗೋ. ಕುಲಕರ್ಣಿಯವರ ಕನ್ನಡ ಭಾಷೆಯ ಚರಿತ್ರೆ, ಬಿ. ಬಿ. ಪಾಟೀಲರ ವ್ಯಾಕರಣಲೋಕ, ಡಿ. ಎನ್. ಶಂಕರಭಟ್ಟರ ಕನ್ನಡ ವಾಕ್ಯಗಳು, ಹೆರಾಲ್ಡ ಶಿಫ್ಮನ್ ಅವರ A Reference Grammar of Spoken Kannad , ಆಂಡ್ರೊನೋವ್ ಅವರು ರಶಿಯನ್ ಭಾಷೆಯಲ್ಲಿ ಬರೆದ ಜಾರ್ಖ್ಯಿಕ್ ಕನ್ನಡ (ಕನ್ನಡ ಅನುವಾದ–ವಿಲ್ಯಂ ಮಾಡ್ತ) ಮ್ಯಾಕೊರ್‌ಮ್ಯಾಕ್ ಅವರ Kannnda ಮುಂತಾದ ಕೆಲವನ್ನು ಇಲ್ಲಿ ಸ್ಮರಿಸಬಹುದು. ಆಧುನಿಕ ಭಾಷಾ ವಿಜ್ಞಾನದ ತತ್ತ್ವಗಳ ಹಿನ್ನೆಲೆಯಲ್ಲಿ ಇವು ಒಂದಿಲ್ಲೊಂದು ದೃಷ್ಟಿಯಿಂದ ಗಮನಾರ್ಹವಾಗಿವೆ. ಆಧುನಿಕ ಭಾಷಾವಿಜ್ಞಾನದ ಧ್ವನಿಶಾಸ್ತ್ರದ ದೃಷ್ಟಿಯಿಂದ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ Acoustic characteristics of Kannada ಬಿ. ಬಿ. ರಾಜಪುರೋಹಿತರ ಮಹತ್ವದ ಕಾಣಿಕೆ. ಶಬ್ದಶಾಸ್ತ್ರನನ್ನೇ ಈ ವರೆಗೂ ಪ್ರಧಾನವಾಗಿಟ್ಟುಕೊಂಡು ವ್ಯಾಕರಣ ಪರಂಪರೆಯನ್ನು 'ಕನ್ನಡ ವಾಕ್ಯಗಳು'

ಗ್ರಂಥವು ಮುರಿದು ಹೊಸ ದಿಗಂತವೆಡೆಗೆ ಕನ್ನಡ ವ್ಯಾಕರಣ ಕ್ಷೇತ್ರದ ವ್ಯಾಪ್ತಿಯನ್ನು ಪಸರಿಸಿದೆ. ಇದೇ ಕಾಲದಲ್ಲಿ ಶಬ್ದಮಣಿದರ್ಪಣದ ಮೇಲೆ ಹಲವಾರು ವಿವೇಚನಾತ್ಮಕ ಗ್ರಂಥಗಳೂ ಬಂದಿವೆ. ಎಚ್. ಎಸ್. ಬಿಳಿಗಿರಿ ಅವರ ಆಲೋಕ (ಭಾಗ ೧) ಅತ್ಯಂತ ಉತ್ತಮ ದರ್ಜೆಯ ವ್ಯಾಖ್ಯಾನಗ್ರಂಥ, ಇಲ್ಲಿ ಶಬ್ದಮಣಿದರ್ಪಣದ ಆರಂಭದ ೬೧ ಸೂತ್ರಗಳನ್ನು ಆಧುನಿಕ ಭಾಷಾವಿಜ್ಞಾನದ ದೃಷ್ಟಿಯಲ್ಲಿ ವಿವೇಚಿಸಿ ದರ್ಪಣದ ಅಧ್ಯಯನಕ್ಕೆ ಒಳ್ಳೆಯ ತಳಹದಿಯನ್ನು ಹಾಕಿಕೊಟ್ಟಿದ್ದಾರೆ. ಶಬ್ದಮಣಿದರ್ಪಣವನ್ನು ಆಧುನಿಕ ಭಾಷಾ ವಿಜ್ಞಾನದ ತತ್ವಗಳ ಹಿನ್ನೆಲೆಯಿಂದ ವಿಶ್ಲೇಷಿಸಿದ ಜೆ. ಎಸ್. ಕುಳ್ಳಿ ಅವರ ಮಹತ್ವದ ಸಂಶೋಧನ ಪ್ರಬಂಧ ಇಂಗ್ಲೀಷಿನಲ್ಲಿ ಪ್ರಕಟವಾಗಿವೆ. ಡಾ. ಕೆ. ಕುಶಾಲಪ್ಪಗೌಡ ಅವರ 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ಅಧ್ಯಯನ' ಕೃತಿ ಈ ನಿಟ್ಟಿನಲ್ಲಿ ಗಮನಾರ್ಹವಾಗಿದೆ. ಡಿ. ಪದ್ಮನಾಭ ಶರ್ಮ ಭುವನಳ್ಳಿ, ಅವರು ಸುದೀರ್ಘವಾಗಿ ವ್ಯಾಖ್ಯಾನಿಸಿದ ಕೇಶಿರಾಜ ಕೃತ ಶಬ್ದಮಣಿದರ್ಪಣ (ಸಲ್ಲಿಡಿಗನ್ನಡಿ), ದೊಡ್ಡಸ್ವಾಮಿಯವರ ಶಬ್ದಮಣಿದರ್ಪಣ ದಿಗ್ದರ್ಶನ, ತ. ಸು. ಶಾಮರಾಯ ಹಾಗೂ ಎಚ್. ಸಂಜೀಗೌಡರ ಶಬ್ದಮಣಿದರ್ಪಣಂ, ಶಂಭುಲಿಂಗಪ್ಪನವರ ಶಬ್ದಮಣಿದರ್ಪಣ ಸೂತ್ರಸಾರ, ವಿ. ಶಿವಾನಂದರ ಶಬ್ದಮಣಿ ದರ್ಪಣ ವಿಳಾಸ, ಎಂ. ಎಂ. ಕಲಬುರ್ಗಿ ಹಾಗೂ ಬಿ. ಟಿ. ಸಾಸನೂರ ಅವರ ಶಬ್ದಮಣಿದರ್ಪಣ ಸಂಗ್ರಹ, ಕಲಬುರ್ಗಿ ಅವರ ಪ್ರತಿಬಿಂಬ, ಜಿ. ಎಸ್. ಶಾಪಸೆ ಅವರು ಸಂಪಾದಿಸಿರುವ ಶಬ್ದಸ್ಮೃತಿ, ವ್ಯಾಕರಣಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರಿಗೆ ಅತ್ಯಂತ ಉಪಯುಕ್ತವಾದ ಎಂ. ವಿ. ಸೀತಾರಾಮಯ್ಯ ಅವರ 'ಪ್ರಾಚೀನ ಕನ್ನಡ ವ್ಯಾಕರಣಗಳು' ಮುಂತಾದ ಗ್ರಂಥಗಳು ಈ ನಿಟ್ಟಿನಲ್ಲಿ ಮಹತ್ವದವಾಗಿವೆ.

ಚಿಕ್ಕ ಚಿಕ್ಕ ಪುಸ್ತಿಕೆಗಳೂ ಈ ಕಾಲದಲ್ಲಿ ಕನ್ನಡಭಾಷಾ ವ್ಯಾಕರಣ ಕ್ಷೇತ್ರಕ್ಕೆ ಪೂರಕವಾಗಿ ನಿಂತಿವೆ. ಎಚ್. ಜಿ. ಲೋಕೂರ ಅವರ ಕನ್ನಡ ನುಡಿಯ ಬೆಳವಣಿಗೆ, ಟಿ. ಎಸ್. ರಾಜಗೋಪಾಲ ಅವರ ಕನ್ನಡ ಲಿಪಿ ಹುಟ್ಟುಬೆಳವಣಿಗೆ, ಬಿ. ರಾಮಚಂದ್ರರಾವ್ ಅವರ ಕನ್ನಡ ಭಾಷೆ ಹುಟ್ಟುಬೆಳವಣಿಗೆ, ಎಸ್. ಲಕ್ಷ್ಮೀನಾರಾಯಣ ಅನೋರಾ ಅವರ ಅನ್ಯಭಾಷೆಗಳ ಮೇಲೆ ಕನ್ನಡದ ಪ್ರಭಾವ, ಸಂಗಮೇಶ ಸವದತ್ತಿಮಠರ ಕಲಬುರ್ಗಿ ಕನ್ನಡ ಪ್ರಭೇದ ಡೆಕ್ಕನ್ ಕಾಲೇಜಿನಿಂದ ಪ್ರಕಟವಾದ ಕನ್ನಡದ ಉಪಭಾಷೆಗಳ ಮೇಲಿನ ಇಂಗ್ಲೀಷಿನಲ್ಲಿರುವ ಪುಟ್ಟ ಪುಸ್ತಕಗಳು. ಕನ್ನಡ ಉಪಭಾಷೆಗಳನ್ನು ವರ್ಣಿಸುವ ಹಲವಾರು Ph.D. ಪ್ರಬಂಧಗಳೂ ಪ್ರಕಟ

ವಾಗಿವೆ. ಅವುಗಳಲ್ಲಿ ಉಪಾಧ್ಯಾಯ ಅವರ A Comparative study of four Kannada dialects, ಮೆಕಾರ್ಮೆಕ್ ಅವರ Social dialects in Dharwad ಇವಲ್ಲದೆ ದೀವರ, ಹವ್ಯಕ, ಸೋಲಿಗ, ಬಡಗ ಗೌಡ ಮುಂತಾದ ಉಪಭಾಷೆಗಳ ಬಗೆಗೆ ಕೆಲವು ಸಂಪ್ರಬಂಧಗಳಿವೆ.ಕನ್ನಡ ಕಾವ್ಯಭಾಷೆಯನ್ನು ಅಭ್ಯಸಿಸುವ ಕಾರ್ಯವೂ ನಡೆದಿದೆ. ಪಂಪನ ವಿಕ್ರಮಾರ್ಜುನ ವಿಜಯದ ಭಾಷೆಯ ವರ್ಣನಾತ್ಮಕ ವ್ಯಾಕರಣ [ಬಿ.ರಾಮಚಂದ್ರರಾವ್] ಪ್ರಕಟವಾಗಿದೆ.ಕುಮಾರವ್ಯಾಸ ಭಾರತದ [ಸಿ.ಓಂಕಾರಪ್ಪ] ವರ್ಣನಾತ್ಮಕ ವ್ಯಾಕರಣ ಪ್ರಕಟವಾಗಲಿದೆ. ವಡ್ಡಾರಾಧನೆಯ ಭಾಷಾಧ್ಯಯನ [ಕೆ. ಕುಶಾಲಪ್ಪಗೌಡ], ವಚನಗಳ ಭಾಷಾಧ್ಯಯನ [ಬಿ. ಬಿ. ರಾಜಪುರೋಹಿತ] ಪೂರ್ಣಗೊಂಡಿವೆ. ಹರಿಹರನ ರಗಳೆಗಳ ಭಾಷಾಧ್ಯಯನ [ಸಂಗಮೇಶ ಸವದತ್ತಿಮಠ] ಹಾಗೂ ನಾಗವರ್ಮನ ಕೃತಿಗಳ ಬಗೆಗೆ ಕೈಕೊಂಡ ಅಧ್ಯಯನ [ಸಂಗಮೇಶ ಬಿರಾದಾರ] ಪ್ರಕಟವಾಗಿವೆ. ಕನ್ನಡ ಭಾಷಾ ಪ್ರಭೇದಗಳ ಅಧ್ಯಯನಕ್ಕೆ ಮೀಸಲಾದ 'ಕರ್ನಾಟಕ ಭಾರತಿ'ಯ ವಿಶೇಷ ಸಂಚಿಕೆಯೊಂದನ್ನು ಕರ್ನಾಟಕ ವಿಶ್ವವಿದ್ಯಾಲಯ ಹೊರಡಿಸಿದೆ. ನೂರಾರು ಲೇಖನಗಳೂ ಕನ್ನಡ ಭಾಷೆಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಕಟವಾಗಿವೆ. ಸಮಗ್ರ ಕನ್ನಡ ವ್ಯಾಕರಣದ ಯೋಜನೆಗಳು ವಿಶ್ವವಿದ್ಯಾಲಯ ಮಟ್ಟದಲ್ಲಿ ಕಾರ್ಯಗತವಾಗಲಿವೆ. ಒಟ್ಟಿನಲ್ಲಿ ಮುಂಬರುವ ವರ್ಷಗಳಲ್ಲಿ ಕನ್ನಡ ಭಾಷಾಧ್ಯಯನ ವ್ಯಾಪಕವಾಗಿ ನಡೆಯುವ ಆಶಾದಾಯಕ ಲಕ್ಷಣಗಳಿವೆ.

3.4.1.6 ಕನ್ನಡ ಭಾಷೆಯೊಡನೆ ಸೋದರ ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನ ಕನ್ನಡದಲ್ಲಿ ಅಷ್ಟಾಗಿ ನಡೆದಿಲ್ಲ. ಹಂಪನಾ ಅವರ ದ್ರಾವಿಡ ಭಾಷಾ ವಿಜ್ಞಾನ, ಸಂಗಮೇಶ ಸವದತ್ತಿಮಠ ಅವರ ದ್ರಾವಿಡ ಭಾಷಾವ್ಯಾಸಂಗ ಎರಡೇ ಈ ಕ್ಷೇತ್ರದಲ್ಲಿ ಬಂದ ಮಹತ್ವದ ಗ್ರಂಥಗಳು. ೧ ದ್ರಾವಿಡ ಸಂಖ್ಯಾವಾಚಿಗಳು [ಹಂಪನಾ], ದ್ರಾವಿಡ ಭಾಷೆಗಳು, ದ್ರಾವಿಡ ಜನಾಂಗ, ದ್ರಾವಿಡ ಭಾಷಾ ವಿಜ್ಞಾನ ಪರಿಚಯ [ಸವದತ್ತಿಮಠ], ಕನ್ನಡ-ತೆಲುಗು ಸಂಬಂಧ ಸಾಮ್ಯ [ಕೆ. ಎಂ. ಕೃಷ್ಣರಾವ್] ಈ ನಿಟ್ಟಿನಲ್ಲಿ ಮೂಡಿದ ಕಿರುಹೊತ್ತಿಗೆಗಳು.

---

೧ ದ್ರಾವಿಡ ಜನಾಂಗಿಕ ಅಧ್ಯಯನವನ್ನು ಒಳಗೊಂಡ The Genesis and growth of Dravidian ಎಂಬ ಡಾ. ಆರ್. ಸಿ. ಹಿರೇಮಠ ಅವರ ಮೌಲಿಕ ಕೃತಿ ಪ್ರಕಟವಾಗಿದೆ. ಡಾ. ಸಂಗಮೇಶ ಸವದತ್ತಿಮಠರ ದ್ರಾವಿಡ ಭಾಷಾವಿಜ್ಞಾನ ಪರಿಚಯ ಹಾಗೂ ಡಾ. ಕೆ. ಕೆಂಪೇಗೌಡರ ತೌಲನಿಕ ದ್ರಾವಿಡ ಭಾಷಾವಿಜ್ಞಾನ ಪರಿಚಯ (ಭಾಗ ೧ ಈಚೆಗೆ ಪ್ರಕಟವಾಗಿವೆ.

3.4.1.7. ಕನ್ನಡದಲ್ಲಿ ಭಾಷಾವಿಜ್ಞಾನ ತತ್ತ್ವವಿವೇಚನೆ ಇತ್ಯಾದಿಗೆ ಸಂಬಂಧಿಸಿದಂತೆ ಕೆಲವು ಗ್ರಂಥಗಳನ್ನಿಲ್ಲಿ ಸ್ಮರಿಸಬಹುದು. ಎಂ. ಚಿದಾನಂದಮೂರ್ತಿ ಅವರ ಭಾಷಾವಿಜ್ಞಾನದ ಮೂಲತತ್ತ್ವಗಳು, ಎಚ್. ಎಸ್. ಬಿಳಿಗಿರಿ ಅವರ ವರ್ಣನಾತ್ಮಕ ವ್ಯಾಕರಣ, ಹಂಪನಾ ಅವರ ಭಾಷಾವಿಜ್ಞಾನ, ಜೆ. ಎಸ್. ಕುಳ್ಳಿ ಅವರ ವರ್ಣನಾತ್ಮಕ ಭಾಷಾವಿಜ್ಞಾನ, ಐತಿಹಾಸಿಕ ಭಾಷಾವಿಜ್ಞಾನ, ಭಾಷಾಸೌಧ, ಕೆ. ಕೆಂಪೇಗೌಡ ಹಾಗೂ ಆರ್ವೈಯಸ್ ಸುಂದರಂ ಅವರ ಭಾಷೆ ಮತ್ತು ಭಾಷಾವಿಜ್ಞಾನ, ಧ್ವನಿಮಾ ವಿಜ್ಞಾನ ಭಾಷಾವರ್ಗೀಕರಣ ಮುಂತಾದ ಗಮನಾರ್ಹ ಕೃತಿಗಳು ಪ್ರಕಟಗೊಂಡಿವೆ. ತಮಿಳು, ಮಲೆಯಾಳಂ ಮುಂತಾದ ಭಾಷೆಗಳೊಂದಿಗೆ ಹೋಲಿಸಿದರೆ ಕನ್ನಡದಲ್ಲಿ ಆಗಿರುವ ಭಾಷಾವಿಜ್ಞಾನದ ಕೃಷಿ ತೀರ ಕಡಿಮೆಯೇ.[೧]

ವ್ಯಾಕರಣ ಹಾಗೂ ಭಾಷಾವಿಜ್ಞಾನದಲ್ಲಿ ಕೃಷಿ ಕನ್ನಡಕ್ಕೆ ಸಂಬಂಧಿಸಿದಂತೆ ಯಾವ ಯಾವ ಹಂತಗಳಲ್ಲಿ, ಕ್ಷೇತ್ರಗಳಲ್ಲಿ ನಡೆದಿದೆಯೆಂಬುದನ್ನು ಸ್ಥೂಲವಾಗಿ ಈ ವರೆಗೆ ನೋಡಿದೆವು.

### 3.4.2. ಮುಂದಿನ ಸಾಧ್ಯತೆಗಳು :

ಮುಂದಿನ ಸಾಧ್ಯತೆಗಳನ್ನು ಯೋಜಿಸುವಾಗ ನಮಗೆ ಎದುರಾಗುವ ಪ್ರಶ್ನೆ ಎಂದರೆ ಪರಂಪರಾಗತ ವ್ಯಾಕರಣಗಳು ಅನುಸರಿಸಿರುವ ಕನ್ನಡ ಭಾಷೆಯ ವಿವರಣೆ ವಿಶ್ಲೇಷಣಾ ವಿಧಾನಗಳನ್ನು ಆಧುನಿಕ ಭಾಷಾವಿಜ್ಞಾನದ ವಿಧಾನಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಹೊಸಬಗೆಯ ವ್ಯಾಕರಣ ರಚಿಸಬಹುದೇ ಅಥವಾ ಪರಂಪರಾಗತ ವ್ಯಾಕರಣಗಳ ಯಾವ ಅಂಶಗಳನ್ನೂ ಗಮನಿಸದೆ ಇಂದಿನ ಕನ್ನಡವನ್ನು ಭಾಷಾವೈಜ್ಞಾನಿಕವಾಗಿ ವಿವರಿಸುವುದು ಉಚಿತವೆ ? ಎಂಬುದು.

ಭಾಷಾವಿಜ್ಞಾನ ಹಲವು ಹತ್ತು ಸಿಟ್ಟಿನಲ್ಲಿ ನವೀನತಮ ಸಂಶೋಧನೆಗಳಿಂದ ಮುಂದುವರಿಯುತ್ತಿರುವ ಈ ಕಾಲದಲ್ಲಿ ಹಳೆಯ ವಿಶ್ಲೇಷಣಾ ವಿಧಾನಗಳನ್ನು ಎಷ್ಟರಮಟ್ಟಿಗೆ ಅಳವಡಿಸಿಕೊಳ್ಳಬೇಕೆಂಬುದನ್ನು ನಿರ್ದಿಷ್ಟವಾಗಿ ಸದ್ಯ ಹೇಳುವದು

---

೧. ಈ ಪ್ರಕರಣದಲ್ಲಿ ಈ ವರೆಗೆ ಪ್ರಕಟವಾದ ಎಲ್ಲ ಪುಸ್ತಕಗಳನ್ನೂ ಹೆಸರಿಸಲು (ವಿಸ್ತಾರಭಯದಿಂದ) ಸಾಧ್ಯವಾಗಿಲ್ಲ. ಗ್ರಂಥದ ಕೊನೆಗೆ ಕೆಲವು ಮಹತ್ವದ ಪುಸ್ತಕಗಳ ಪಟ್ಟಿಯನ್ನು ನೀಡಲಾಗಿದೆ.

ಕಾರಣವಾದರೂ ಹಳೆಯ ಕೆಲವು ವಿಚಾರ (Concept ಗಳು ಈಗಿನ ಭಾಷೆಗೂ ಅನ್ವಯಿಸುವುದರಿಂದ ಅಂಥವನ್ನು ಇಟ್ಟುಕೊಳ್ಳಬೇಕು. ಹಾಗೆಯೆ ಆಧುನಿಕ ಭಾಷಾ ವಿಜ್ಞಾನದ ತತ್ತ್ವಗಳಿಗನುಸಾರವಾಗಿಯೂ ವ್ಯಾಕರಣಗಳನ್ನು ರಚಿಸಿರಬಹುದು. ಆಧುನಿಕ ಭಾಷಾವಿಜ್ಞಾನ ಶಾಖೋಪಶಾಖೆಗಳಾಗಿ ಹೆಚ್ಚು ವೈಜ್ಞಾನಿಕವಾಗಿ ಬೆಳೆಯುತ್ತಿರುವುದರಿಂದ ಆ ದಿಶೆಯಲ್ಲಿಯೂ ಕನ್ನಡವನ್ನು ಹಲವು ಮುಖಗಳಿಂದ ವರ್ಣಿಸುವ ಕೆಲಸವಾಗಬೇಕು. ಆಧುನಿಕ ಭಾಷಾ ವೈಜ್ಞಾನಿಕ ತತ್ತ್ವಗಳಿಗೆ ಅನುಗುಣವಾಗಿ ರಚಿಸಲ್ಪಡುವ ವ್ಯಾಕರಣಗಳಲ್ಲಿ ಮೂರು ಪ್ರಕಾರದ ವ್ಯಾಕರಣಗಳಿವೆ- ವರ್ಣನಾತ್ಮಕ, ಐತಿಹಾಸಿಕ ಹಾಗೂ ತೌಲನಿಕ ವ್ಯಾಕರಣಗಳು. ಧ್ವನಿ, ಧ್ವನಿಮಾ ಆಕೃತಿಮಾ, ವಾಕ್ಯ ಈ ವಿಭಾಗಗಳಲ್ಲಿ ಭಾಷಾವೈಜ್ಞಾನಿಕ ವಿವರಣೆಯಿಂದ ಭಾಷೆ ನಿರ್ದಿಷ್ಟವಾಗಿ, ಖಚಿತವಾಗಿ ವಿವರಿಸಲ್ಪಡುತ್ತದೆ. ಧ್ವನಿ, ಶಬ್ದ, ವಾಕ್ಯಖಂಡಕ್ಕಿಂತ ವಾಕ್ಯವನ್ನೇ ಮೂಲ ಘಟಕವನ್ನಾಗಿ ಹಿಡಿದು, ಮೂಲವಾಕ್ಯದಿಂದ ವಾಕ್ಯಗಳನ್ನು **generate** ಮಾಡುವ ಶಕ್ತಿಯನ್ನು ಮೂಲವಾಗಿ ಪರಿಗಣಿಸಿ (**Transformative Grammar**) ರೂಪಾಂತರ ವ್ಯಾಕರಣ ರಚಿಸುವ ಬಗೆ ಇತ್ತೀಚೆಗೆ ಬಂದಿದೆ. ನಿಯೋಮ್ ಚೋಮ್‌ಸ್ಕಿ T. G ನಿಯಮಗಳ ಮೂಲ ಪ್ರವರ್ತಕ. ಆದರೆ ಭಾಷೆಯ ವರ್ಣನೆಯನ್ನು ಅದನ್ನು ಮಾತನಾಡುವ ಮನುಷ್ಯನ ಸಾಮಾಜಿಕ ಅರ್ಥ ವಿವರಣೆಯ ಹಿನ್ನೆಲೆಯಲ್ಲಿ ಮಾಡುವುದು ಹೆಚ್ಚು ಸೂಕ್ತ ಎಂದೂ ಈಗ ಭಾವಿಸಲಾಗುತ್ತಿದೆ.

ಈ ನಿಟ್ಟನಲ್ಲಿ ಹೊಸಬಗೆಯ ಕನ್ನಡ ವ್ಯಾಕರಣಗಳ ಅವಶ್ಯಕತೆ ಇದೆ. ಕನ್ನಡ ಭಾಷೆಯ ರಚನೆಯ ತಿರುಳನ್ನು ಸರಿಯಾಗಿ ಅರಿಯಲು ವಿವಿಧ ಕಾಲದ ಗ್ರಂಥಸ್ಥ, ಶಾಸನೋಕ್ತ ಭಾಷೆಯ ವರ್ಣನಾತ್ಮಕ ವ್ಯಾಕರಣಗಳ ತೌಲನಿಕ ಅಧ್ಯಯನ ನಡೆಯಬೇಕು. ಕನ್ನಡದ ಎಲ್ಲಾ ಉಪಭಾಷೆಗಳ ಸರಿಯಾದ ಪರಿವೀಕ್ಷಣೆ ಹಾಗೂ ಅಧ್ಯಯನ ನಡೆದು ಉಪಭಾಷೆಗಳ ವ್ಯಾಕರಣಗಳು ಸಿದ್ಧವಾಗಿ ಇವುಗಳ ಹಿನ್ನೆಲೆಯಲ್ಲಿ ಸಮಗ್ರ ಆಧುನಿಕ ಕನ್ನಡ ಭಾಷೆಯನ್ನು ವಿವರಿಸುವ ವ್ಯಾಕರಣ ರಚಿತವಾಗಬೇಕು.

ಪರಂಪರಾಗತ ವ್ಯಾಕರಣಗಳಲ್ಲಿ ಕೆಲವು ಮೂಲಭೂತ ಕೊರತೆಗಳು ಇವೆ. ಕೆಲವನ್ನು ಇಲ್ಲಿ ಪಟ್ಟಿಮಾಡಲಾಗಿದೆ.

೧. ಅವು ಸಂಸ್ಕೃತದ ಮಾದರಿಯನ್ನು ತಪ್ಪದೇ ಅನುಸರಿಸಿವೆ. ೨. ಅವು ಆಜ್ಞಾಸ್ವರೂಪವಾಗಿವೆ. ೩. ಆಡುನುಡಿಯ ಕಡೆಗೆ ಅವು ಮಹತ್ವ ನೀಡಿಲ್ಲ.

೪. ಉದಾಹರಣೆಗಳನ್ನು ನೀಡುವಾಗ ಸಾಮಾನ್ಯವಾಗಿ ಹಳೆಯ ರೂಪಗಳನ್ನೇ ನೀಡುತ್ತವೆ. ೫. ಜನಸಾಮಾನ್ಯರಿಗಿಂತ ಪಂಡಿತ ಮಂಡಲಿಯೆಡೆಗೆ ಇವುಗಳ ಲಕ್ಷ್ಯವಿದ್ದಂತೆ ತೋರುತ್ತದೆ. ೬. ಶಬ್ದಶಾಸ್ತ್ರಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಉಳಿದವುಗಳನ್ನು ಗೌಣವಾಗಿ ಕಂಡಿವೆ. ೭. ಭಾಷಾ ಸಂಕೀರ್ಣತೆಯನ್ನು ವಿವರಿಸಲು ಸಾಧ್ಯವಾಗದಿರುವ ಸಂದರ್ಭಗಳಲ್ಲಿ ಅಪವಾದಗಳೆಂದು ಹೇಳಿ ದಾಟಿಸಿಬಿಡುತ್ತವೆ. ೮. ನಿಯಮಗಳಿಗೆ ಉದಾಹರಣೆಗಳನ್ನು ಹುಡುಕುವ ಕಾರ್ಯಮಾಡುತ್ತವೆಯೇ ವಿನಾ ಉದಾಹರಣೆಗಳನ್ನು ಗಮನಿಸಿ ನಿಯಮ ರಚಿಸುವುದಿಲ್ಲ. ಅನೇಕ ವೇಳೆ ಸಂಸ್ಕೃತದ ನಿಯಮವನ್ನು ಇಟ್ಟುಕೊಂಡು ಕನ್ನಡದ ಉದಾಹರಣೆ ಹುಡುಕುತ್ತವೆ. ಈ ಬಗೆಯ ಕೊರತೆ ಅಥವಾ ದೋಷಗಳನ್ನು ಆಧುನಿಕ ಭಾಷಾವಿಜ್ಞಾನ ಒಳಗೊಂಡಿಲ್ಲ.

ವ್ಯಾಕರಣ ಶಾಸ್ತ್ರವು ಭಾಷಾಶಾಸ್ತ್ರ ಅಂದರೆ **Philology** ಆಗಿ ಇದೀಗ ಭಾಷಾವಿಜ್ಞಾನ **Linguistics** ಆಗಿ ಪರಿಣಮಿಸಿದೆ. ಆಧುನಿಕ ಭಾಷಾವಿಜ್ಞಾನ ಅನೇಕ ಸಂಪ್ರದಾಯಗಳಾಗಿ ಬೆಳವಣಿಗೆ ಹೊಂದುತ್ತಲಿದೆ. ವಿಲ್ಯಂಜೋನ್ಸ (1786) ಸಿಂದ ನಿಯೊಮ್ ಚೋಮ್‌ಸ್ಕಿ ವರೆಗಿನ ಇನ್ನೂರು ವರ್ಷಗಳ ಅವಧಿಯಲ್ಲಿ ಸಸೂರ್, ಸಪೀರ್, ಬ್ಲೂಮ್‌ಫೀಲ್ಡ್, ಪೈಕ, ಹಾಕೆಟ್, ಪರ್ಥ ಹ್ಯಾಲೀಡೆ, ಚೋಮ್‌ಸ್ಕಿ ಮುಂತಾದವರು ಈ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ಸಲ್ಲಿಸಿದ್ದಾರೆ. ಅಮೇರಿಕ, ಲಂಡನ್ ಮುಂತಾದ ಸಂಪ್ರದಾಯಗಳು ಬೆಳೆದಿದ್ದರೂ ಸ್ಟ್ರಕ್ಚರಲಿಸ್ಟ ಬ್ಲೂಮಫೀಲ್ಡ್, ಮತ್ತು ಟ್ರಾನ್ಸಫಾರ್ಮೇಶನಲ್ ಜನರೇಟಿವ್ನ ಚೋಮಸ್ಕಿ ಇವರ ಸಿದ್ಧಾಂತಗಳು ಈಗಲೂ ಚಾಲ್ತಿಯಲ್ಲಿವೆ. ಇದಲ್ಲದೆ ಭಾಷೆಯನ್ನು ಸಾಮಾಜಿಕ ಹಿನ್ನೆಲೆಯಲ್ಲಿಯೂ ವಿವರಿಸುವ ಸಂಪ್ರದಾಯಗಳು ರೂಪುಗೊಳ್ಳುತ್ತಿವೆ. ಈ ನಿಟ್ಟಿನಲ್ಲಿ ಕನ್ನಡ ಭಾಷೆಯ ವಿಶ್ಲೇಷಣೆಯೂ ನಡೆಯಬೇಕಾದುದು ತೀರ ಅವಶ್ಯಕವಾಗಿದೆ.

---

# ೪

## ಧ್ವನಿ ಶಾಸ್ತ್ರ

4.1 ‘ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ’ — ಬಸವಣ್ಣನವರ ವಚನದ ಈ ಸಾಲಿನಲ್ಲಿ ‘ಕಟ್ಟೆ’ ಎಂಬ ಒಂದೇ ರೂಪ ಎರಡು ಸಲ ಬಂದಿದೆ— ಎರಡು ಅರ್ಥಗಳಲ್ಲಿ. ಆವೆರಡರ ಉಚ್ಚಾರ ಈಗ ಒಂದೇ ಬಗೆಯಲ್ಲಿ ಇಲ್ಲ. ‘ಕಟ್ಟೆಯ ಕಟ್ಟಿ’ ಎಂದು ಬರೆದರೂ ಉಚ್ಚಾರಕ್ಕೆ ಸಮೀಪವಾಗುವುದಿಲ್ಲ. ಇನ್ನೊಂದು ಉದಾಹರಣೆ ಗಮನಿಸಿರಿ— ‘ಕತ್ತಿಮ್ಯಾಲ ಕತ್ತಿ ತೂಗಾಡಕ ಹತ್ತೇತಿ’ ಈ ಮಾತಿನ ಅರ್ಥ ಇಲ್ಲಿ ಬಳಕೆಯಾಗಿರುವ ‘ಕತ್ತಿ’ ಯ ಎರಡೂ ರೂಪಗಳ ಉಚ್ಚಾರ ತಿಳಿಯುವವರೆಗೂ ಹೊಳೆಯಲಾರದು. ಇಲ್ಲಿ ಮೊದಲನೆಯ ಕತ್ತಿ ಎಂದರೆ ಕತ್ತೆ, ಒಂದು ಪ್ರಾಣಿ. ಎರಡನೆಯ ಕತ್ತಿ— ಖಡ್ಗ ಎಂಬರ್ಥವನ್ನು ಹೊಂದಿದೆ. ಹೀಗೆಯೇ ‘ನಮ್ಮ ಅತ್ತಿ (ಅತ್ತೆಮ್ಮ) ಅತ್ತಿ (ಹಣ್ಣು) ಕೊಟ್ಲು’. ನೀರು ಹರಿಯುತನಾ ಅವನ ಹರಿ (ತಾರುಣ್ಯ) ಇರತದ’ ಇಂಥ ಉದಾಹರಣೆಗಳಿಂದ ನಮಗೆ ತಿಳಿದು ಬರುವ ಅಂಶವೆಂದರೆ— ಆಡುಮಾತಿನ ಧ್ವನಿ ಘಟಕಗಳನ್ನು ಲಿಪಿ ಅಥವಾ ಬರಹ ಇದ್ದಕ್ಕಿದ್ದಂತೆ ಪ್ರತಿನಿಧಿಸಲಾರದು ಎಂಬುದು. ಸಾಮಾನ್ಯವಾಗಿ ಎಲ್ಲ ಭಾಷೆಗಳಲ್ಲೂ ಈ ವ್ಯತ್ಯಾಸ ಇದ್ದೇ ಇರುತ್ತದೆ. ಕೆಲವು ಭಾಷೆಗಳಲ್ಲಿ ಪ್ರಮಾಣ ಕಡಿಮೆ ಇರಬಹುದಷ್ಟೇ. ಇಂಗ್ಲೀಷಿನಲ್ಲಿ Put ಇದರ ಉಚ್ಚಾರ ಪುಟ್ ಆದರೆ but ಇದರ ಉಚ್ಚಾರ ಬುಟ್ ಆಗದೇ ಬಟ್ ಎಂದಾಗುತ್ತದೆ. colonel [ಕರ್ನಲ್] ರೂಪದಲ್ಲಿನ ಲಿಪಿಗೂ ಉಚ್ಚಾರಕೂ ಎಷ್ಟು ದೂರದ ಅಂತರವಿದೆ! **Along, Arm, Ate** ಇವುಗಳಲ್ಲಿ ಬರುವ A ಲಿಪಿ ಸಂಕೇತಕ್ಕೆ ಮೊದಲನೆಯದರಲ್ಲಿ ‘ಅ’ [ಅಲೊಂಗ], ಎರಡನೆಯದರಲ್ಲಿ ‘ಆ’ [ಆರ್ಮ], ಮೂರನೆಯದರಲ್ಲಿ ‘ಏ’ [ಏಟ] ಎಂಬ ಉಚ್ಚಾರಗಳಿವೆ. ಕನ್ನಡದ ಅಂಟು, ಅಂಬು, ಅಂತು, ಅಂಕ, ಅಂಚು ಈ ಶಬ್ದಗಳಲ್ಲಿ ಬರುವ ಬಿಂದುವಿನ ಉಚ್ಚಾರ ಅನುಕ್ರಮವಾಗಿ ಣ್, ಮ್, ನ್, ಙ್, ಞ, ಎಂಬುದಾಗಿದೆ. ಆದರೂ ಅವೆಲ್ಲಕ್ಕೂ ಒಂದೇ ಬಿಂದು ಲಿಪಿ ಸಂಕೇತವಿದೆ. ತಮಿಳು ಭಾಷೆಯಲ್ಲಿ ಇನ್ನೂ ವಿಚಿತ್ರವಿದೆ— ಗಣಪತಿ ಇದರ ಉಚ್ಚಾರ ‘ಕಣಬದಿ’, ಅದನ್ನು ಕಣಪತಿ ಎಂದು ಬರೆಯಲಾಗುತ್ತದೆ. ಇದಕ್ಕೆ

ಕಾರಣವೆಂದರೆ ಗ, ಜ, ಡ, ದ, ಬ ಗಳಿಗೆ ತಮಿಳಿನಲ್ಲಿ ಲಿಪಿ ಸಂಕೇತಗಳಿಲ್ಲ. ಹಾಗೂ ಶಬ್ದ ಮಧ್ಯದ ಕ, ಚ, ಟ, ತ, ಪ ಗಳು ಗ, ಜ, ಡ, ದ, ಬ ಗಳಾಗಿ ಉಚ್ಚರಿಸಲ್ಪಡುತ್ತವೆ. ಈ ವರೆಗೆ ನಾವು ಪರಿಗಣಿಸಿದ ಉದಾಹರಣೆಗಳಿಂದ ವರ್ಣಮಾಲೆಯಲ್ಲಿರುವ ಲಿಪಿ ಸಂಕೇತಗಳು ಭಾಷೆಯಲ್ಲಿ ಬಳಕೆಯಲ್ಲಿರುವ ಧ್ವನಿಗಳನ್ನು ಇದ್ದಕಿದ್ದಂತೆ ಪ್ರತಿನಿಧಿಸುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ವರ್ಣಮಾಲೆ (ಅಥವಾ ಲಿಪಿ ಸಂಕೇತಗಳಿ) ಗೂ ಆಡುನುಡಿಯಲ್ಲಿ ನಾವು ಉಚ್ಚರಿಸುವ ಧ್ವನಿಗಳಿಗೂ ನೇರವಾದ ಸಂಬಂಧವಿಲ್ಲವೆಂದಾಯಿತು.

ನಾವು ಮಕ್ಕಳಿಗೆ ಭಾಷೆಯನ್ನು ಕಲಿಸುವಾಗ ಲಿಪಿ ರೂಪದಲ್ಲಿರುವ ವರ್ಣಮಾಲೆಯಿಂದ ಆರಂಭಿಸುತ್ತೇವೆ. ಆದರೆ ಅದು ಎಷ್ಟು ಅಸಮರ್ಪಕ ಎನ್ನುವುದನ್ನು ಮೇಲಿನ ವಿವರಣೆಯಿಂದ ಮನಗಾಣಬಹುದು. ಭಾಷೆಯ ನಿಜವಾದ ಸ್ವರೂಪವನ್ನು ಅರಿಯಲು ವಿಶ್ಲೇಷಿಸಲು ಲಿಪಿಯುಕ್ತ ವರ್ಣಮಾಲೆ ಪ್ರಯೋಜನಕಾರಿಯಾಗದು. ಧ್ವನಿಯೇ ಭಾಷೆಗೆ ಮೂಲ ಆದ್ದರಿಂದ ಜೀವಂತ ಭಾಷೆಯ ಧ್ವನಿವಿವರಗಳನ್ನು ಅರಿತುಕೊಳ್ಳಲು ಧ್ವನಿಶಾಸ್ತ್ರದ ಅಧ್ಯಯನ ಅವಶ್ಯಕವಾಗಿದೆ. ಭಾಷೆಯ ಧ್ವನಿಗಳ ಅಧ್ಯಯನವು, ಬರಹದ (ವರ್ಣಮಾಲೆಯ) ಅಸಮರ್ಪಕತೆಯನ್ನು ಅರಿತು ಸರಿಪಡಿಸಲು, ಬೆಳೆಸಲು ಅನುಕೂಲತೆಯನ್ನೊದಗಿಸುತ್ತದೆ. ಭಾಷೆಯ ಮೂಲ ಸಾಮಗ್ರಿಯೇ ಧ್ವನಿ. ಧ್ವನಿಯ ಬದಲಾವಣೆಯಿಂದ ಭಾಷೆಯಲ್ಲಿ ಬದಲಾವಣೆಗಳಾಗುತ್ತವೆ. ಆದ್ದರಿಂದ ಆ ಬೆಳವಣಿಗೆಗಳನ್ನು ಗುರುತಿಸಲು ಧ್ವನಿ ವಿಶ್ಲೇಷಣೆಗಾಗಿ ಧ್ವನಿಯ ಭೌತ ಗುಣಧರ್ಮಗಳ ಅಭ್ಯಾಸದ ಆವಶ್ಯಕತೆ ಇದೆ. ಮಾತಿನ ಘಟಕಗಳಾಗುವ ಧ್ವನಿಗಳ ಅಭ್ಯಾಸವನ್ನೇ ಧ್ವನಿಶಾಸ್ತ್ರ ಒಳಗೊಂಡಿರುತ್ತದೆ.) ಕೆ. ಎಲ್. ಪೈಕ ಎಂಬ ಸುಪ್ರಸಿದ್ಧ ಭಾಷಾವಿಜ್ಞಾನಿ Phonetics colletcs raw material and Phonemics cooks it ("ಧ್ವನಿಶಾಸ್ತ್ರವು ಕಚ್ಚಾ ಸಾಮಗ್ರಿಯನ್ನು ಕೂಡಿಸಿದರೆ ಧ್ವನಿಮಾ ಶಾಸ್ತ್ರವು ಅದನ್ನು ಪಾಕಗೊಳಿಸುತ್ತದೆ") ಎಂಬ ಮಾತಿನಲ್ಲಿ ಯಾವುದೇ ಭಾಷೆಯನ್ನು ವಿವರಿಸಬೇಕಾದರೆ ಮೊಟ್ಟಮೊದಲು ಧ್ವನಿಶಾಸ್ತ್ರದ ಅಭ್ಯಾಸ ಎಷ್ಟು ಅಗತ್ಯವೆಂಬುವದನ್ನು ಸೂಚಿಸಿದ್ದಾನೆ.

4.7. ( ಮನುಷ್ಯನು ಧ್ವನಿಯನ್ನು ಹುಟ್ಟಿಸಲು ಕಾರಣವಾಗುವ ಧ್ವನ್ಯಂಗಗಳು, ಉತ್ಪನ್ನವಾಗುವ ಧ್ವನಿಗಳು ಅವುಗಳ ಪ್ರಸಾರದ ಭೌತಗುಣಧರ್ಮ ಮುಂತಾದವು ಧ್ವನಿಶಾಸ್ತ್ರದಲ್ಲಿ ಒಳಗೊಳ್ಳುತ್ತವೆ. ಮಾನವನು ಹೊರಡಿಸಬಹುದಾದ ಎಲ್ಲ ಬಗೆಯ

ಧ್ವನಿಗಳನ್ನು ವ್ಯವಸ್ಥಿತವಾಗಿ ಗುರುತಿಸಿ ಅವುಗಳಿಗೆ ನಿರ್ದಿಷ್ಟ ಸಂಕೇತಗಳನ್ನು ಕೊಡಲಾಗುತ್ತದೆ.) ಅಂತಾರಾಷ್ಟ್ರೀಯ ಧ್ವನ್ಯಾಲೇಖ (International phonetic Script) ಒಂದು ಇಂತಹ ಸಂಕೇತಗಳನ್ನು ಒಳಗೊಂಡು ರಚಿತವಾಗಿದೆ.( ಈ ಧ್ವನಿ ಲಿಪಿಯ ಸಂಕೇತಗಳನ್ನು ಸಾಮಾನ್ಯವಾಗಿ ಭಾಷಾವಿಜ್ಞಾನಿಗಳು ಬಳಸುತ್ತಾರೆ. ಧ್ವನಿಶಾಸ್ತ್ರದಲ್ಲಿ ಧ್ವನಿಗಳು ಹುಟ್ಟುವ ರೀತಿ, ಸ್ಥಾನ-ಕರಣಗಳ ಪಾತ್ರ, ಧ್ವನಿಗಳ ಗುಣಧರ್ಮ, ವರ್ಗೀಕರಣ ಇತ್ಯಾದಿಗಳ ಶಾಸ್ತ್ರೀಯ ವಿವರಣೆ ಇರುವದರಿಂದ ಧ್ವನಿ ಶಾಸ್ತ್ರವನ್ನು ಅಭ್ಯಸಿಸಿದ ವಿದ್ಯಾರ್ಥಿ ಭಾಷಾವಿಶ್ಲೇಷಣೆ ಮಾಡಲು ಒಳ್ಳೆಯ ತರಬೇತಿ ಪಡೆದಂತೆನಿಸುತ್ತದೆ. ಈ ವಿಶಿಷ್ಟ ತರಬೇತಿಯಿಂದ ಜಗತ್ತಿನ ಯಾವುದೇ ಭಾಷೆಯ ಮೂಲ ಧ್ವನಿಸ್ವರೂಪವನ್ನು ಅವನು ಸುಲಭವಾಗಿ ಗುರುತಿಸಬಹುದು. ಲಿಪಿಯಿಲ್ಲದ ಭಾಷೆಗಳಿಗೆ ಲಿಪಿ ರೂಪಿಸಬಹುದು. ಹಲವಾರು ಭಾಷೆಗಳಲ್ಲಿದ್ದಂತೆ ಅವುಗಳ ಸಹಜ ಉಚ್ಚಾರವನ್ನೇ ತಾನು ಮಾಡಲು ಶಕ್ತನಾಗುತ್ತಾನೆ.

ಕನ್ನಡದ ಪರಂಪರಾಗತ ವೈಯಾಕರಣಿಗಳು ಧ್ವನಿಶಾಸ್ತ್ರಕ್ಕೆ ವಿಶೇಷ ಮಹತ್ವವನ್ನು ಕೊಡಲಿಲ್ಲ. ಪಾಣಿನಿ ಈ ವಿಷಯವಾಗಿ ಅನೇಕ ಅಂಶಗಳನ್ನು ವಿವರಿಸಿದ್ದಾನೆ. ಕನ್ನಡದ ನಾಗವರ್ಮ, ಕೇಶಿರಾಜ ಮೊದಲಾದವರು ಕಾತಂತ್ರ ಶಾಖೆಯನ್ನು ಅನುಸರಿಸಿದ್ದರಿಂದ ಪಾಣಿನಿಯ ಧ್ವನಿಶಾಸ್ತ್ರ ವಿಚಾರಗಳೆಡೆಗೆ ಅಷ್ಟಾಗಿ ಒಲವು ತೋರಲಿಲ್ಲ. ಆದರೂ ಪ್ರಾಸಂಗಿಂಕವಾಗಿ ಅಲ್ಲೊಂದು ಇಲ್ಲೊಂದು ಸೂತ್ರ ಧ್ವನಿಶಾಸ್ತ್ರಕ್ಕೆ ಸಂಬಂಧಿಸಿ ಅವರಲ್ಲಿ ದೊರೆಯುವುದು ಪಾಣಿನಿಯ ಪ್ರಭಾವದಿಂದಲೇ.

ಧ್ವನಿಶಾಸ್ತ್ರದಲ್ಲಿ ಮೂರು ಬಗೆಯ ಅಧ್ಯಯನವನ್ನು ಕಾಣಬಹುದು

೧. ಭೌತ ಧ್ವನಿಶಾಸ್ತ್ರ ಅಥವಾ ಧ್ವನಿತರಂಗಳಜ್ಞಾನ (Acoustic Phonetics)
೨. ಶ್ರಾವಕ ಮತ್ತು ಧ್ವನಿಗ್ರಹಣಶಾಸ್ತ್ರ (Auditary phonetics).
೩. ಉಚ್ಚಾರಣಾತ್ಮಕ ಅಥವಾ ಧ್ವನ್ಯುತ್ಪಾದನಶಾಸ್ತ್ರ (Articulatory phonetics)

4.2.1.1. ಭೌತಧ್ವನಿಶಾಸ್ತ್ರದಲ್ಲಿ ಧ್ವನಿ ತರಂಗಗಳ ಉದ್ದ, ಅಗಲ, ಅವುಗಳ ವೇಗ ಮುಂತಾದ ಅಂಶಗಳನ್ನು ಭೌತಶಾಸ್ತ್ರದ ದೃಷ್ಟಿಯಿಂದ (Physic·) ಪರಿಶೀಲಿಸಿ, ಸಂಶೋಧಿಸಿ, ಆ ಧ್ವನಿ ಅಲೆಗಳನ್ನು ರೇಡಿಯೋ, ಟೆಲಿವಿಜನ್ ಟೆಲಿಫೋನ್ ಇತ್ಯಾದಿ

ಗಳಲ್ಲಿ ಹೇಗೆ ಬಳಸಬಹುದೆಂಬುದರ ಬಗೆಗಿನ ಅಧ್ಯಯನ ಭೌತಧ್ವನಿಶಾಸ್ತ್ರದಲ್ಲಿ ಒಳಗೊಂಡಿರುತ್ತದೆ. ಭೌತಧ್ವನಿಶಾಸ್ತ್ರದ ಅಧ್ಯಯನ ಭಾಷೆಯ ವಿಶ್ಲೇಷಣೆಗೆ ಅಷ್ಟೊಂದು ಅಗತ್ಯವಿಲ್ಲ ಎಂಬ[1] ಅಭಿಪ್ರಾಯವಿತ್ತು. ಆದರೆ ಇತ್ತೀಚೆಗೆ ಸಂಶೋಧಿತವಾದ ಆಧುನಿಕ ಯಂತ್ರಗಳ ನೆರವಿನಿಂದ ಮನುಷ್ಯನ ಧ್ವನಿಗಳ ಹುಟ್ಟು-ಬೆಳವಣಿಗೆ-ಪ್ರಸಾರ ಇತ್ಯಾದಿಗಳನ್ನು ಹೆಚ್ಚು ಖಚಿತವಾಗಿ ವಿವರಿಸಲು ಸಾಧ್ಯವಾಗಿದೆ. ಲ್ಯಾರಿಂಗೊಸ್ಕೋಪ್, ಪೆಲಟೊಗ್ರಾಫ್, ಕೈಮೋಗ್ರಾಫ್, ಪಿಚ್ ಮೀಟರ್, ವೈಬ್ರೇಟರ್ ಬಾಕ್ಸ್, 48 ಚೆನಲ್ ಆಡಿಯೋ ಫ್ರಿಕ್ವೆನ್ಸಿ ಫಿಲ್ಟರ್, ಲ್ಯಾರಿಂಗೋಗ್ರಾಫ್, ಒಸ್ಸಿಲೋಸ್ಕೋಪ್, ಸೋನಾಗ್ರಾಫ್, ಸ್ಪೆಕ್ಟ್ರೋಮೀಟರ್, ಗ್ಲೊಟೊಗ್ರಾಫ್ ಮುಂತಾದ ಹಲವಾರು ಅತ್ಯಾಧುನಿಕ ಯಂತ್ರಗಳು ಮಾನವ ಭಾಷೆಯ ಧ್ವನಿಸ್ವರೂಪ, ಲಕ್ಷಣಗಳನ್ನು ಹೆಚ್ಚು ಖಚಿತವಾಗಿ ಗುರುತಿಸಲು ಸಹಾಯಕಾರಿಯಾಗಿ ದೊರೆತಿವೆ. ಮೇಲಾಗಿ ಭೌತ ಧ್ವನಿಶಾಸ್ತ್ರವು ಧ್ವನಿಗ್ರಹಣ ಶಾಸ್ತ್ರ ಹಾಗೂ ಧ್ವನ್ಯುತ್ಪಾದನ ಶಾಸ್ತ್ರಗಳಿಗೆ ಪರಸ್ಪರ ಪೂರಕವಾಗಿರುವುದನ್ನು ಕಾಣಬಹುದು.

ಶ್ರಾವಕ ಧ್ವನಿಶಾಸ್ತ್ರವು ಒಂದು ಬಗೆಯಲ್ಲಿ ಭೌತಶಾಸ್ತ್ರದಲ್ಲೇ ಸೇರುತ್ತದೆ. ಧ್ವನಿಗ್ರಹಣ, ಧ್ವನಿಯನ್ನು ಗ್ರಹಿಸುವುದು; ಅದು ಕೇಳಿಸುವಂತೆ ಮಾಡುವುದು ಈ ಬಗೆಗಿನ ಅಧ್ಯಯನವೆಲ್ಲ ಇದರಲ್ಲಿ ಒಳಗೊಳ್ಳುತ್ತದೆ. ಧ್ವನಿಗಳ ಸ್ವರೂಪವನ್ನು ವಿವಿಧ ಯಂತ್ರಗಳ ಸಹಾಯದಿಂದ ಆಧುನಿಕ ವಿಜ್ಞಾನಕ್ಕೆ ಅನುಗುಣವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಅದನ್ನು ಯಾಂತ್ರಿಕ ಧ್ವನಿ ವಿಜ್ಞಾನ/ಪ್ರಯೋಗಾಲಯ ಧ್ವನಿ ವಿಜ್ಞಾನ ಎಂದು ಕರೆಯಲಾಗುತ್ತದೆ. ಭೌತಶಾಸ್ತ್ರ ಈ ಅಧ್ಯಯನದ ಪೂರ್ವಾರ್ಧವಾದರೆ ಶ್ರಾವಕ ಧ್ವನಿಶಾಸ್ತ್ರ ಉತ್ತರಾರ್ಧವೆನಿಸುತ್ತದೆ.

4.2.1.2 ಜೀವಂತ ಭಾಷೆಯ ಧ್ವನಿವ್ಯವಸ್ಥೆಯಲ್ಲಿ ಮನುಷ್ಯನು ಹೊರಡಿಸುವ ಉಚ್ಚಾರಣೆಯನ್ನೇ ಭಾಷಾವಿಜ್ಞಾನಿ ಅವಲಂಬಿಸಬೇಕಾಗುತ್ತದೆ. ಧ್ವನ್ಯುತ್ಪಾದನ ಶಾಸ್ತ್ರವೇ ಈ ದೃಷ್ಟಿಯಿಂದ ಅವನ ಅಧ್ಯಯನಕ್ಕೆ ಹೆಚ್ಚು ಪ್ರಯೋಜನಕಾರಿ. ಧ್ವನ್ಯುತ್ಪಾದನಾಶಾಸ್ತ್ರದಲ್ಲಿ ಧ್ವನ್ಯಂಗಗಳ ವಿವರಣೆ ಆಯಾ ಅಂಗಗಳ ಪರಸ್ಪರ ಸ್ಪರ್ಶದಿಂದ ಇಲ್ಲವೆ ಚಲನೆಯಿಂದ ಹೊರಡುವ ಧ್ವನಿಗಳು ಅವುಗಳ ಲಕ್ಷಣ ವಿವರಣೆ,

---

೧. ಕನ್ನಡ ಭಾಷೆಯನ್ನು ಭೌತಶಾಸ್ತ್ರೀಯವಾಗಿ ವಿಶ್ಲೇಷಿಸಿದ್ದಾರೆ ಬಿ. ಭವಾನಿಪುರೋಹಿತರ Acoustic Characteristics of Kannada 1982ರಲ್ಲಿ ಪ್ರಕಟವಾಗಿದೆ.

ಅವುಗಳ ವರ್ಗೀಕರಣ ಪ್ರತಿಯೊಂದು ಧ್ವನಿಯನ್ನು ಬರೆದಿಡುವುದಕ್ಕೆ ಅನುಕೂಲವಾಗುವಂತೆ ನಿರ್ದಿಷ್ಟ ಬರಹ ಸಂಕೇತವನ್ನು ಸೂಚಿಸುವುದು ಇವೆಲ್ಲ ಅಲ್ಲಿರುತ್ತವೆ. ಸಾಮಾನ್ಯವಾಗಿ ಅಂತಾರಾಷ್ಟ್ರೀಯ ಧ್ವನ್ಯಾಲೇಖದ ಸಂಕೇತಗಳನ್ನೇ ಇದಕ್ಕಾಗಿ ಬಳಸಲಾಗುತ್ತದೆ. ಧ್ವನ್ಯುತ್ಪಾದನಶಾಸ್ತ್ರವು ಪ್ರತಿಯೊಂದು ಧ್ವನಿಯನ್ನೂ ಅತಿಸೂಕ್ಷ್ಮವಾಗಿ ನಿರೀಕ್ಷಿಸಿ, ಪರಿಶೀಲಿಸಿ ಅವುಗಳನ್ನು ಗುರುತಿಸುತ್ತದೆ. ಇದರಿಂದಾಗಿ ಭಾಷೆಯಲ್ಲಿ ಬಳಕೆಗೊಳ್ಳುವ ಅತಿಸೂಕ್ಷ್ಮ ಧ್ವನಿ ವ್ಯತ್ಯಾಸವನ್ನೂ ಗುರುತಿಸಬಹುದಾಗಿದೆ.

ಉದಾಹರಣೆಗೆ ಕನ್ನಡದಲ್ಲಿ ಈ ಶಬ್ದಗಳನ್ನು ಗಮನಿಸಿ :

ಒಂದನೆಯ ಗುಂಪು : ಕಿಡಿ, ತಡ, ಕೊಡು, ಬಿಡೆ, ಮಾಡೋ,

ಎರಡನೆಯ ಗುಂಪು: ಡಿಕ್ಕಿ, ಡುಬ್ಬ, ಡೌಲು, ಡಾಬು, ಕಡ್ಡಿ, ಡೊಗ್ಗು, ಡಬ್ಬಿ

ಒಂದನೆಯ ಗುಂಪಿನ ಶಬ್ದಗಳಲ್ಲಿ ಬಂದಿರುವ 'ಡ್' ಧ್ವನಿಗೂ ಎರಡನೆಯ ಗುಂಪಿನ ಶಬ್ದಗಳಲ್ಲಿ ಬಂದಿರುವ 'ಡ್' ಧ್ವನಿಗೂ ಏನು ವ್ಯತ್ಯಾಸವಿದೆ ? ಎಂದು ಕೇಳಿದರೆ ಧ್ವನಿಶಾಸ್ತ್ರವನ್ನು ಅಭ್ಯಾಸ ಮಾಡದೇ ಇರುವವನು ಅದರಲ್ಲೇನೂ ವ್ಯತ್ಯಾಸವಿಲ್ಲವೆಂದು ಹೇಳಿಬಿಡುತ್ತಾನೆ. ಆದರೆ ಧ್ವನಿಶಾಸ್ತ್ರವನ್ನು ಅಭ್ಯಸಿಸಿದ ವಿದ್ಯಾರ್ಥಿ ಅವೆರಡೂ ಒಂದೇ ಧ್ವನಿ ಅಲ್ಲ. ಅವುಗಳಲ್ಲಿ ಭೇದವಿದೆಯೆಂದು ಹೇಳುತ್ತಾನೆ. ಅವನು ಮೊದಲನೆಯದನ್ನು ಘೋಷ ಮೂರ್ಧನ್ಯ ತಾಡಿತವೆಂದೂ ಎರಡನೆಯದನ್ನು ಘೋಷ ಮೂರ್ಧನ್ಯ ಸ್ಪರ್ಶವೆಂದೂ ಹೇಳುತ್ತಾನೆ. ಅವುಗಳನ್ನು ṛ ಹಾಗೂ ḍ ಎಂಬ ಧ್ವನ್ಯಾಲೇಖದ ಸಂಕೇತದಿಂದ ಸೂಚಿಸುತ್ತಾನೆ. ಅವೆರಡೂ ಬಳಕೆಗೊಳ್ಳುವ ಪರಿಸರವನ್ನು ವಿವರಿಸುತ್ತಾನೆ. ಈ ಎರಡು ಭಿನ್ನ ಧ್ವನಿಗಳಿಂದ ಅರ್ಥ ಬದಲಾಗುತ್ತದೆಯೋ ಇಲ್ಲವೋ ಎಂಬುದನ್ನು ಹೇಳುತ್ತಾನೆ. ಹೀಗೆ ಈ ಧ್ವನಿಗಳ ಸೂಕ್ಷ್ಮ ವಿವರಗಳನ್ನು ಧ್ವನಿಶಾಸ್ತ್ರದ ಶಿಕ್ಷಣವಿಲ್ಲದವನಿಗೆ ಹೇಳಲು ಸಾಧ್ಯವಿಲ್ಲ. ṛ ಹಾಗೂ ḍ ಇವೆರಡೂ ಅವನಿಗೆ ಒಂದೇ ಎನಿಸುತ್ತವೆ. ಇಂತಹ ಅಗಣಿತ ಸೂಕ್ಷ್ಮಗಳು ಭಾಷೆಯಲ್ಲಿ ಬಳಕೆಗೊಳ್ಳುತ್ತಿರುವುದರಿಂದ ಅವುಗಳನ್ನು ಅರಿಯಲು ಧ್ವನಿವಿಜ್ಞಾನ ಅತ್ಯವಶ್ಯವೆನಿಸುತ್ತದೆ.

## 4.3 ಅಂತಾರಾಷ್ಟ್ರೀಯ ಧ್ವನ್ಯಾಲೇಖ (International Phonetic Script)

ಮನುಷ್ಯನು ಹೊರಡಿಸುವ ಒಂದೊಂದು ಧ್ವನಿಗೂ ಒಂದೊಂದು ನಿರ್ದಿಷ್ಟ ಬರಹದ ಸಂಕೇತವನ್ನು ನೀಡಿ ಧ್ವನಿಶಾಸ್ತ್ರದಲ್ಲಿ ವಿವರಿಸಲಾಗುತ್ತದೆ. ಸಂಕೇತವು ಪ್ರತಿನಿಧಿಸುವ ಧ್ವನಿಗೂ ಸಂಕೇತಕ್ಕೂ ಹೆಚ್ಚಿನ ಮಟ್ಟಿಗೆ ಅನುರೂಪತೆ ಇರುತ್ತದೆ.

ಭಾಷೆಗಳು ಬೆಳೆಸಿಕೊಂಡುಬಂದ ಲಿಪಿಗೂ ಧ್ವನಿಲಿಪಿಗೂ ಅನೇಕ ವ್ಯತ್ಯಾಸಗಳಿವೆ. ಧ್ವನ್ಯಾಲೇಖದಲ್ಲಿ ಬರೆಯಲ್ಪಟ್ಟುದನ್ನು ಉಚ್ಚರಿಸಿದರೆ ಭಾಷೆಯಲ್ಲಿನ ನಿಜವಾದ ಉಚ್ಚಾರವೇ ಹೊರಡುತ್ತದೆ. ಆದರೆ ರೂಢಿಗತಲಿಪಿಯಲ್ಲಿ ಬರೆದದ್ದು ಎಷ್ಟೋ ಸಲ ಉಚ್ಚಾರಕ್ಕೆ ಅನುಗುಣವಾಗಿ ಇರುವುದಿಲ್ಲ. ಈ ಕೊರತೆಯನ್ನು ಧ್ವನ್ಯಾಲೇಖ ಪೂರೈಸುತ್ತದೆ.

ಉದಾಹರಣೆಗೆ :

| ರೂಢಿಗತಲಿಪಿಯಲ್ಲಿ | ಧ್ವನ್ಯಾಲೇಖನದಲ್ಲಿ |
|---|---|
| Keep | ki:p (ಕೀಪ್) |
| Through | thru [ಥ್ರು] |
| Colonel | kərnal [ಕರ್ನಲ್] |
| ಕಾಲು | ka:lu (ಕಾಲು) |
| ಬೇಡ | bəeda [ಬ್ಯಾಡ] |
| ಕರೆ [Call] | kare |
| ಕರಿ [Fry] | kəri |
| ಕಡಿ | kari |
| ಡಬ್ಬಿ | dabbi |

ಧ್ವನ್ಯಾಲೇಖ (IPS) ವನ್ನು ಅಕ್ಷರಾತ್ಮಕವಾಗಿ ಬರೆಯದೆ ಧ್ವನ್ಯಾತ್ಮಕವಾಗಿ ಬರೆಯಲಾಗುತ್ತದೆ. ಪ್ರತಿಯೊಂದು ಧ್ವನಿಸೂಕ್ಷ್ಮವನ್ನೂ ಗುರುತಿಸಲು ಸಂಕೇತಗಳನ್ನು ಅಳವಡಿಸಲಾಗಿರುತ್ತದೆ. ಉದಾ : ಕೊಡಲಿಯ ಕಾವು ಎಂಬುದನ್ನು IPS ದಲ್ಲಿ koraliya kā̃vu ಎಂದು ಬರೆಯಲಾಗುತ್ತವೆ. ಇಲ್ಲಿ 'ಕಾ' ದಲ್ಲಿ ಅನುನಾಸಿಕತ್ವದ ಉಚ್ಚಾರವಿದೆ. ಅದನ್ನು ರೂಢಿಗತ ಲಿಪಿಯಲ್ಲಿ ತೋರಿಸಲಾಗುವುದಿಲ್ಲವಾದ್ದರಿಂದ ಅದು ಕಾವು ಆಗಿದೆ. ಸಂದರ್ಭ ಗೊತ್ತಿಲ್ಲದಿದ್ದರೆ ಬರೆದದ್ದನ್ನು ಓದಿ ಅದು ಉಷ್ಣತೆ ಎಂಬ ಬೇರೊಂದು ಅರ್ಥವನ್ನೇ ಕೊಡುವ ಅಪಾಯವಿದೆ. ಇಂಥ ಅಪಾಯವನ್ನು IPS ತಪ್ಪಿಸುತ್ತದೆ. IPS ರೋಮನ್ ಲಿಪಿಯಲ್ಲಿ ಇದೆ. IPS ದಲ್ಲಿ ದೊರೆಯದ ಹೊಸ ಧ್ವನಿಗಳು ಯಾವುದೇ ಭಾಷೆಯಲ್ಲಿ ಒಂದು ವೇಳೆ ದೊರೆತರೆ ಬೇರೊಂದು ಸಂಕೇತವನ್ನು ರೋಮನ್ ಲಿಪಿಯಲ್ಲಿ ನೀಡಲಾಗುತ್ತದೆ. IPS ದಲ್ಲಿ ಬರೆಯುವುದನ್ನು ಧ್ವನ್ಯಾಲೇಖಿತ (Phonetic transcription) ಎನ್ನಬಹುದು.

ಧ್ವನ್ಯಾಲೇಖಿತಗೊಳಿಸುವಾಗ ಮುಖ್ಯವಾಗಿ ಗಮನಿಸಬೇಕಾದ ಮೂರು ಅಂಶಗಳೆಂದರೆ—

೧. ಧ್ವನಿಗಳನ್ನು [ ] ಈ ಕಂಸಗಳಲ್ಲಿ ಬರೆಯಬೇಕು.

೨. IPS ದ ಹೊರತಾಗಿ ಬೇರೆ ಸಂಕೇತಗಳನ್ನು ಬಳಸಿದ್ದರೆ ಮೊದಲೆ ಸೂಚಿಸಿರಬೇಕು.

೩. ಸ್ಥೂಲಧ್ವನ್ಯಾಲೇಖಿತವೇ (Broad transcription) ಅಥವಾ ಸೂಕ್ಷ್ಮ ಧ್ವನ್ಯಾಲೇಖಿತವೇ (Deep transcription)ಎಂಬುದನ್ನು ಸೂಚಿಸಬೇಕು. IPS ದಲ್ಲಿಯ ಧ್ವನಿ ಸಂಕೇಗಳನ್ನು ಕೋಷ್ಟಕಗಳಲ್ಲಿ ಕೊಡಲಾಗಿದೆ. (ನೋಡಿ ಕೋಷ್ಟಕ ೧ ಹಾಗೂ ೨).

ಹ್ರಸ್ವಸ್ವರ ಸಂಕೇತಗಳು :

ಕೋಷ್ಟಕ ೧

| | ಪೂರ್ವ | | ಮಧ್ಯ | | ಪಶ್ಚ | |
|---|---|---|---|---|---|---|
| | ಅವೃತ್ತ | ಸವೃತ್ತ | ಅವೃತ್ತ | ಸವೃತ್ತ | ಅವೃತ್ತ | ಸವೃತ್ತ |
| ಉನ್ನತ | i | ü | ḟ | u̇ | ï | u |
| ಅವನತೋನ್ನತ | ı | Ü | ı | U̇ | İ | U |
| ಉನ್ನತ ಮಧ್ಯ | e | ö | ė | ȯ | ë | o |
| ನಡುಮಧ್ಯ | E | ᴖ̈ | Ė(ə) | ᴖ̇ | Ë | ᴖ |
| ಅವನತ ಮಧ್ಯ | ɛ | ⊐̈ | ɛ̇ | ⊐ | ɛ̈ | ⊐ |
| ಉನ್ನತಾವನತ | æ | ẅ | æ̇ | w | æ̈ | w |
| ಅವನತ | a | ɐ̈ | ȧ | ɐ̇ | ä | a |

ಕೆಲವು ಮುಖ್ಯ ವ್ಯಂಜನ ಧ್ವನಿಸಂಕೇತಗಳು:

ಕೋಷ್ಟಕ ೨

I ಧ್ವನ್ಯುತ್ಪಾದಕಗಳು II ಧ್ವನ್ಯುತ್ಪಾದನ ಸ್ಥಾನಗಳು III ಧ್ವನ್ಯುತ್ಪಾದನ ರೀತಿ

| I → | ತುಟಿಗಳು | | ನಾಲಗೆಯ ತುದಿ | | | ನಾಲಗೆಯ ಮಧ್ಯ | ನಾಲಗೆಯ ಹಿಂಭಾಗ | ಗಲಕುಹರ |
|---|---|---|---|---|---|---|---|---|
| II → / III ↓ | ಉಭಯೋಷ್ಠ್ಯ | ದಂತೋಷ್ಠ್ಯ | ದಂತ್ಯ | ವರ್ತ್ಸ್ಯ | ಪರಿವೇಷ್ಟಿತ | ತಾಲವ್ಯ | ಕಂಠ್ಯ | ಗಲಕುಹರೀಯ |
| ಸ್ಪರ್ಶಗಳು | p b | p b | t d | t d | t d | | k g | |
| ಈಷತ್ ಸ್ಪರ್ಶಗಳು | | | | | | c i | | |
| ಘರ್ಷಗಳು | | f v | | s z | s | s | | h |
| ಅನುನಾಸಿಕಗಳು | | | n | n | n | n | n | |
| ಪಾರ್ಶ್ವಿಕಗಳು | | | | l | | | | |
| ಕಂಪಿತಗಳು | | | | r | r | | | |
| ಅರೆವ್ಯಂಜನಗಳು | | w | | | | y | | |

## 4.4 ಧ್ವನ್ಯಂಗಗಳು :

ಧ್ವನಿಪೆಟ್ಟಿಗೆಯೊಂದನ್ನು ಬಿಟ್ಟು ಬಹುಶಃ ಮನುಷ್ಯನ ಯಾವ ಅಂಗವೂ ಧ್ವನ್ಯುತ್ಪಾದನೆಗಾಗಿಯೇ ಇದೆ ಎಂದು ಹೇಳಲಾಗುವುದಿಲ್ಲ. ಶರೀರಕ್ಕೆ ಆಹಾರ ಸೇವನೆಗಾಗಿ ಉಸಿರಾಟಕ್ಕಾಗಿ ಮೂಲತಃ ಇರುವ ಅಂಗಗಳೇ ವೈವಿಧ್ಯಪೂರ್ಣವಾದ ಧ್ವನಿ ಉತ್ಪಾದನೆಗೆ ಕಾರಣವಾಗುತ್ತವೆ. ಆ ಧ್ವನ್ಯಂಗಗಳು ಹಾಗೂ ಅವುಗಳಿಂದ ಹೊರಡುವ ಧ್ವನಿಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ.

### 4.4.1 ತುಟಿಗಳು :

ಮೇಲ್ತುಟಿ ಹಾಗೂ ಕೆಳದುಟಿಗಳು ಎರಡೂ ಚಲಿಸುವುದರಿಂದ ಅವುಗಳ ಚಟುವಟಿಕೆಗಳು ನಮ್ಮ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸುತ್ತವೆ. ವ್ಯಂಜನ ಹಾಗೂ ಸ್ವರ ಎರಡೂ ಧ್ವನಿಗಳ ಹೊರಡುವಿಕೆಯಲ್ಲಿ ಇವು ಬಳಕೆಗೊಳ್ಳುತ್ತವೆ. ತುಟಿಗಳ ಸಹಾಯದಿಂದ ಹೊರಡುವ ಧ್ವನಿಗಳನ್ನು ಓಷ್ಠ್ಯಧ್ವನಿಗಳೆಂದು ಕರೆಯುತ್ತಾರೆ. ತುಟಿಗಳು ದುಂಡಾಗುವ (ಸವೃತ್ತ) ಇಲ್ಲವೆ ದುಂಡಗಾಗದೇ (ಅವೃತ್ತ) ಇರುವುದನ್ನು ಸ್ವರೋಚ್ಚಾರಣೆಯಲ್ಲಿ ಗಮನಕ್ಕೆ ತೆಗೆದುಕೊಳ್ಳಲಾಗುತ್ತದೆ. ತುಟಿಗಳು ಸ್ಥಿತಿಸ್ಥಾಪಕ ಗುಣದಿಂದ ಕೂಡಿರುವುದರಿಂದ ಧ್ವನ್ಯುತ್ಪಾದನೆಯಲ್ಲಿ ಇವು ಬಹಳ ಪ್ರಯೋಜನಕಾರಿಯಾಗಿವೆ. ಮೇಲಿನ ತುಟಿಗಿಂತ ಕೆಳಗಿನ ತುಟಿಯೇ ಹೆಚ್ಚು ಚಲನೆಗೆ ಒಳಪಡುತ್ತದೆ. ಆದ್ದರಿಂದ ಮೇಲ್ತುಟಿಯನ್ನು ಸ್ಥಾನವೆಂದೂ ಕೆಳಗಿನ ತುಟಿಯನ್ನು ಕರಣವೆಂದೂ ಪರಿಗಣಿಸುತ್ತಾರೆ.

#### 4.4.1.1 ಓಷ್ಠ್ಯ ಧ್ವನಿಗಳು :

ತುಟಿಗಳ ಕಾರಣವಾಗಿ ಹೊರಡುವ ಧ್ವನಿಗಳಲ್ಲಿ [ವ್ಯಂಜನಗಳಲ್ಲಿ] ಉಭಯೋಷ್ಠ್ಯ [ಎರಡೂ ತುಟಿಗಳಿಂದ ಹೊರಡುವ ಧ್ವನಿ] ದಂತೋಷ್ಠ್ಯ [ಕೆಳಗಿನ ತುಟಿಯು ಮೇಲಿನ ದಂತವನ್ನು ಸ್ಪರ್ಶಿಸಿ ಹೊರಡಿಸುವ ಧ್ವನಿ] ಎಂದು ಎರಡು ಬಗೆಗಳು. ಸ್ವರಗಳಲ್ಲಿ ಸವೃತ್ತ [ತುಟಿಗಳು ದುಂಡಾಗುವಿಕೆಯಿಂದ ಹೊರಡುವ ಧ್ವನಿ] ಅವೃತ್ತ [ತುಟಿಗಳು ದುಂಡಾಗದೆ ಹೊರಡುವ ಧ್ವನಿ] ಎಂದು ಎರಡು ಬಗೆಯಾಗಿ ವಿಂಗಡಿಸಲಾಗುತ್ತದೆ.

ಉಭಯೋಷ್ಠ್ಯ ಧ್ವನಿಗಳು : ಪ್, ಬ್, ಮ್,

ದಂತೋಷ್ಠ್ಯ ” : ಫ್, [f], ವ್, [v],

ಸವೃತ್ತ ” : ಉ, ಊ, ಒ, ಓ,

ಅವೃತ್ತ ” : ಇ, ಈ, ಎ, ಏ, ಆ್ಯ [æ] ಅ [a] ಎ [e]

ತುಟಿ ಹಾಗೂ ನಾಲಗೆಯನ್ನು ಬಿಟ್ಟು ಉಳಿದ ಯಾವ ಅಂಗವೂ ಸ್ವರಧ್ವನಿಗಳ ಹುಟ್ಟುವಿಕೆಗೆ ಕಾರಣವಾಗುವುದಿಲ್ಲ.

**4.4.2 ಹಲ್ಲುಗಳು :**

ಹಲ್ಲುಗಳಲ್ಲಿ ಮೇಲ್ಭಾಗದವುಗಳನ್ನು ಸ್ಥಾನವೆಂದೂ ಚಲಿಸುವ ಕೆಳಹಲ್ಲುಗಳನ್ನು ಕರಣವೆಂದೂ ಪರಿಗಣಿಸುತ್ತಾರೆ. ಮೇಲ್ಭಾಗದ ದಂತಗಳ ಮುಂದಿನ ಸುಮಾರು ೭-೮ ಹಲ್ಲುಗಳು ಮಾತ್ರ ಧ್ವನಿವೈವಿಧ್ಯಕ್ಕೆ ಕಾರಣವಾಗುತ್ತವೆ.

**4.42.1 ದಂತಧ್ವನಿಗಳು :**

ಕೆಳದುಟಿಯಾಗಲಿ, ನಾಲಗೆಯ ಮುಂಭಾಗವಾಗಲಿ ಈ ಮೇಲ್ದಂತಗಳಿಗೆ ಸ್ಪರ್ಶವಾಗಿ ಹೊರಡುವ ಧ್ವನಿಗಳನ್ನು ದಂತ್ಯಗಳೆಂದು ಹೆಸರಿಸುತ್ತಾರೆ. ತುಟಿ ಸ್ಪರ್ಶವಾದರೆ ದಂತೋಷ್ಠ್ಯ ಎನ್ನುತ್ತಾರೆ. ಧ್ವನಿಗಳು : ದಂತ್ಯ : ತ್ ದ್

ದಂತೋಷ್ಠ್ಯ : ಫ಼್ [f] ವ಼್ [v]

**4.4.3 ವರ್ತ್ಸ :**

ಮುಂಭಾಗದ ಮೇಲ್ದಂತಗಳ ಹಿಂದೆ ಹತ್ತಿಕೊಂಡಿರುವ ಒಳಭಾಗದಲ್ಲಿ ಉಬ್ಬಿದಂತಿರುವ ಬಿರುಸು ಭಾಗ ಅಂದರೆ ಮುಂಭಾಗದ ಮೇಲ್ದಂತಗಳ ಹಿಂದಿನ ವಸಡುಗಳ ಭಾಗವೇ ವರ್ತ್ಸ. ವರ್ತ್ಸವು ಚಲಿಸುವ ಭಾಗವಲ್ಲವಾದುದರಿಂದ ಅದು ಸ್ಥಾನವೆನಿಸುತ್ತದೆ. ವರ್ತ್ಸಕ್ಕೆ ನಾಲಗೆಯ ತುದಿಯ ಮುಂಭಾಗ ಮಾತ್ರ ಸ್ಪರ್ಶವಾಗಬಲ್ಲುದು. ನಾಲಗೆಯ ತುದಿ ವರ್ತ್ಸಕ್ಕೆ ತಗುಲಿ ಅಥವಾ ಸಮೀಪ ಬಂದು ಉಂಟಾಗುವ ಧ್ವನಿಯೇ ವರ್ತ್ಸ್ಯಧ್ವನಿ.

4.4.3.1 ವರ್ತ್ಸ್ಯ-ಧ್ವನಿಗಳು ; ತ್, ದ್, ಜ಼್ [z], ಲ್, ನ್, ರ್

**4.4.4 ತಾಲು :**

ವರ್ತ್ಸದ ಅನಂತರ ಗುಮ್ಮಟದ ಒಳಭಾಗದ ಪೊಳ್ಳಿನಾಕಾರದಲ್ಲಿ ಬರುವದೇ ಕಠಿಣತಾಲು. ಕಠಿಣತಾಲು ಮುಗಿದ ಮೇಲೆ ಗಂಟಲಿನೆಡೆಗೆ ನಾಲಗೆಯ ತುದಿಯನ್ನು ಹಚ್ಚಿ ಸರಿಸಿದರೆ ಮೃದುತಾಲುವಿನ ಅರಿವಾಗುತ್ತದೆ.

**4.4.4.1 ತಾಲವ್ಯ ಧ್ವನಿಗಳು :**

ನಾಲಗೆಯ ಭಾಗವು ತಾಲುವಿಗೆ ಸ್ಪರ್ಶವಾಗಿ ಹೊರಡುವ ಧ್ವನಿಗಳನ್ನು ತಾಲವ್ಯ ಧ್ವನಿಗಳೆಂದು ಹೆಸರಿಸಿರುವರು. ನಾಲಗೆಯ ತುದಿ ತಾಲುವಿಗೆ ಸ್ಪರ್ಶವಾಗ

# ಧ್ವನ್ಯಂಗಗಳು




೧. ಮೇಲ್ದುಟಿ ೨. ಕೆಳದುಟಿ ೩. ಮೇಲ್ದಂತೆ ೪. ಕೆಳದಂತ ೫. ಜಿಹ್ವಾಗ್ರ
೬. ಜಿಹ್ವಾಮಧ್ಯ ೭. ಪಶ್ಚಜಿಹ್ವೆ ೮. ವರ್ತ್ಸ ೯. ಕಠಿನತಾಲು
೧೦. ಮೃದುತಾಲು ೧೧. ಕಿರಿನಾಲಿಗೆ ೧೨. ಗಲಕುಹರ
೧೩. ನಾಸಾಕುಹರ ೧೪. ಧ್ವನಿಪೆಟ್ಟಿಗೆ

ಬೇಕಾದರೆ ಅದು ಪರಿವೇಷ್ಠಿತಗೊಳ್ಳುತ್ತದೆ. (ಬಿಲ್ಲಿನಂತೆ ಬಾಗುತ್ತದೆ.) ಹೀಗೆ ನಾಲಿಗೆಯ ಪರಿವೇಷ್ಟನದಿಂದ ಉಂಟಾಗುವ ಧ್ವನಿಗಳಿಗೆ ಪರಿವೇಷ್ಠಿತ ಅಥವಾ ಮೂರ್ಧನ್ಯಧ್ವನಿಗಳೆಂದು ಕರೆಯುತ್ತಾರೆ. ನಾಲಗೆಯ ತುದಿಯನ್ನು ಬಿಟ್ಟು ಇತರ ಭಾಗ ತಾಲವ್ಯವೆಡೆಗೆ ಉಬ್ಬುವುದರಿಂದ ಅಥವಾ ತಾಲುವುದರಿಂದ ಉಂಟಾಗುವ ಧ್ವನಿಗಳನ್ನೂ ತಾಲವ್ಯವೆನ್ನುತ್ತಾರೆ. ತಾಲು ಸ್ಥಾನವಾಗಿ ನಾಲಗೆಯ ಬೇರೆ ಬೇರೆ ಭಾಗಗಳು ಚಲಿಸುವುದರಿಂದ ಉಂಟಾಗುವ ಧ್ವನಿಗಳು :

ನಾಲಗೆಯ ತುದಿ→ಟ್, ಡ್, ಣ್, ಳ್, ಷ್, ಥ್, ರ್, (ಪರಿವೇಷ್ಠಿತ)
ತಾಲು>
ನಾಲಗೆಯ ಮುಂಭಾಗ→ಚ್, ಜ್, ಶ್, ಞ, ಯ್ (ತಾಲವ್ಯ)

### 4.4.5 ಕಂಠ :

ಮೃದು ತಾಲುವಿನ ಅನಂತರ ಅದಕ್ಕೆ ಹತ್ತಿ ಕಿರುನಾಲಗೆಯಿದೆ. ಆಮೇಲೆ ಅಲ್ಲಿ ಅನ್ನನಾಳ ಶ್ವಾಸನಾಳಗಳು ಬಂದು ಕೂಡುವ ಪೊಳ್ಳುಜಾಗವಿದೆ. ಸ್ವಲ್ಪ ಕೆಳಭಾಗಕ್ಕೆ ಗಲಕುಹರವಿದೆ. ಅಲ್ಲಿಂದ ಒಂದುನಾಳ ಅನ್ನವನ್ನು ಸಾಗಿಸಲು ಜಠರದೆಡೆಗೆ ಇನ್ನೊಂದು ಶ್ವಾಸವನ್ನು ಸಾಗಿಸಲು ಪುಪ್ಪುಸದೆಡೆಗೆ ಹೋಗುತ್ತವೆ. ಕಿರುನಾಲಗೆಯಿಂದ ಗಲಕುಹರದ ಭಾಗವೆಲ್ಲ ಕಂಠದಲ್ಲಿ ಒಳಗೊಳ್ಳುತ್ತದೆ.

#### 4.4.5.1 ಕಂಠ್ಯ ಧ್ವನಿಗಳು :

ನಾಲಗೆಯ ಹಿಂಭಾಗ ಕಿರುನಾಲಗೆಯೆಡೆಗೆ ವಾಲಿದಾಗ ಉಂಟಾಗುವ ಧ್ವನಿಗಳನ್ನು ಕಂಠ್ಯಧ್ವನಿಗಳೆಂದು ಗುರುತಿಸುವರು.

ಕಂಠ್ಯಧ್ವನಿಗಳು : ಕ್, ಗ್, ಙ್
ಗಲಕುಹರಧ್ವನಿ ಅಥವಾ ಗಲೀಯಧ್ವನಿ: ಹ್

### 4.5 ಇತರ ಧ್ವನ್ಯಂಗಗಳು :

**4.5.1 ನಾಲಗೆ :** ಸ್ಥಿತಿಸ್ಥಾಪಕಗುಣವುಳ್ಳ ಹೇಗೆ ಬೇಕೋ ಹಾಗೆ ತನ್ನ ಮೈಯ ಬಹುಭಾಗವನ್ನು ಹೊರಳಿಸಬಲ್ಲ ನಾಲಗೆ ಧ್ವನಿವೈವಿಧ್ಯಕ್ಕೆ ತೀರ ಮಹತ್ವಪೂರ್ಣ ಅಂಗವಾಗಿದೆ. ಸದಾ ಹಲ್ಲುಗಳ ಮಧ್ಯ ಇದ್ದೂ ಅವುಗಳಿಂದ ಕಚ್ಚಿಸಿಕೊಳ್ಳದೆ ಅತ್ಯಂತ ಚಾಣಾಕ್ಷತೆಯಿಂದ ತನ್ನ ಕಾರ್ಯ ನಿರ್ವಹಿಸುತ್ತದೆ. ಈಗಾಗಲೇ ನಾವು

ಗಮನಿಸಿದಂತೆ ದಂತ, ವರ್ತ್ಸ್ಯ, ತಾಲು ಇವುಗಳಿಗೆ ಸ್ಪರ್ಶಿಸಿ ವಿವಿಧವ್ಯಂಜನ ಧ್ವನಿಗಳನ್ನು ಹುಟ್ಟಿಸುತ್ತದೆ. ನಾಲಗೆ ಸ್ವಲ್ಪ ಉಬ್ಬು, ತಗ್ಗು, ಹಿಂದೆ, ಮುಂದೆ ಚಾಚುವುದರಿಂದ ಸ್ವರ ಧ್ವನಿಗಳಲ್ಲಿ ವೈವಿಧ್ಯ ಉಂಟಾಗುತ್ತದೆ. ಇಂತಹ ಚಲನೆಯಿಂದ ಏಳು ಬಗೆಯ ಸ್ವರಧ್ವನಿಗಳ ಜನನಕ್ಕೆ ನಾಲಗೆ ಕಾರಣವಾಗುತ್ತದೆ. ನಾಲಗೆಯ ಸಹಾಯದಿಂದ ಹೊರಡುವ ಒಟ್ಟು ಮುಖ್ಯ ಧ್ವನಿಗಳು ಹೀಗಿವೆ :

**ಸ್ವರಗಳು :** ಇ, ಈ, ಉ, ಊ [ಉನ್ನತ] ; ಇ [i] [ಅವನತೋನ್ನತ]. ಎ, ಏ, ಒ, ಓ, [ಉನ್ನತ ಮಧ್ಯ] ; ಅ [ə] [ನಡುಮಧ್ಯ] ; ಒ [ɔ] ಆ್ಯ [ɛ] [ಅವನತ ಮಧ್ಯ] ; ಆ್ಯ [ae] ; [ಉನ್ನತಾವನತ] ; ಅ, ಆ [ಅವನತ],

**ವ್ಯಂಜನಗಳು :**

ಜಿಹ್ವಾಗ್ರೀಯ
- ತ್, ದ್, ಅ, ನ್ [ದಂತ್ಯ]
- ತ್, ದ್, ಸ್, ನ್, ಲ್ [ವರ್ತ್ಸ್ಯ]
- ಟ್, ಡ್, ಶ್, ಷ್, ಳ್, ಡ್ [ಪರಿವೇಷ್ಟಿತ]

ಜಿಹ್ವಾಮುಖೀಯ **:** ಚ್, ಜ್, ಞ್ [ತಾಲವ್ಯ]
ಜಿಹ್ವಾಮೂಲೀಯ **:** ಕ್, ಗ್, ಙ್ [ಕಂಠ್ಯ]

**ಈ** ರೀತಿ ಮನುಷ್ಯ ಹೊರಡಿಸುವ ಪ್ರಮುಖ ಧ್ವನಿಗಳೆಲ್ಲ ನಾಲಗೆಯ ಸಹಾಯವನ್ನೆ ಅವಲಂಬಿಸಿರುವುದನ್ನಿಲ್ಲಿ ಗಮನಿಸಬಹುದು.

**4.5.2. ಧ್ವನಿಪೆಟ್ಟಿಗೆ :** ಧ್ವನಿಯನ್ನು ಹೊರಡಿಸುವ ಮುಖ್ಯ ಕೇಂದ್ರವೇ ಧ್ವನಿಪೆಟ್ಟಿಗೆ. ಧ್ವನಿಪೆಟ್ಟಿಗೆ ಶ್ವಾಸನಾಳದ ದ್ವಾರದಲ್ಲಿ ಮೃದು ಅಸ್ಥಿಯಿಂದ ನಿರ್ಮಿಸಲ್ಪಟ್ಟಿದೆ. ಪುಪ್ಪುಸದಿಂದ ಹೊರಟ ಹವೆ ಶ್ವಾಸನಾಳದ ಮೂಲಕ ಹಾಯ್ದು ಹೋಗುವಾಗ ಧ್ವನಿಪೆಟ್ಟಿಗೆಯಲ್ಲಿ ಹಾಯುತ್ತದೆ. ಆದರೆ ಸಹಜವಾಗಿ ಹವೆ ಹಾಯ್ದಾಗಲೊಮ್ಮೆ ಧ್ವನಿ ಹೊರಡುವುದಿಲ್ಲ. ಪೆಟ್ಟಿಗೆಯಲ್ಲಿರುವ ತೆಳುವಾದ ಎರಡು ಪಟಲಗಳ ಕಂಪನದಿಂದ ಧ್ವನಿ ಉತ್ಪನ್ನವಾಗುತ್ತದೆ. ಉಸಿರಾಟದ ಮಾರ್ಗಕ್ಕೆ ಯಾವ ತೊಂದರೆಯನ್ನೂ ಉಂಟು ಮಾಡದೆ ಧ್ವನಿಪಟಲಗಳು ಹಿಗ್ಗಿ ಕುಗ್ಗಿ ಧ್ವನಿಗಳನ್ನು ಹುಟ್ಟಿಸಬಹುದು. ಧ್ವನಿಗಳಲ್ಲಿ ಘೋಷ ಹಾಗೂ ಅಘೋಷ ಎಂಬ ಎರಡು ಮುಖ್ಯ ಭೇದಗಳು ಧ್ವನಿಪಟಲಗಳ ಕಂಪನದಿಂದಲೆ ಉಂಟಾಗುತ್ತವೆ. ಗಲಕುಹರೀಯ ಸ್ಪರ್ಶ 'ಹ್' ಧ್ವನಿ ಮೂಲತಃ ಧ್ವನಿ ಪಟಲಗಳ ಕಂಪನದಿಂದಲೇ ಹುಟ್ಟುತ್ತದೆ. ಧ್ವನಿಪೆಟ್ಟಿಗೆಯ ಆಕಾರ ಹೀಗಿರುತ್ತದೆ :




ಧ್ವನಿಪೆಟ್ಟಿಗೆಯಲ್ಲಿಯ ಪಟಲಗಳ ತೆಳುವಿನ ಪ್ರಮಾಣವನ್ನು ಅನುಸರಿಸಿ ಪ್ರತಿಯೊಬ್ಬ ವ್ಯಕ್ತಿಯ ಧ್ವನಿ ಬದಲಾಗುತ್ತದೆ. ಹೆಣ್ಣು ಮಕ್ಕಳ ಧ್ವನಿ ಇಂಪಾಗಿರುವದಕ್ಕೆ ಸಣ್ಣದಾಗಿ ಚೀರುಧ್ವನಿಯಾಗಿರುವುದಕ್ಕೆ ಕಾರಣವೆಂದರೆ ಈ ಪಟಲಗಳು ಅವರಲ್ಲಿ ತೀರ ತೆಳುವಾಗಿರುವುದಾಗಿದೆ. ಗಂಡಸರ ಧ್ವನಿ ಗಡಸಾಗಿರುವುದಕ್ಕೆ ಆ ಪಟಲಗಳು ದಪ್ಪವಾಗಿರುವುದೇ ಕಾರಣವಾಗಿದೆ. ಧ್ವನಿಪಟಲಗಳ ಮುಚ್ಚುವಿಕೆ, ತೆರೆಯುವಿಕೆಯಿಂದ ಗಲಕುಹರೀಯ ಅಥವಾ ಕಾಕಲ್ಯ ಸ್ಪರ್ಶ ಧ್ವನಿ ಹುಟ್ಟುತ್ತದೆ. ಪಟಲಗಳ ಈ ಚಲನೆಯೊಂದಿಗೆ ಗಲಕುಹರದಲ್ಲಿ ಅಂಗಗಳ ಚಲನೆಯೂ ಸ್ವಲ್ಪಮಟ್ಟಿಗೆ ಈ ಧ್ವನಿಗಳ ಹುಟ್ಟಿಗೆ ಕಾರಣವಾಗುತ್ತದೆ. ಘರ್ಷಧ್ವನಿಗಳಲ್ಲಿ, ಘೋಷಧ್ವನಿಗಳಲ್ಲಿ, ಸ್ವರೋಚ್ಚಾರಣೆಯಲ್ಲಿ ಧ್ವನಿಪಟಲಗಳ ಕಂಪನ ಹೆಚ್ಚು ಮಹತ್ವದ್ದಾಗಿದೆ. ಧ್ವನಿಪಟಲಗಳಲ್ಲಿ ಹವೆಯ ಸ್ಪರ್ಶವಿಲ್ಲದೆ ಮುಚ್ಚುವಿಕೆಯಿಂದ ಆ ಮೇಲೆ ಒಮ್ಮೆಲೇ ತೆರೆಯುವುದರಿಂದ ಒಂದು ವಿಶಿಷ್ಟ ಧ್ವನಿ ಹುಟ್ಟುತ್ತದೆ. ಅದನ್ನು ಇಂಗ್ಲೀಷಿನಲ್ಲಿ ಕ್ಯಾಚ್ ಧ್ವನಿ ಎನ್ನುತ್ತಾರೆ. ಒಂದು ಅಕ್ಷರವನ್ನು ಉಚ್ಚರಿಸಿ ಸ್ವಲ್ಪ ತಡೆದಂತೆ ಮಾಡಿ ಆಮೇಲೆ ತಕ್ಷಣ ಮತ್ತೊಂದನ್ನು ಪೂರ್ಣ ಉಚ್ಚರಿಸುವ ಸಮಯದಲ್ಲಿ ಆ ಎರಡೂ ಉಚ್ಚಾರಗಳ ಮಧ್ಯ ಈ ಕ್ಯಾಚ್ ಧ್ವನಿ ಉಚ್ಚರಿಸಲ್ಪಡುತ್ತದೆ. ಉದಾಹರಣೆಗೆ –ಕ ? ಕಾ, ಕಿ ? ಕಿ, ಅ ? ಆ, ಇ ? ಈ ಉಚ್ಚಾರಗಳಲ್ಲಿ ? ಈ ಚಿಹ್ನೆ ಆ ಧ್ವನಿಯನ್ನು ಸೂಚಿಸುತ್ತದೆ. ಬಾಲಕರಿಗೆ ವರ್ಣಮಾಲೆಯನ್ನು ಕಲಿಸುವಾಗ ಕೆಲವು ಶಿಕ್ಷಕರು ಈ ಮಧ್ಯದ ಕ್ಯಾಚನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾರೆ. ಆದರೆ ಈ ಕ್ಯಾಚ್ ಧ್ವನಿ ಉಚ್ಚರಿಸುವ ರೂಢಿ ಇಲ್ಲದವರಿಗೆ ಅದರ ಕಲ್ಪನೆ ಬರುವದಿಲ್ಲ.

### 4.5.3 ನಾಸಾಕುಹರ :

ಧ್ವನಿಪೆಟ್ಟಿಗೆ, ಗಲಕುಹರಗಳನ್ನು ದಾಟಿ ಹವೆಯು ಬಾಯಿಯ ಮೂಲಕ ಹೊರಗೆ ಬರದೆ ನಾಸಿಕ ಮಾರ್ಗವಾಗಿ ಬಂದರೆ (ಮ್), (ನ್), (ಣ್), (ಙ್), (ಞ್) ಮುಂತಾದ ನಾಸಿಕ ಧ್ವನಿಗಳು ಹುಟ್ಟುತ್ತವೆ. ಎರಡೂ ತುಟಿಗಳು ಆಲಿಂಗನವಾಗಿ ಹವೆ ನಾಸಾಕುಹರ ಮಾರ್ಗದಲ್ಲಿ ಹಾಯುವಂತಾದರೆ (ಮ್) ಧ್ವನಿ ಉತ್ಪನ್ನ ವಾಗುತ್ತದೆ. ನಾಸಾಕುಹರವು ಸ್ಥಾನಕರಣಗಳಂತೆ ನೇರವಾಗಿ ಧ್ವನ್ಯುತ್ಪಾದನೆಯಲ್ಲಿ ಭಾಗವಹಿಸುವುದಿಲ್ಲವಾದರೂ ನಾಸಾಕುಹರ ಮಾರ್ಗವಾಗಿ ಹವೆ ಬರುವುದರಿಂದಲೆ ವಿಶಿಷ್ಟ ಧ್ವನಿಗಳ ನಿರ್ಮಾಣಕ್ಕೆ ಕಾರಣವಾಗುವುದರಿಂದ ಇದೂ ಮಹತ್ವವನ್ನು ಪಡೆದಿದೆ.

### 4.5.4 ಪುಪ್ಪುಸಗಳು :

ಪುಪ್ಪುಸಗಳು ತಮ್ಮಲ್ಲಿ ತುಂಬಿದ ಹವೆಯನ್ನು ಶ್ವಾಸನಾಳದ ಮೂಲಕ ಹೊರಗೆ ದೂಡುತ್ತವೆ. ಹಾಗೆ ಹೊರಗೆ ಬರುವ ಹವೆಯೇ ಧ್ವನಿಪೆಟ್ಟಿಗೆಯಲ್ಲಿ ಹಾಯ್ದು ಹೊರಗೆ ಬರುವಾಗ ಸ್ಥಾನಕರಣಗಳ ಚಲನೆಯಿಂದ ವಿವಿಧ ಬಗೆಯ ಧ್ವನಿ ಗಳು ಉತ್ಪನ್ನವಾಗುತ್ತವೆ. ಹವೆಯ ಚಲನೆಯನ್ನು ದೇಹದಲ್ಲಿ ನಿಯಂತ್ರಿಸುವ ಪುಪ್ಪುಸಗಳೂ ಒಂದು ಬಗೆಯಲ್ಲಿ ಧ್ವನ್ಯುತ್ಪಾದನೆಯ ಮೂಲ ಆಧಾರವಾಗಿ ನಿಂತಿವೆ.

### 4.6 ಸ್ಥಾನಗಳು, ಕರಣಗಳು ಹಾಗೂ ಪ್ರಯತ್ನ :

ಧ್ವನ್ಯುತ್ಪಾದನೆಯ ಕಾರ್ಯದಲ್ಲಿ ಭಾಗವಹಿಸುವ ಧ್ವನ್ಯಂಗಗಳಲ್ಲಿ ಮೇಲ್ಭಾಗದ ಅಂಗಗಳು ಸ್ಥಿರವಾಗಿಯೂ ಕೆಳಭಾಗದ ಅಂಗಗಳು ಚಲಿಸುವಂತಹವೂ ಆಗಿವೆ. ಹೀಗೆ ಚಲಿಸಲು ಸಮರ್ಥವಾಗಿರುವ ಧ್ವನ್ಯಂಗಗಳಿಗೆ ಕರಣಗಳು ಎಂದು ಕರೆಯುತ್ತಾರೆ. ಕರಣಗಳಲ್ಲಿ ಕೆಳದುಟಿ, ಕೆಳದಂತಗಳು, ನಾಲಗೆ ಇವು ಪರಿಗಣಿತವಾಗುತ್ತವೆ. ಸ್ಥಾನಗಳಲ್ಲಿ ಮೇಲ್ದುಟಿ, ಮೇಲಿನ ದಂತಗಳು, ವರ್ತ್ಸ, ತಾಲು, ಪರಿಗಣಿತವಾಗುತ್ತವೆ. ಕರಣಗಳೊಂದಿಗೆ ಸಂಪರ್ಕ ಉಂಟಾಗದ ಇತರ ಸ್ಥಾನಗಳೆಂದರೆ ಗಲಕುಹರ, ನಾಸಾಕುಹರಗಳು.

ಪುಪ್ಪುಸದಲ್ಲಿಂದ ಹೊರಟ ಹವೆಯು ಸ್ಥಾನಕರಣಗಳ ಚಟುವಟಿಕೆಗಳ ಕಾರಣ ವಾಗಿ ವಿವಿಧ ಧ್ವನಿಗಳ ಹುಟ್ಟುವಿಕೆಗೆ ಕಾರಣವಾಗುತ್ತದೆ. ಉದಾಹರಣೆಗೆ :

ಎರಡೂ ತುಟಿಗಳು ಪರಸ್ಪರ ಒಂದು ಕ್ಷಣ ಕೂಡಿ ಹವೆಯನ್ನು ತಡೆಹಿಡಿದು ಒಮ್ಮೆಲೆ ಬಿಟ್ಟರೆ 'ಪ್ ಅಥವಾ ಬ್' ಎಂಬ ಧ್ವನಿ ಉತ್ಪನ್ನವಾಗುತ್ತದೆ. ಆದರೆ ಕೇವಲ ಇದಿಷ್ಟೇ ಧ್ವನಿ ಉತ್ಪಾದನೆಯಲ್ಲಿ ಮುಖ್ಯವಲ್ಲ. ಎರಡು ತುಟಿಗಳನ್ನು ಸೇರಿಸಿ ಹವೆಯನ್ನು ಒಮ್ಮೆಲೆ ಬಿಟ್ಟಾಗ ಧ್ವನಿ ಹುಟ್ಟಲೇಬೇಕೆಂಬ ನಿಯಮವಿಲ್ಲ, ಇದರಿಂದ ನಮಗೆ ಸ್ಪಷ್ಟವಾಗುವ ವಿಷಯವೆಂದರೆ ಕೇವಲ ಧ್ವನ್ಯಂಗಗಳನ್ನು ಬಳಸಿದರೆ ಸಹಜವಾಗಿ ಧ್ವನಿ ಹುಟ್ಟುತ್ತದೆನ್ನಲುಬಾರದು ಎಂಬುದು. ಇಲ್ಲಿ ಧ್ವನ್ಯುತ್ಪಾದನೆಗೆ ಇನ್ನೊಂದು ಪ್ರಮುಖ ಅಂಶವೂ ಕಾರಣವಾಗುತ್ತದೆ. ಅದೆಂದರೆ—ಮನುಷ್ಯನ ಸ್ವಪ್ರಯತ್ನ. ಇದನ್ನೇ ಧ್ವನ್ಯುತ್ಪಾದನಾರೀತಿ ಅಥವಾ ಉಚ್ಚಾರಣಾ ರೀತಿ ಎಂದೂ ಕರೆಯುತ್ತಾರೆ. ಮನಸ್ಸಿನಲ್ಲಿ ಇಂಥ ಧ್ವನಿಯನ್ನು ಹುಟ್ಟಿಸಬೇಕೆಂದು ನಿರ್ಧರಿಸಿ ಪ್ರಯತ್ನಪೂರ್ವಕವಾಗಿ ಧ್ವನ್ಯಂಗಗಳನ್ನು ಬಳಸಿದಾಗ ಮಾತ್ರ ಧ್ವನಿ ಹುಟ್ಟುತ್ತದೆ. ಈ ಸ್ವಪ್ರಯತ್ನವಿಲ್ಲದೆ ಕೇವಲ ತುಟಿ ಇತ್ಯಾದಿ ಧ್ವನ್ಯಂಗಗಳನ್ನು ಪಿಟಿಪಿಟಿ ಮಾಡಿದರೆ ನಮಗೆ ಬೇಕಾದ ಧ್ವನಿ ಹುಟ್ಟುವುದಿಲ್ಲ. ಆದ್ದರಿಂದ ಸ್ಥಾನ, ಕರಣಗಳೊಂದಿಗೆ ಈ ಸ್ವಪ್ರಯತ್ನವೂ ಧ್ವನಿಯ ಉತ್ಪಾದನೆಗೆ ಅತಿ ಅವಶ್ಯವಾಗಿದೆ. ಈ ಮೂರು ಅಂಶಗಳ ಒಟ್ಟು ಪ್ರಯತ್ನದಿಂದಲೇ ಧ್ವನಿಗೆ ಸ್ವರೂಪ ಬರುತ್ತದೆ.

## 4.7 ಧ್ವನಿಗಳ ವರ್ಗೀಕರಣ ಹಾಗೂ ವಿವರಣೆ :

ಪರಂಪರಾಗತ ವ್ಯಾಕರಣಗಳಲ್ಲಿ ಸಾಮಾನ್ಯವಾಗಿ ವರ್ಣಗಳನ್ನು ವ್ಯಂಜನಗಳು, ಸ್ವರಗಳು ಎಂಬುವಾಗಿಯೂ, ವ್ಯಂಜನಗಳಲ್ಲಿ ವರ್ಗೀಯ, ಅವರ್ಗೀಯವೆಂದು, ಸ್ವರಗಳನ್ನು ಹ್ರಸ್ವ, ದೀರ್ಘವೆಂದು ಸ್ಥೂಲವಾಗಿ ವರ್ಗೀಕರಿಸಲಾಗುತ್ತದೆ. ಕನ್ನಡ ವರ್ಣ ವ್ಯವಸ್ಥೆ ಅಕ್ಷರಾತ್ಮಕವಾಗಿರುವುದರಿಂದ ಕ, ಗ, ಚ, ಜ.... ಇತ್ಯಾದಿಯಾಗಿ ವ್ಯಂಜನಗಳನ್ನು ಸೂಚಿಸುತ್ತಾರೆ. ಆದರೆ 'ಕ' ವರ್ಣದಲ್ಲಿ ಕ್+ಅ ಹೀಗೆ ಸ್ವರವೂ ವ್ಯಂಜನವೂ ಸೇರಿರುತ್ತದೆ. ಆದ್ದರಿಂದ ಒಂದು ವ್ಯಂಜನ, ಒಂದು ಸ್ವರ ಹೀಗೆ ಎರಡು ಧ್ವನಿಗಳು ಸೇರಿ ಇಲ್ಲಿ ಒಂದು ಅಕ್ಷರವಾಗಿರುವುದನ್ನು ಗಮನಿಸಬೇಕು. ವ್ಯಂಜನಗಳನ್ನು ಸೂಚಿಸಬೇಕಾದರೆ ಕೇವಲ ಸ್ವರರಹಿತವಾದವುಗಳನ್ನು ಪ್ರತ್ಯೇಕವಾಗಿ ಸೂಚಿಸಬೇಕಾಗುತ್ತದೆ.

### 4.7.1 ವ್ಯಂಜನಗಳು ಹಾಗೂ ಸ್ವರಗಳು :

ಪ್ರಾಚೀನ ಸಂಸ್ಕೃತ ವ್ಯಾಕರಣಗಳಲ್ಲಿ ತಕ್ಕ ಮಟ್ಟಿಗೆ ವ್ಯಂಜನ ಹಾಗೂ ಸ್ವರಗಳ ಸ್ವರೂಪವನ್ನು ವಿವರಿಸಲಾಗಿದೆ. ವ್ಯಂಜನಗಳನ್ನು ಸ್ವರದ ಸಹಾಯ

ವಿಲ್ಲದೆ ಉಚ್ಚರಿಸಲಾಗದು ಎಂದು ಪತಂಜಲಿ ಹೇಳಿದರೆ, ನಾರದ ಶಿಕ್ಷಾದಲ್ಲಿ- ವ್ಯಂಜನಗಳ ಮಣಿಹಾರದಲ್ಲಿರುವ ದಾರವೆಂದರೆ ಸ್ವರ, ಸ್ವರದ ಬೆಳಕಿನಲ್ಲಿ ವ್ಯಂಜನ ಗಳೆಂಬ ವಸ್ತು ಕಾಣುತ್ತವೆ-ಎನ್ನುತ್ತಾನೆ. 'ಸ್ವಯಂ ರಾಜಂತೆ ಸ್ವರಾ, ಅನ್ವಗ್ಭವತಿ ವ್ಯಂಜನಂ ಇತಿ' ಎನ್ನುವಲ್ಲಿ ಸ್ವರಗಳಿಗಿರುವ ಪ್ರಾಮುಖ್ಯ ವ್ಯಕ್ತವಾಗುತ್ತದೆ. ಸ್ವ+ರ=ಸ್ವ—ಎಂದರೆ ಸ್ವತಃ, ರ—ಎಂದರೆ ಆಳುವ ಎಂಬರ್ಥವೆಂದು ಹೇಳುತ್ತಾರೆ. ಸ್ವರ ಚಕ್ರವರ್ತಿ ಇದ್ದಂತೆ, ವ್ಯಂಜನ ದುರ್ಬಲ ಅರಸನಂತೆ. ದುರ್ಬಲ ರಾಜ ತನ್ನ ಸರ್ವಸ್ವವನ್ನು ಚಕ್ರವರ್ತಿಗೆ ನೀಡಿ ತಾನು ಕಾಣಿಸಿಕೊಳ್ಳುತ್ತಾನೆ. 'ದುರ್ಬಲಸ್ಯ ಯಥಾ ರಾಷ್ಟ್ರಂ ಹರತೇ ಬಲವಾನ್ ನೃಪಃ ದುರ್ಬಲಂ ವ್ಯಂಜನಂ ತದ್‌ವತ್ ಹರತೆ ಬಲವಾನ್ ಸ್ವರಃ 'ಸ್ವಯಂ ವಾಜಂತೇ ಸ್ವರಃ' ಪತಂಜಲಿಯು ವ್ಯಂಜನಗಳೆಂಬ ಮಣಿಗಳನ್ನು ಸ್ವರಗಳೆಂಬ ಸೂತ್ರದಲ್ಲಿ ಪೋಣಿಸಲಾಗುತ್ತದೆ ಎನ್ನುತ್ತಾನೆ. ಹೀಗೆ ಪ್ರಾಚೀನರು ವ್ಯಂಜನಗಳನ್ನು ಅಧೀನ ಧ್ವನಿಗಳೆಂದೂ ಸ್ವರಗಳು ಸ್ವತಂತ್ರವೆಂದೂ ಅಭಿಪ್ರಾಯಪಡುತ್ತಾರೆ.

ಆಧುನಿಕರ ಮೇರೆಗೆ, ಪುಪ್ಪುಸದಿಂದ ಹೊರಡುವ ಹವೆಗೆ ಆಸ್ಯದಲ್ಲಿ ಸ್ಥಾನಕರಣಗಳ ಸಂಪರ್ಕದಿಂದಾಗಿ ತಡೆಯುಂಟಾಗಿ ಹುಟ್ಟುವ ಧ್ವನಿಗಳೇ ವ್ಯಂಜನ ಗಳು. ಯಾವ ತಡೆಯಿಲ್ಲದೆ ಹುಟ್ಟುವ ಧ್ವನಿಗಳು ಸ್ವರಗಳು.

ಆಧುನಿಕ ಭಾಷಾ ವಿಜ್ಞಾನದ ಮೇರೆಗೆ ಉಚ್ಚಾರಣಾ ರೀತಿ ಇಲ್ಲವೆ ಸ್ವಪ್ರಯತ್ನ ವನ್ನು ಅನುಸರಿಸಿ ವ್ಯಂಜನ ಧ್ವನಿಗಳನ್ನು ಈ ಕೆಳಗಿನಂತೆ ಎಂಟು ಬಗೆಯಾಗಿ ವರ್ಗೀ ಕರಿಸಲಾಗುತ್ತದೆ.

೧. ಸ್ಪರ್ಶ ೨. ಘರ್ಷ ೩. ಈಷತ್ ಸ್ಪರ್ಶ ೪. ಅನುನಾಸಿಕ ೫. ಪಾರ್ಶ್ವಿಕ ೬. ಕಂಪಿತ ೭. ತಾಡಿತ ೮. ಅರ್ಧಸ್ವರಗಳು.

ಇವುಗಳನ್ನೇ ಸ್ಥಾನಕರಣಗಳನ್ನು ಅನುಸರಿಸಿ-

೧. ಉಭಯೋಷ್ಠ್ಯ ೨ ದಂತೋಷ್ಠ್ಯ ೩. ದಂತ್ಯ ೪. ವರ್ತ್ಸ್ಯ ೫. ಪರಿವೇಷ್ಠಿತ ೬. ತಾಲವ್ಯ ೭. ಕಂಠ್ಯ ೮. ಗಲಕುಹರೀಯ ಅಥವಾ ಗಲೀಯ ಎಂಬುದಾಗಿ ಹೆಸರಿಸುತ್ತಾರೆ.

### 4.7.1.1 ಘೋಷ ಅಘೋಷಗಳು :

ಧ್ವನಿ ಪಟಲಗಳ ಕಂಪನವನ್ನು ಗಮನಿಸಿ ಧ್ವನಿಗಳಲ್ಲಿ ಘೋಷ ಅಘೋಷ ಗಳೆಂಬ ವರ್ಗೀಕರಣ ಮಾಡುತ್ತಾರೆ. ಧ್ವನಿ ಪಟಲಗಳನ್ನು ಘೋಷತಂತುಗಳೆಂದೂ ಕರೆಯುತ್ತಾರೆ. ಘೋಷತ್ವದ ಅಂಶವನ್ನು 'ಕಲ್ಪ' ಎಂಬ ಹೆಸರಿನಿಂದಲೂ ಗುರುತಿ ಸುತ್ತಾರೆ. ಧ್ವನಿಪಟಲಗಳ ಹೆಚ್ಚು ಕಂಪನದಿಂದ ಹುಟ್ಟುವ ಧ್ವನಿಗಳನ್ನು 'ಘೋಷ' ಧ್ವನಿಗಳೆಂದೂ, ಕಂಪನರಹಿತವಾಗಿ ಇಲ್ಲವೆ ಕಡಿಮೆ ಕಂಪನದಿಂದ ಹುಟ್ಟುವ ಧ್ವನಿ ಗಳನ್ನು 'ಅಘೋಷ' ಧ್ವನಿಗಳೆಂದೂ ವರ್ಗೀಕರಿಸಲಾಗುತ್ತದೆ. ಕನ್ನಡ ಸ್ವರಗಳು ಸಾಮಾನ್ಯವಾಗಿ ಘೋಷಗಳು, ಘೋಷತ್ವದಿಂದ ಧ್ವನಿಗಳಿಗೆ ನಾದತ್ವ ಉಂಟಾಗಿ ಹೆಚ್ಚು ಸ್ಪಷ್ಟವಾಗಿ ಕೇಳಿಬರುತ್ತವೆ. ಕೆಲವು ಕನ್ನಡ ಧ್ವನಿಗಳನ್ನು ಘೋಷ ಅಘೋಷಗಳಾಗಿ ವಿಂಗಡಿಸಿ ಇಲ್ಲಿ ಉದಾಹರಿಸಿದೆ–

ಅಘೋಷಗಳು :
ಕ್, ಚ್, ಟ್. ತ್, ಪ್, ಸ್

ಘೋಷಗಳು :
ಗ್, ಜ್, ಡ್, ದ್, ಬ್,

ಹಾಗೂ ಎಲ್ಲ ಸ್ವರಗಳು.
ಘೋಷ ತಂತುಗಳ ಕಂಪನವನ್ನು ಈ ಕೆಳಗಿನ ಚಿತ್ರದಲ್ಲಿ ಗಮನಿಸಬಹುದು




### 4.7.1.1 ಸ್ಪರ್ಶಗಳು :

ಶ್ವಾಸಕೋಶದಿಂದ ಹೊರಬರುವ ಉಸಿರನ್ನು ಆಸ್ಯದ ಯಾವುದೇ ಭಾಗದಲ್ಲಿ ಸ್ವಲ್ಪಕಾಲ ಪೂರ್ಣ ತಡೆಹಿಡಿದು ಒಮ್ಮೆಲೆ ಬಿಟ್ಟಾಗ ಉಂಟಾಗುವ ಧ್ವನಿಗಳನ್ನು

ಸ್ಪರ್ಶಗಳು ಎನ್ನುತ್ತಾರೆ. ಶ್ವಾಸವು ಒಮ್ಮೆಲೆ ಸ್ಫೋಟಗೊಂಡಂತೆ ಹೊರಬೀಳುವದರಿಂದ ಇವುಗಳಿಗೆ ಸ್ಫೋಟಗಳೆಂದೂ ಕರೆಯುತ್ತಾರೆ. [ಪ್] [ತ್] [ಟ್] [ಕ್] ಅಘೋಷ ಸ್ಪರ್ಶಗಳಾದರೆ [ಬ್] [ದ್] [ಡ್] [ಗ್] ಇವು ಘೋಷ ಸ್ಪರ್ಶಗಳಾಗುತ್ತವೆ. ಈ ರೀತಿ [ಪ್] ಧ್ವನಿಯನ್ನು ವಿವರಿಸಬೇಕಾದರೆ–ಉಭಯೋಷ್ಠ್ಯ ಅಘೋಷ ಸ್ಪರ್ಶ ಧ್ವನಿ ಎಂದು ವಿವರಿಸಬೇಕಾಗುತ್ತದೆ. ಅಂದರೆ ಎರಡೂ ತುಟಿಗಳಿಂದ (ಸ್ಥಾನಕರಣ) ಅಘೋಷವಾಗಿ (ಧ್ವನಿ ಪಟಲಗಳ ಕಂಪನದಿಂದ) ಸ್ಫೋಟವಾಗಿ ಹುಟ್ಟುವ ಧ್ವನಿ 'ಪ್' ಎಂದು ಅರ್ಥವಾಗುತ್ತದೆ. ಹೀಗೆಯೇ ಇತರ ಮಹತ್ವದ ಸ್ಪರ್ಶ ಧ್ವನಿಗಳನ್ನು ಇಲ್ಲಿ ವಿವರಿಸಲಾಗಿದೆ.

| ಧ್ವನಿ | ವರ್ಣನೆ | ಉದಾಹರಣೆ |
|---|---|---|
| [ತ್] | ದಂತ್ಯ ಅಘೋಷಸ್ಪರ್ಶ | ಅತಿ, ಈತ |
| [ದ್] | ದಂತ್ಯ ಘೋಷಸ್ಪರ್ಶ | ದೀಪ, ನದಿ |
| [ತ್] | ವತ್ಸ್ಯ್ರ ಅಘೋಷಸ್ಪರ್ಶ | ತಲೆ, ಅತ್ತೆ |
| [ದ್] | ವತ್ಸ್ಯ್ರ ಘೋಷಸ್ಪರ್ಶ | ದುಡ್ಡು, ಸದ್ದು |
| [ಟ್] | ಪರಿವೇಷ್ಠಿತ ಅಘೋಷಸ್ಪರ್ಶ | ಟಾರು, ಗಟ್ಟಿ |
| [ಡ್] | ಪರಿವೇಷ್ಠಿತ ಘೋಷಸ್ಪರ್ಶ | ಡುಬ್ಬ, ಕಡ್ಡಿ |
| [ಕ್] | ಕಂಠ್ಯ ಅಘೋಷಸ್ಪರ್ಶ | ಕಸರು, ಹಕ್ಕಿ |
| [ಗ್] | ಕಂಠ್ಯ ಘೋಷಸ್ಪರ್ಶ | ಗಾದಿ, ನಗೆ |
| [? ] | ಗಲಕುಹರೀಯ ಘೋಷಸ್ಪರ್ಶ | ಕನ್ನಡದಲ್ಲಿಲ್ಲ[೧] |

### 4.7.1.3 ಘರ್ಷಗಳು ಅನುಘರ್ಷ :

ಶ್ವಾಸವು ಅತಿ ಸಂಕುಚಿತವಾಗಿ ಇಕಟ್ಟಾದ ಸ್ಥಾನದಲ್ಲಿ ಘರ್ಷಣೆಗೊಂಡು ಹೊರ್ಮೆಬರುವಾಗ ಉಂಟಾಗುವ ಧ್ವನಿಗಳೇ ಘರ್ಷಗಳು. [ಫ್], [ಸ್], [ಸ್]

೧ ಬ್ರಾಹು ಈ ಭಾಷೆಯಲ್ಲಿ ಹೇಲ್(ಜ್ಞಾನ)ಹಲ್ (ಇಲಿ) ಇಂಥ ಉಚ್ಚಾರಗಳಲ್ಲಿ 'ಹ್'ಗಲಕುಹರೀಯ ಸ್ಪರ್ಶದ ಉಚ್ಚಾರವನ್ನು ಹೊಂದಿದೆ.

(ಷ್) (ಶ್) (ಹ್) ಮುಂತಾದವು ಘರ್ಷ ಧ್ವನಿಗಳು. ಇವುಗಳಲ್ಲಿ (ಹ್) ಒಂದ ನ್ನುಳಿದು ಎಲ್ಲವೂ ಅಘೋಷಗಳು. (ಹ್) ಮಾತ್ರ ಘೋಷವಾಗಿದೆ.೧

### 4.7.1.4 ಈಷತ್ ಸ್ಪರ್ಶ (ಅನುಘರ್ಷ)ಗಳು :

ಸ್ಪರ್ಶ ಹಾಗೂ ಘರ್ಷ ಇವೆರಡರ ಅಂಶಗಳನ್ನು ಹೊಂದಿರುವ ಅಂದರೆ ಸ್ಪರ್ಶ ದಂತೆ ಆರಂಭವಾಗಿ ಅದೇ ಸ್ಥಾನದಲ್ಲಿ ಹುಟ್ಟುವ ಘರ್ಷದಂತೆ ಕೊನೆಗೊಳ್ಳುವ ಧ್ವನಿಯೇ ಈಷತ್ ಸ್ಪರ್ಶವೆನಿಸುತ್ತದೆ. ಘರ್ಷದ ಅಂಶವನ್ನೂ ಒಳಗೊಂಡಿರುವದ ರಿಂದ ಇದನ್ನು ಕೆಲವು ವಿದ್ವಾಂಸರು ಅನುಘರ್ಷವೆಂದೂ ಹೆಸರಿಸುತ್ತಾರೆ. ಅನು ಘರ್ಷ ಇಲ್ಲವೆ ಈಷತ್ ಸ್ಪರ್ಶಗಳು ಎರಡೇ ಎರಡು. ಒಂದು ಅಘೋಷ (ಚ್) ಇನ್ನೊಂದು ಘೋಷ (ಜ್). (ತ್) ದಿಂದ ಆರಂಭವಾಗಿ (ಸ್) ದಲ್ಲಿ ಮುಕ್ತಾಯ ನಾಗುವುದು (ಚ್). (ದ್) ದಿಂದ ಆರಂಭವಾಗಿ (ಸ್) ದಲ್ಲಿ ಮುಕ್ತಾಯವಾಗು ವದು (ಜ್). ಕೆಲವು ಮುಖ್ಯವಾದ ಘರ್ಷ ಹಾಗೂ ಈಷತ್ ಸ್ಪರ್ಶ ಧ್ವನಿಗಳ ವಿವರಣೆ ಹೀಗೆ—

| ಧ್ವನಿ | ವರ್ಣನೆ | ಉದಾಹರಣೆ |
|---|---|---|
| (ಫ್) (f) | ದಂತೋಷ್ಠ್ಯ ಅಘೋಷ ಘರ್ಷ | ಕಾಫಿ, ಫೀಜು |
| (ಸ್) | ವರ್ತ್ಸ್ಯ ಅಘೋಷ ಘರ್ಷ | ಸಮಯ, ಕಸ |
| (ಸ್) (z) | ವರ್ತ್ಸ್ಯಘೋಷ ಘರ್ಷ | ಬಸಾರ (Bazar) ಸೂ (Zoo) |
| (ಷ್) | ಪರಿವೇಷ್ಠಿತ ಅಘೋಷಘರ್ಷ | ಔಷಧ, ಷಣ್ಮುಖ |
| (ಶ್) | ತಾಲವ್ಯ ಅಘೋಷಘರ್ಷ | ಶಗಣಿ, ಈಶ |
| (ಹ್) | ಗಲಕುಹರೀಯ ಘೋಷಘರ್ಷ | ಹಾಲು, ಸಹಿ |
| (ಚ್) | ತಾಲವ್ಯ ಅಘೋಷ ಈಷತ್ ಸ್ಪರ್ಶ | ಚೆಲುವೆ, ಕುಚ |
| (ಜ್) | ತಾಲವ್ಯಘೋಷ ಈಷತ್ ಸ್ಪರ್ಶ | ಜಗಳ, ಮಜಾ |

೧ [ಹ್] ದ ಘೋಷತ್ವ ಸ್ವರದಷ್ಟು ಅಲ್ಲವೆಂದೇ ಅದನ್ನು ವ್ಯಂಜನವೆಂದು ಪರಿಗಣಿಸುತ್ತಾರೆ. ಉಚ್ಚಾರದ ರೀತಿಯ ದೃಷ್ಟಿಯಿಂದ ಅದು ವಾಸ್ತವಿಕವಾಗಿ ಅಘೋಷ ಸ್ವರ ಎಂದು ಬ್ಲಾಕ್ ಮತ್ತು ಟ್ರೇಗರ್ ಹೇಳುತ್ತಾರೆ.

### 4.7.1.5 ಅನುನಾಸಿಕಗಳು :

ನಾಸಾಕುಹರ ಹಾಗೂ ಆಸ್ಯದ ಮೂಲಕ ಏಕಕಾಲಕ್ಕೆ ಹವೆಯನ್ನು ಕಳಿಸುವುದರ ಮೂಲಕ ಉಚ್ಚರಿಸಲ್ಪಡುವ ಸ್ಪರ್ಶ ಧ್ವನಿಗಳೇ ನಾಸಿಕ ಧ್ವನಿಗಳೆಂದೆನಿಸುತ್ತವೆ. ನಾಸಿಕ ಮಾರ್ಗದಿಂದಲೂ ಹವೆ ಹೊರಡುವುದರಿಂದ ಸ್ಪರ್ಶ ಧ್ವನಿಯಲ್ಲಿ ಒಂದು ಬಗೆಯ ನಾದತ್ವವಿರುತ್ತದೆ. ಅಂತೆಯೇ ನಾಸಿಕಧ್ವನಿ ಸಾಮಾನ್ಯವಾಗಿ ಘೋಷವೇ ಆಗಿರುವುದು ವಾಡಿಕೆ. ಮುಖ್ಯ ಅನುನಾಸಿಕ ಧ್ವನಿಗಳು–

| ಧ್ವನಿ | ವರ್ಣನೆ | ಉದಾಹರಣೆ |
|---|---|---|
| (ಮ್) | ಉಭಯೋಷ್ಠ್ಯ ಅನುನಾಸಿಕ | ಮರ, ತಮ್ಮ |
| (ನ್) | ದಂತ್ಯ ಅನುನಾಸಿಕ | ಸಂತೆ, ಬಂದ |
| (ನ್̤) | ವರ್ತ್ಸ್ಯ ಅನುನಾಸಿಕ | ನಾಡು, ಅನ್ನ |
| (ಣ್) | ಪರಿವೇಷ್ಟಿತ ಅನುನಾಸಿಕ | ಮಣಿ, ಅಣ್ಣ |
| (ಞ್) | ತಾಲವ್ಯ ಅನುನಾಸಿಕ | ಅಂಚು, ಸಂಜೆ |
| (ಙ್) | ಕಂಠ್ಯ ಅನುನಾಸಿಕ | ಅಂಕ, ಅಂಗಿ |

### 4.7.1.6 ಪಾರ್ಶ್ವಿಕಗಳು :

ನಾಲಗೆಯ ತುದಿ ವರ್ತ್ಸ ಇಲ್ಲವೆ ತಾಲುವಿಗೆ ಸಂಕರ್ಷವಾಗಿ ಶ್ವಾಸವನ್ನು ತಡೆದು ಅದನ್ನು ನಾಲಗೆಯ ಎರಡೂ ಬದಿಯಿಂದ ನುಸುಳುವಂತೆ ಬಿಟ್ಟಾಗ ಉಂಟಾಗುವ ಧ್ವನಿಗಳೇ ಪಾರ್ಶ್ವಿಕಗಳು. ನಾಲಗೆಯ ಪಾರ್ಶ್ವ (ಬದಿ) ಗಳಲ್ಲಿ ಹವೆ ಪಾರಾಗುತ್ತದೆ. (ಲ್) ಹಾಗೂ (ಳ್) ಇವು ಪಾರ್ಶ್ವಿಕ ಧ್ವನಿಗಳು.

| ಧ್ವನಿ | ವರ್ಣನೆ | ಉದಾಹರಣೆಗೆ |
|---|---|---|
| (ಲ್) | ವರ್ತ್ಸ್ಯಪಾರ್ಶ್ವಿಕ | ಲೆಕ್ಕ, ತೊಗಲು |
| (ಳ್) | ಪರಿವೇಷ್ಟಿತ (ಮೂರ್ಧನ್ಯ) ಪಾರ್ಶ್ವಿಕ | ಸುಳಿ, ಮಳೆ |

### 4.7.1.7 ಕಂಪಿತ ಹಾಗೂ ತಾಡಿತಗಳು :

ನಾಲಗೆಯ ತುದಿಯ ಅಥವಾ ಮುಂಭಾಗದ ಕಂಪನದಿಂದ ಉಂಟಾಗುವ ಧ್ವನಿಗಳೇ ಕಂಪಿತಗಳು. (ರ್) ಧ್ವನಿ ಉಚ್ಚರಿಸುವಾಗ ನಾಲಗೆಯ ತುದಿ ವರ್ತ್ಸಕ್ಕೆ

ತಾಗಿದಂತಾಗಿ ನಾಲಗೆಯ ಮುಂಭಾಗ ಕಂಪನಗೊಳ್ಳುತ್ತದೆ, ಈ ಕಂಪನ ಹೆಚ್ಚು ಸಲ ಆಗದೆ ಒಮ್ಮೆ ಮಾತ್ರ ಆಗುವುದರಿಂದುಂಟಾಗುವ ಧ್ವನಿಯನ್ನು ತಾಡಿತವೆಂದು ಕರೆಯುತ್ತಾರೆ.

ಕಂಪನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ–

೧. ಹೆಚ್ಚು ಕಂಪನ ೨. ಸಾಧಾರಣ ಕಂಪನ ೩. ಒಮ್ಮೆ ಮಾತ್ರ ಕಂಪನ ಉಂಟಾಗಿ ಮೂರು ಬಗೆಯ ಉಚ್ಚಾರಗಳು ಹೊರಡಬಹುದು. ಹೆಚ್ಚು ಕಂಪನ ದಿಂದುಂಟಾಗುವ ಧ್ವನಿಗಳನ್ನು ಲೋಡಿತ (Rolled) ಎಂದೂ, ಸಾಧಾರಣ ಕಂಪನ ದಿಂದ ಉಂಟಾಗುವ ಧ್ವನಿಗಳನ್ನು ಕಂಪಿತ (Trill) ಎಂದೂ, ಒಮ್ಮೆ ಮಾತ್ರ ಕಂಪನವಾಗುವುದರಿಂದ ಉಂಟಾಗುವ ಧ್ವನಿಗಳನ್ನು ತಾಡಿತ (Flap) ಎಂದೂ ಗುರುತಿಸುತ್ತಾರೆ. ಕನ್ನಡದಲ್ಲಿ 'ಕರ್ರಗೆ' ಎಂಬ ಉಚ್ಚಾರದಲ್ಲಿ (ರ್) ಕಂಪಿತ ವಾಗಿದೆ. 'ಕಡಿ' ಎಂಬ ಉಚ್ಚಾರದಲ್ಲಿ (ಡ್) ಧ್ವನಿ ತಾಡಿತವಾಗಿದೆ. ನಾಲಗೆಯ ತುದಿ ತಾಲುವನ್ನು ಒಂದೇ ಸಲ ತಾಡನ ಗೈಯ್ದು ತಾಡಿತ ಧ್ವನಿಯನ್ನು ಹುಟ್ಟಿ ಸುತ್ತದೆ.

#### 4.7.1.8 ಅರ್ಧ ಸ್ವರಗಳು :

ಸಂಪೂರ್ಣ ವ್ಯಂಜನ ಅಥವಾ ಸಂಪೂರ್ಣ ಸ್ವರದ ಲಕ್ಷಣಗಳನ್ನೂ ಹೊಂದಿ ರದೆ ಎರಡರ ಲಕ್ಷಣಗಳನ್ನು ಹೊಂದಿ ಒಂದೊಂದು ಭಾಷೆಯಲ್ಲೂ ಅವುಗಳ ರಚನೆ ಗನುಗುಣವಾಗಿ ಸ್ವರವೋ ವ್ಯಂಜನವೋ ಆಗಿ ಬಳಕೆಗೊಳ್ಳುವ ವೈಶಿಷ್ಟ್ಯವನ್ನು ಅರ್ಧ ಸ್ವರಗಳು ಪಡೆದಿವೆ. ಈ ಕಾರಣದಿಂದಲೇ ಅರ್ಧ ಸ್ವರಗಳನ್ನು ಅರೆ ವ್ಯಂಜನ ಗಳೆಂದು ಕೆಲವು ವಿದ್ವಾಂಸರು ಪರಿಗಣಿಸುತ್ತಾರೆ.

[ಯ್] ಹಾಗೂ [ವ್] ಈ ಧ್ವನಿಗಳನ್ನು ಅರ್ಧ ಸ್ವರದಲ್ಲಿ ಸೇರಿಸುತ್ತಾರೆ.

[ಯ್] ಅವನತೋನ್ನತ ಅವೃತ್ತ ಪೂರ್ವಸ್ವರ ಹಾಗೂ ಅವನತ ಅವೃತ್ತ ಪೂರ್ವ ಸ್ವರ ಇವೆರಡರ ಉಚ್ಚಾರಗಳ ನಡುವೆ ತಾಲವ್ಯ ಸ್ಥಾನದಲ್ಲಿ ಹುಟ್ಟುತ್ತದೆ.
ಉದಾ : ಯಾವುದು, ಸಾಯಬು.

(ವ್) ಅವನತೋನ್ನತ ಸವೃತ್ತ ಪೂರ್ವಸ್ವರ ಹಾಗೂ ಅವನತ ಸವೃತ್ತ ಪೂರ್ವ ಸ್ವರ ಇವೆರಡರ ಉಚ್ಚಾರಣೆಗಳ ನಡುವೆ ಉಭಯೋಷ್ಠ್ಯಗಳಿಂದ ಉಚ್ಚರಿಸಲ್ಪಡುತ್ತದೆ. ಉದಾ : ವೇಳೆ, ಬಯಲು.

(ವ್̤) (ವ್) ಉಚ್ಚಾರದಂತೆಯೇ ಇದ್ದು, ಇದು ದಂತೋಷ್ಠ್ಯವಾಗಿದೆ. ಉದಾ : ವ̤ೇಷ, ವ̤ೀರ್ಯ, ವ್̤ಯಾಮೋಹ.

### 4.7.2 ಸ್ವರಗಳು

ಪುಪ್ಪುಸದಿಂದ ಹೊರಟ ಹವೆ ಮುಖವಿವರ (ಆಸ್ಯ) ದಲ್ಲಿ ಯಾವುದೇ ಬಗೆಯ ಅಡೆತಡೆಗಳಿಗೆ ಒಳಗಾಗದೆ ಉತ್ಪನ್ನವಾಗುವ ಧ್ವನಿಗಳೇ ಸ್ವರಗಳು. ವ್ಯಂಜನಗಳಿಗೂ ಸ್ವರಗಳಿಗೂ ಇರುವ ಮುಖ್ಯವಾದ ಭಿನ್ನತೆಯೇ ಇದು. ಅಂತೆಯೇ ಸ್ವರೋಚ್ಚಾರಣೆ ಬಹುಸುಲಭ. ಸ್ವರಗಳನ್ನು ಸ್ಪಷ್ಟವಾಗಿ ಸ್ವತಂತ್ರ ವಾಗಿ ಉಚ್ಚರಿಸಬಹುದು. ಸ್ವರಗಳಲ್ಲಿ ವೈವಿಧ್ಯವನ್ನುಂಟುಮಾಡುವ ಮುಖ್ಯ ಅಂಗಗಳೆಂದರೆ ನಾಲಗೆ ಮತ್ತು ತುಟಿಗಳು ಮಾತ್ರ. ನಾಲಗೆಯ ಉನ್ನತಿ, ಪ್ರಗತಿ ಹಾಗೂ ತುಟಿಗಳ ದುಂಡುಗಾಗುವಿಕೆ ಅಥವಾ ಆಗದಿರುವಿಕೆ ಇವೇ ಸ್ವರ ಗಳಲ್ಲಿನ ಭಿನ್ನತೆಗೆ ಕಾರಣಗಳಾಗುತ್ತವೆ. ಅವುಗಳನ್ನು ಅನುಸರಿಸಿಯೇ ಸ್ವರಗಳ ವಿವರಣೆ, ವರ್ಗೀಕರಣ ನಡೆಯುತ್ತದೆ. ಸ್ವರಗಳು ಧ್ವನಿಗಳಲ್ಲಿ ಬಹಳ ಮಹತ್ವದವು ಗಳಾಗಿವೆ. ಸ್ವರಧ್ವನಿಗಳ ಸಹಾಯ ಬಹುಮಟ್ಟಿಗೆ ವ್ಯಂಜನ ಧ್ವನಿಗಳ ಉಚ್ಚಾರಕ್ಕೆ ಬೇಕಾಗುತ್ತದೆ. ಅಕ್ಷರಗಳ ನಿರ್ಮಿತಿಗೆ ಸ್ವರಗಳೇ ಮುಖ್ಯ ಮಾನದಂಡಗಳಾಗು ತ್ತವೆ. ಸ್ವರಗಳ ಉಚ್ಚಾರಣದಲ್ಲಿ ನಾದಗುಣ ಬಹಳವಿದೆ. ಅವು ಘೋಷ ಗಳಲ್ಲಿಯೇ ಪರಿಗಣಿಸಲ್ಪಡುತ್ತವೆ. ಸ್ವರಗಳ ನಾದಶಿಖರತ್ವದಿಂದಾಗಿ ಭಾಷೆಯಲ್ಲಿಯ ಧ್ವನಿಗಳಿಗೆ ಪೂರ್ಣ ಸ್ವರೂಪ ಬರುತ್ತದೆ.

ನಾಲಗೆಯ ಉನ್ನತಿಯನ್ನು (ಎತ್ತರ) ಅನುಸರಿಸಿ 1 ಉನ್ನತ, 2 ಅವನ ತೋನ್ನತ, 3 ಉನ್ನತಮಧ್ಯ, 4 ನಡುಮಧ್ಯ, 5 ಅವನತಮಧ್ಯ, 6 ಉನ್ನತಾ ವನತ, 7 ಅವನತ ಎಂಬುದಾಗಿ ಒಟ್ಟು ಏಳು ಬಗೆಯಲ್ಲಿಯೂ, ನಾಲಗೆಯ ಪ್ರಗತಿ (ಹಿಂದೆ, ಮುಂದೆ, ನಡುವೆ) ಅನುಸರಿಸಿ ಪೂರ್ವ, ಮಧ್ಯ, ಪಶ್ಚ ಎಂದು ಮೂರು ರೀತಿಯಲ್ಲಿಯೂ, ತುಟಿಗಳ ಸ್ಥಿತಿಯನ್ನು ಅನುಸರಿಸಿ ಅವೃತ್ತ (ದುಂಡ ಗಲ್ಲದ), ಸವೃತ್ತ (ದುಂಡಗಾದ) ಎಂಬುದಾಗಿ ಎರಡು ಬಗೆಯಲ್ಲೂ ಸ್ವರಧ್ವನಿ ಗಳನ್ನು ವರ್ಗೀಕರಿಸಲಾಗುತ್ತದೆ.

### 4.7.2.1 ಕೆಲವು ಮುಖ್ಯಸ್ವರಗಳು :

| ಧ್ವನಿ | ವರ್ಣನೆ | ಉದಾಹರಣೆ |
|---|---|---|
| (ಇ) | ಉನ್ನತ ಪೂರ್ವ ಅವೃತ್ತಹ್ರಸ್ವ | ಇರು, ಇಲಿ |
| (ಎ) | ಉನ್ನತ ಮಧ್ಯ ಅವೃತ್ತ ಪೂರ್ವ ಹ್ರಸ್ವ | ಎಲೆ, ಬೆಲೆ |
| (ಎ̣) | ಅವನತ ಮಧ್ಯ ಅವೃತ್ತ ಪೂರ್ವ ಹ್ರಸ್ವ | ಕೆಮರಾ, ತ್ಯಜಿಸು |
| (ಲ್ಯ) | ಉನ್ನತಾವನತ ಪೂರ್ವ ಅವೃತ್ತ ದೀರ್ಘ | ಬ್ಯಾಡ, ಬ್ಯಾಂಕು, ಬ್ಯಾರೆ |
| (ಅ) | ನಡುಮಧ್ಯ ಅವೃತ್ತ ಹ್ರಸ್ವ | ಕರಿ (fry), ಕಟ್ಟ (Built) |
| (ಅ̣) | ಅವನತ ಮಧ್ಯ ಅವೃತ್ತ ಹ್ರಸ್ವ | ಕರಿ (call), ಅತ್ತೆ (mother-in-law) |
| (ಉ) | ಉನ್ನತ ಪಶ್ಚ ಸವೃತ್ತ ಹ್ರಸ್ವ | ಉರಿ, ಕುರಿ |
| (ಒ) | ಉನ್ನತ ಮಧ್ಯ ಸವೃತ್ತ ಪಶ್ಚ ಹ್ರಸ್ವ | ಕೊಲೆ, ಒಲೆ |
| (ಒ̣) | ಅವನತ ಮಧ್ಯ ಪಶ್ಚ ಸವೃತ್ತ ಹ್ರಸ್ವ | ಲಾರಿ, ಕೊರಿ (ಅರ್ಥ) |

ಈ ಸ್ವರಗಳಲ್ಲಿ ಪ್ರತಿಯೊಂದಕ್ಕೂ ದೀರ್ಘಸ್ವರ ಇರಬಹುದು.

### 4.7.2.2. ಮೂಲಸ್ವರಗಳು :

ಸಾಮಾನ್ಯವಾಗಿ ೪೨ ಸ್ವರ ಪ್ರಭೇದಗಳನ್ನು ಮನುಷ್ಯ ಭಾಷೆಯಲ್ಲಿ ಗುರುತಿಸಲಾಗುತ್ತದೆಯಾದರೂ ಮನುಷ್ಯ ಹೊರಡಿಸುವ ಅತಿ ಸೂಕ್ಷ್ಮ ಸ್ವರವಿವೇಚನೆಯನ್ನು ಮಾಡಿ ಅವೆಲ್ಲವುಗಳಿಗೂ ಸಂಕೇತಗಳನ್ನು ನೀಡುವುದು ದುಸ್ತರವಾದ ಕಾರ್ಯವಾಗಿಸುತ್ತದೆ. ಪ್ರತಿಯೊಂದು ಸ್ವರಕ್ಕೂ ಅದರ ಉಚ್ಚಾರಣೆಯ ಒಂದು ಸೀಮೆ ಇರುತ್ತದೆ. ಆ ನಿರ್ದಿಷ್ಟ ಸೀಮೆಯನ್ನು ದಾಟಿದ ತಕ್ಷಣ ಬೇರೊಂದು ಸ್ವರದ ಉಚ್ಚಾರ ಹೊರಡುತ್ತದೆ. ಹೀಗೆ ಮುಖ್ಯವಾದ ಒಟ್ಟು ಎಂಟು ಸ್ವರಗಳನ್ನು ಇಟ್ಟುಕೊಂಡು ಅವುಗಳು ಉಚ್ಚರಿಸಲ್ಪಡುವ ಸೀಮೆಯನ್ನು ಒಂದು ಸಮನಾದ ಪ್ರಮಾಣಕ್ಕನುಸರಿಸಿ ಅವುಗಳ ನಡುವಿನ ಅಂತರವನ್ನು ಗುರುತು ಹಾಕಿಕೊಂಡು ಅನುಕೂಲವಾದ ಒಂದು ಆಕೃತಿಯನ್ನು ರಚಿಸಿರುತ್ತಾರೆ. ಇದು ಸಂಪೂರ್ಣ ಕಾಲ್ಪನಿಕವಾದದ್ದು. ಭಾಷೆಯಲ್ಲಿ ಪ್ರತ್ಯಕ್ಷವಾಗಿ ಬಳಕೆಯಲ್ಲಿರುವ ಸ್ವರಗಳ ಸ್ಥಾನವನ್ನು ಗುರುತಿಸುವುದಕ್ಕೆ ಅನುಕೂಲವಾಗಲೆಂಬ ಉದ್ದೇಶವನ್ನು

ಇದು ಹೊಂದಿದೆ. ಸ್ವರಗಳ ವರ್ಗೀಕರಣ, ತುಲನೆ ಮುಂತಾದವುಗಳಲ್ಲೂ ಇದನ್ನು ಅನ್ವಯಿಸಿದರೆ ಭಾಷೆಗಳಲ್ಲಿಯ ಸ್ವರಗಳ ವಿವರಣೆಗೆ ಸುಲಭವೆನಿಸುತ್ತದೆ. ಮಾನಸ್ವರ ಪದ್ಧತಿಯನ್ನು ಬ್ರಿಟಿಶ್ ಭಾಷಾವಿಜ್ಞಾನಿ ಡೇನಿಯಲ್ ಜೋನ್ಸ ಸೂಚಿಸಿದನು. ಮಾನಸ್ವರಗಳು ಶಿಷ್ಟ ಸ್ವರಗಳ ನಿರ್ದಿಷ್ಟ ಹಾಗೂ ಸ್ಥಿರ ತಾಣಗಳನ್ನು ತೋರಿಸುತ್ತವೆ. ಭಾಷೆಯಲ್ಲಿ ಬಳಕೆಯಲ್ಲಿರುವ ಸ್ವರಗಳನ್ನು ಇಲ್ಲಿಯ ಸ್ವರಗಳೊಂದಿಗೆ ಹೋಲಿಸಿ ಅವುಗಳ ಸ್ಥಾನ ನಿರ್ದೇಶಿಸಿ ವರ್ಣಿಸಬಹುದು. ಮಾನಸ್ವರಗಳು ಸ್ವರಗಳನ್ನು ಅಳೆಯುವ ಒಂದು ಬಗೆಯ ಮಾನದಂಡಗಳಾಗಿವೆಯೆನ್ನಬಹುದು. ಮಾನಸ್ವರಗಳ ಆಕೃತಿ ಹೀಗಿದೆ—




ಚೌಕೋನಾಕಾರವು ಆಸ್ಯವನ್ನೂ ಅದರಲ್ಲಿನ ತ್ರಿಕೋನಕಾರವು ನಾಲಗೆಯನ್ನೂ ಸೂಚಿಸುತ್ತದೆ. ಚೌಕೋನದ ಎಡಬಲ ಬದಿಯಲ್ಲಿನ ಮೂರು ಭಾಗಗಳು (ಮೇಲಿನಿಂದ ಕೆಳಕ್ಕೆ) ಉನ್ನತ, ಮಧ್ಯ, ಅವನತ ಸ್ಥಿತಿಗಳನ್ನೂ, ಮೇಲಿರುವ ('ಇ' ದಿಂದ 'ಉ' ಮಧ್ಯದ ಭಾಗಗಳು. (ಎಡದಿಂದ ಬಲಕ್ಕೆ) ಪೂರ್ವ, ಮಧ್ಯ, ಪಶ್ಚ ಸ್ಥಿತಿಯನ್ನೂ ಸೂಚಿಸುತ್ತವೆ

### 4.7.3. ಅವಿಭಾಜಕಗಳು :

ಯಾವುದೇ ಒಂದು ವ್ಯಂಜನ ಇಲ್ಲವೆ ಸ್ವರಧ್ವನಿಯ ಉಚ್ಚಾರಣೆಯ ಜೊತೆ ಜೊತೆಗೆ ಇನ್ನೊಂದು ಬಗೆಯ ಧ್ವನಿಯ ಉಚಾರಣೆ ಆಗುತ್ತಿದ್ದರೆ ಅದನ್ನು ಸಹೋ

ಚ್ಚಾರಣೆಯೆಂದು ಕರೆಯಬಹುದು. ಸಾಮಾನ್ಯವಾಗಿ ಸ್ವರದೊಂದಿಗೆ ಇಂಥ ಉಚ್ಚಾರಣೆ ಇರುತ್ತದೆ ದೀರ್ಘತ್ವವನ್ನೂ ಮೂರ್ಧನ್ಯತ್ವ (ಪರಿವೇಷ್ಟನ) ಗಳನ್ನೂ ಸಹೋಚ್ಚಾರಣೆ ಎಂದು ಪರಿಭಾವಿಸಿ ಅವುಗಳನ್ನೂ ಅವಿಭಾಜಕಗಳಲ್ಲಿ ಸೇರಿಸುತ್ತಾರೆ. ಹೀಗೆ ಸಹೋಚ್ಚಾರಣೆಗೊಳ್ಳುವ ಧ್ವನಿಗಳನ್ನು ಪ್ರತ್ಯೇಕವಾಗಿ ವಿಭಜಿಸಲು ಬರುವುದಿಲ್ಲವಾದ್ದರಿಂದ ಅವುಗಳನ್ನು ಅವಿಭಾಜಕಗಳೆಂದೂ ಹೆಸರಿಸುತ್ತಾರೆ. ಅವಿಭಾಜಕಗಳಲ್ಲಿ ಒಂದು ಉಚ್ಚಾರಣೆ ಪ್ರಮುಖವೂ ಇನ್ನೊಂದು ಅದನ್ನು ಅನುಸರಿಸುವ ಉಪ ಉಚ್ಚಾರವೂ ಆಗುತ್ತದೆ.

4.7.3.1 ಕನ್ನಡದಲ್ಲಿ ಸ್ವರದೊಂದಿಗೆ ನಾಸಿಕಧ್ವನಿಯು ಕೆಲವೆಡೆಗಳಲ್ಲಿ ಉಚ್ಚರಿಸಲ್ಪಡುತ್ತದೆ. ಕೆಲವು ಸಲ ಈ ನಾಸಿಕಧ್ವನಿ ಶಬ್ದದ ಅರ್ಥವನ್ನೇ ಬದಲಾಯಿಸುವಷ್ಟು ಮಹತ್ವದ್ದಾಗಿರಬಹುದು. ಇಲ್ಲವೆ ಅರ್ಥಕ್ಕೇನೂ ಬಾಧೆ ಬರದಂತೆಯೂ ಸ್ವರದೊಂದಿಗೆ ಸಹೋಚ್ಚರಿತಗೊಳ್ಳಬಹುದು. ಅವಿಭಾಜಕವಾಗಿ ಬರುವ ನಾಸಿಕ ಧ್ವನಿಯನ್ನು ಁ ಈ ಚಿಹ್ನೆಯಿಂದ ಗುರುತಿಸುತ್ತಾರೆ.

ಸಁವಿ, ಬಾಁವಿ, ಕಿಁವಿ, ಕೀಁವು, ಹೂಁಸು, ಬೆಁವ್ರು, ಬೇಁವ್ರು,

ಅರ್ಥಭಿನ್ನತೆಗೆ ಉದಾಹರಣೆಗಳು

ಕಾಁವು (ಕೊಡಲಿಯ ಹಿಡಿಕೆ) – ಕಾವು (ಉಷ್ಣತೆ)

ಹೂಁ (ಆಗಲಿ) – ಹೂ (ಪುಷ್ಪ)

ಹಾಁ (ಏನು ?) – ಹಾ (ಅಯ್ಯೋ!)

ನಾಸಿಕ್ಯತೆಯಲ್ಲದೆ ಶ್ರುತಿ, ವಿರಾಮ, ಆಘಾತ ಹಾಗೂ ದೀರ್ಘಗಳನ್ನೂ ಅವಿಭಾಜಕಗಳಲ್ಲಿ ಸೇರಿಸಬಹುದು.

**4.7.3.2 ಶ್ರುತಿ [Pitch] :**

ಧ್ವನಿಯ ಏರಿಳಿತಗಳಿಂದ ಕೆಲವು ವಿಶಿಷ್ಟ ಭಾವವನ್ನು ಅಭಿವ್ಯಕ್ತಪಡಿಸಬಹುದು. ಸಮಾನ ಅಥವಾ ಸ್ವರಿತವಾಗಿರುವಾಗ ಸಾಮಾನ್ಯ ಅರ್ಥ ಉಂಟಾಗುತ್ತಿದ್ದರೆ ಅದೇ ಶಬ್ದದಲ್ಲಿ ಏರು (ಉದಾತ್ತ), ಇಳುವು (ಅನುದಾತ್ತ) ಧ್ವನಿ ಬಳಸಿ

ವಿಶಿಷ್ಟ ಅರ್ಥವನ್ನೂ ತಂದು ಕೊಡಬಹುದು. ಈ ಮೂರು ಬಗೆಗಳನ್ನು ಬಾಣದ ಗುರುತುಗಳಿಂದ ಸಂಕೇತಿಸುತ್ತಾರೆ.

೧. ಉದಾತ್ತ ↑ ೨. ಸ್ವರಿತ → ೩. ಅನುದಾತ್ತ ↓

ತಂದ ಎಂಬ ಉಚ್ಚಾರದಲ್ಲಿ ಶ್ರುತಿ ಮೂರು ಬಗೆಯ ಭಾವವನ್ನು ತಂದು ಕೊಡಬಲ್ಲುದಾಗಿದೆ :

೧. ತಂದ ↑ (ತಂದಿದ್ದಾನೆಯೇ ? ಎಂಬ ಕುತೂಹಲದ ಭಾವ)

೨. ತಂದ (ತಂದಿದ್ದಾನೆ ಎಂಬ ಸಾಮಾನ್ಯ ಭಾವ)

೩. ತಂದ ↓ (ತಂದಿರುತ್ತಾನೆ ಎಂಬ ನಿರುತ್ಸಾಹದಾಯಕ ಭಾವ)

ಮೊದಲನೆಯದರಲ್ಲಿ ಶ್ರುತಿಯು ತೀವ್ರ ಏರಿಕೆಯನ್ನು, ಎರಡನೆಯದರಲ್ಲಿ ಸ್ಥಿರತೆಯನ್ನು, ಕೊನೆಯದರಲ್ಲಿ ತೀವ್ರ ಇಳಿಕೆಯನ್ನು ಕಾಣುತ್ತೇವೆ. ಈ ರೀತಿಯ ಶ್ರುತಿಯ ಪರಿವರ್ತನೆ ಒಮ್ಮೆಲೆ ಇರಬಹುದು ಅಥವಾ ಸಾವಧಾನವಾಗಿರಬಹುದು, ಹೆಚ್ಚಿರಬಹುದು, ಕಡಿಮೆ ಇರಬಹುದು. ಶ್ರುತಿ ಬೇರೆ ಬೇರೆ ಸ್ಥರಗಳಲ್ಲೂ ಇರಬಹುದು. ಕೆಳಮಟ್ಟ, ಮಧ್ಯಮ, ಉನ್ನತ, ಅತಿ ಉನ್ನತ, ಎಂಬುದಾಗಿ ಈ ಸ್ವರಗಳನ್ನು ಗುರುತಿಸುತ್ತಾರೆ. ಶ್ರುತಿಯು ಭಾಷೆಯಲ್ಲಿ ಬಳಕೆಗೊಳ್ಳುವ ಶಬ್ದಗಳಲ್ಲಿ ಅರ್ಥ ಭಿನ್ನತೆಯನ್ನು ಉಂಟುಮಾಡುವುದು ಆಗಿರಬಹುದು. ಇಲ್ಲವೆ ಅದಕ್ಕೆ ಕೆಲವು ಭಾಷೆಗಳಲ್ಲಿ ಮಹತ್ವ ಇಲ್ಲದೆಯೂ ಇರಬಹುದು. ಗ್ರಂಥಸ್ಥ ಭಾಷೆಯಲ್ಲಿ ಶ್ರುತಿಯನ್ನು ಸಾಮಾನ್ಯವಾಗಿ ಯಾವ ಸಂಕೇತದಿಂದಲೂ ಸೂಚಿಸುವುದಿಲ್ಲವಾದ್ದರಿಂದ ಭಾಷೆಯಲ್ಲಿ ಬಳಕೆಯಲ್ಲಿರುವ ಶ್ರುತಿಯನ್ನು ಕೇಳಿಯೇ ತಿಳಿದುಕೊಳ್ಳಬೇಕಾಗುತ್ತದೆ. ಧ್ವನ್ಯಾಲೇಖನದಲ್ಲಿ ಬರೆಯುವಾಗ ಮಾತ್ರ ಬಾಣದ ಗುರುತ್ತುಗಳಿಂದ ಶ್ರುತಿಯನ್ನು ಸೂಚಿಸಲಾಗುತ್ತದೆ. ಶ್ರುತಿ ಸಾಮಾನ್ಯವಾಗಿ ಉಚ್ಚಾರದ ಅಂತ್ಯದಲ್ಲಿರುತ್ತದೆ.

### 4.7.3.3 ವಿರಾಮ (Juncture)

ಯಾವುದೇ ಶಬ್ದ ಅಥವಾ ಶಬ್ದಗಳ ಮಧ್ಯೆ ಉಚ್ಚಾರ ಸ್ವಲ್ಪ ಹೊತ್ತು ನಿಂತು ಮುಂದೆ ಸಾಗುವುದೆ ವಿರಾಮವೆನಿಸುತ್ತದೆ. ಶಬ್ದಾಂತ್ಯದಲ್ಲೂ ವಿರಾಮವಿರ

ಬಹುದು. ಭಾಷಾ ದೃಷ್ಟಿಯಿಂದ ಇಂತಹ ವಿರಾಮಕ್ಕೆ ಮಹತ್ವವಿದ್ದರೆ ಮಾತ್ರ ಅದನ್ನು ಪರಿಗಣಿಸಲಾಗುತ್ತದೆ. ವಿರಾಮವು ಅರ್ಥ ಬದಲಾವಣೆಗೆ ಕಾರಣ ವಾದರೆ ಅದು ಮಹತ್ವ ಪಡೆದಿದೆಯೆಂದು ತಿಳಿಯಬೇಕು.

ಆಮರಣ-ಮರಣ ಬರುವವರೆಗೂ; ಆ+ಮರಣ- ಅಂತಹ ಮರಣ

ಆರು+ತಿ-ಆರು ತಿ' ಗಳು;-ಆರುತಿ-ಆರತಿ

ಆ+ಲೋಚನ- ಆ ಕಣ್ಣು; ಆಲೋಚನ-ವಿಚಾರ

ಆ+ಲೋಕ-ಆ ಜಗತ್ತು; ಆಲೋಕ-ನೋಟ ಜ್ಞಾನ.

ಇಂತಹ ಉದಾಹರಣೆಗಳಲ್ಲಿ ಉಚ್ಚಾರದ ಮಧ್ಯೆ ಎಲ್ಲಿ ವಿರಾಮ ಬರುತ್ತ ದೆಯೋ ಅದಕ್ಕನುಸರಿಸಿ ಅರ್ಥ ಬದಲಾಗುವುದನ್ನು ಗಮನಿಸಬಹುದು.

**4.7.3.4 ಆಘಾತ ; (Stress/Accent)** ಉಚ್ಚಾರದಲ್ಲಿ ಎಲ್ಲಿಯಾದರೂ ಧ್ವನಿ ಒತ್ತಡ ಸಹಜವಾಗಿರುವುದಕ್ಕಿಂತ ಹೆಚ್ಚಾಗಿ ಬೀಳುವುದನ್ನು ಆಘಾತ ಎನ್ನಬಹುದು. ಉಚ್ಚಾರದ ಪ್ರತಿಯೊಂದು ಧ್ವನಿಯ ಮೇಲೆ ಆಘಾತ ಬೀಳುವುದಿಲ್ಲ. ಒಂದು ಉಚ್ಚಾರದಲ್ಲಿ ಮೊದಲನೆಯದಾಗಿ ಬೀಳುವ ಆಘಾತಕ್ಕೆ ಪ್ರಥಮ ಆಘಾತ, ಎರಡನೆಯದಾಗಿ ಬೀಳುವ ಆಘಾತಕ್ಕೆ ದ್ವಿತೀಯ ಆಘಾತ, ಮೂರನೆಯದಕ್ಕೆ ತೃತೀಯ ಆಘಾತ ಎಂದು ಮೂರು ಮುಖ್ಯ ಆಘಾತಗಳನ್ನು ಸೂಚಿಸಲಾಗುತ್ತದೆ. ಕೆಲವು ಸಲ ಆಘಾತದ ಜೋರು ಇರಬೇಕಾದಷ್ಟು ಇಲ್ಲದೆ ಇರಬಹುದು. ಆಗ ಅದನ್ನು ದುರ್ಬಲ ಆಘಾತವೆನ್ನುತ್ತಾರೆ. ಆಘಾತವು ಸ್ವರಗಳ ಮೇಲೆಯೇ ಬೀಳುತ್ತದೆ. ಪ್ರಥಮ, ದ್ವಿತೀಯ, ತೃತೀಯ ಹಾಗೂ ದುರ್ಬಲ ಈ ನಾಲ್ಕು ಪ್ರಕಾರದ ಆಘಾತಗಳು ಒಂದೇ ಭಾಷೆಯಲ್ಲಿ ಇರಬಹುದು ಅಥವಾ ಇರಲಿಕ್ಕಿಲ್ಲ. ಇವುಗಳನ್ನು ಕ್ರಮವಾಗಿ ೧. / ೨. Λ ೩. \ ೪. √ ಎಂಬ ಚಿಹ್ನೆಗಳಿಂದ ಗುರುತಿಸುತ್ತಾರೆ. ಆಘಾತವು ನಿಯಮಿತವಾಗಿ, ನಿರ್ದಿಷ್ಟವಾಗಿ ಉಚ್ಚಾರದ ಒಂದು ಸ್ಥಳದಲ್ಲಿ ಬರುತ್ತಿದ್ದು ಅರ್ಥ ಭಿನ್ನತೆಗೆ ಎಡೆಮಾಡಿಕೊಡದಿದ್ದರೆ ಅದಕ್ಕೆ ಅಷ್ಟು ಮಹತ್ವಕೊಡುವುದಿಲ್ಲ. ಕೆಲವು ಭಾಷೆಗಳಲ್ಲಿ ಆಘಾತವು ತನ್ನ ಸ್ಥಾನವನ್ನು ಬದಲಿಸಿತೆಂದರೆ ಅರ್ಥ ಭಿನ್ನತೆಗೆ ಎಡೆಮಾಡಿಕೊಡುವುದನ್ನಿಲ್ಲಿ ಗಮನಿಸಬಹುದು.

/ Λ \ Λ

ಉದಾ : ಊಟ ವಸತಿ ಗೃಹ. ಊಟ ವಸತಿ ಗೃಹ

ಕೇಶಿರಾಜನು ಅಸಹ್ಯೋಕ್ತಿಗೆ ಕೊಟ್ಟಿರುವ ಉದಾಹರಣೆಗಳು ಆಘಾತ ದೃಷ್ಟಿಯಿಂದ ಪರಿಶೀಲಿಸಲು ಅರ್ಹವಾಗಿವೆ.:

/ Λ /Λ /Λ / Λ
ಆಸೆ ಗಣಿತಾ. ಆ ಸೆಗಣಿತಾ, ಹೇ ಲತಾಕೋನುಲಾಂಗಿ, ಹೇಲ ತಾ ಕೋನುಲಾಂಗಿ

**4.7.3.5 ದೀರ್ಘ [Length]**

ಹ್ರಸ್ವ ಉಚ್ಚಾರಕ್ಕೆ ಬೇಕಾಗುವ ಸಮಯವನ್ನು ಅದರ ಎರಡು ಪಟ್ಟು ಬೆಳೆಸಿದರೆ ಅದೇ ಸ್ವರದ ದೀರ್ಘ ಉಚ್ಚಾರ ಲಭಿಸುತ್ತದೆ. 'ಇ' 'ಈ' ಇವುಗಳಲ್ಲಿ ಮೊದಲನೆಯದು ಹ್ರಸ್ವ, ಎರಡನೆಯದು ದೀರ್ಘ. ಇವುಗಳ ಉಚ್ಚಾರದ ರೀತಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಆದರೆ ಇವುಗಳ ಉಚ್ಚಾರದ ಸಮಯ ಮಾತ್ರ ಎರಡನೆಯದು ಮೊದಲನೆಯದರ ದುಪ್ಪಟ್ಟು ಇರುವುದು. ಸ್ವರಗಳಲ್ಲಿ ಹ್ರಸ್ವ-ದೀರ್ಘ ವ್ಯತ್ಯಾಸ ಸ್ಪಷ್ಟವಾಗಿರುತ್ತದೆ. ಹ್ರಸ್ವವನ್ನು ಸಾಮಾನ್ಯವಾಗಿ ಎಳೆದು ಉಚ್ಚರಿಸಿದರೆ ದೀರ್ಘವಾಗುತ್ತದೆ. ಕೇವಲ ಸಮಯದ ಅಂತರ ಮಾತ್ರ ಇಲ್ಲಿ ಗಮನಾರ್ಹ. ಅಂತೆಯೇ ದೀರ್ಘ ಸ್ವರಗಳಿಗೆ ಪ್ರತ್ಯೇಕ ಸಂಕೇತಗಳನ್ನು ನೀಡುವ ಅವಶ್ಯಕತೆ ಇಲ್ಲವೆಂದೂ, ದೀರ್ಘಕ್ಕೆ ಯಾವುದಾದರೊಂದು ಸಂಕೇತಕೊಟ್ಟು ಅದನ್ನೇ ಯಾವ ಹ್ರಸ್ವ ಸ್ವರಕ್ಕೂ ಬಳಸಬಹುದೆಂದೂ, ಇದರಿಂದ ವರ್ಣಮಾಲೆಯ ಸಂಖ್ಯೆ ಭೌತಿಕವಾಗಿ ಕಡಿಮೆಯಾಗಿ ಬರವಣಿಗೆ, ಬೆರಳಚ್ಚು ಯಂತ್ರ, ಮುದ್ರಣ ಮುಂತಾದುವಕ್ಕೆ ಅನುಕೂಲವಾಗುವುವೆಂದೂ ಕೆಲವರು ಸೂಚಿಸಿರುವರು. ವ್ಯಂಜನಗಳ ಉಚ್ಚಾರಕ್ಕೆ ಹೆಚ್ಚು ಸಮಯ ಅವು ದ್ವಿತ್ವವಾಗಿದ್ದಾಗ ಬೇಕಾವುದರಿಂದ ಅಂಥವುಗಳನ್ನು ಕೆಲವರು ದೀರ್ಘಗಳೆಂದು ಪರಿಗಣಿಸಿರುವರು.

ಈ ವರೆಗೆ ವಿವರಿಸಿದ ಅವಿಭಾಜಕಗಳು, ಸ್ವರ, ವ್ಯಂಜನಧ್ವನಿಗಳಷ್ಟು ಮಹತ್ವದವು ಅಲ್ಲವಾದರೂ ಭಾಷೆಯಲ್ಲಿ ಅನೇಕ ಸಲ ಇವು ತಮ್ಮ ಮಹತಿಯನ್ನು ತೋರಿಸಬಲ್ಲವು. ಇವುಗಳನ್ನು ಸೀಮಿತ ಧ್ವನಿಮಾಗಳೆಂದೂ ಕೆಲವು ಭಾಷೆಗಳಲ್ಲಿ ಪರಿಗಣಿಸಲಾಗುತ್ತದೆ.

## ಅನುಬಂಧ

### ಆಧುನಿಕ ಧ್ವನಿಶಾಸ್ತ್ರ ಹಾಗೂ ಶಬ್ದಮಣಿದರ್ಪಣ

4.*.1 ಕೇಶಿರಾಜನು ಧ್ವನಿಯ ಹುಟ್ಟುವಿಕೆಯನ್ನು ಪೀಠಿಕಾ ಪ್ರಕರಣದ ೯ನೆಯ ಸೂತ್ರದಲ್ಲಿ ಹೀಗೆ ಹೇಳಿದ್ದಾನೆ—

ಅನುಕೂಲಪವನನಿಂ ಜೀ-
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ

ಈ ಸೂತ್ರದ ಮೇರೆಗೆ ಗಾಳಿಯು ನಾಭಿಯ ಮೂಲದಲ್ಲಿಂದ ಪ್ರಾರಂಭವಾಗುತ್ತದೆ. ಕಹಳೆಯಾಕಾರದಲ್ಲಿ ಹರಿದು ಬಂದು ಧ್ವನ್ಯುತ್ಪಾದನೆಗೆ ಕಾರಣವಾಗುತ್ತದೆ. ಆಧುನಿಕ ಧ್ವನಿಶಾಸ್ತ್ರದ ಮೇರೆಗೆ ಹವೆ ಪುಪ್ಪುಸದ ಮೂಲಕ ಹರಿದುಬರುತ್ತದೆ. ನೇರವಾಗಿ ನಾಭಿಯ ಭಾಗದಿಂದ ಹವೆ ಬರದಿದ್ದರೂ ಉಸಿರಿನ ಚಲನೆಗೆ ತಿದಿಯಂತೆ ಸಹಾಯವನ್ನು ಹೊಟ್ಟೆಯ ನಾಭಿಯ ಭಾಗ ಮಾಡುತ್ತದೆ. ಶಾಸ್ತ್ರೀಯತೆ ಇಲ್ಲಿ ಅಷ್ಟಾಗಿ ಇಲ್ಲದಿದ್ದರೂ ನಾಭಿಯು ಶರೀರದ ಮಧ್ಯ ಹಾಗೂ ಬಹು ಮಹತ್ವದ ಸ್ಥಾನವೆಂಬ ಹಾಗೂ ಉಸಿರಾಟದ ಕಾಲದಲ್ಲಿ ಹೊಟ್ಟೆಯ ಭಾಗವು ಮೇಲೆ ಕೆಳಗೆ ಆಗುವುದರಿಂದ ಗಾಳಿ ಈ ಪ್ರದೇಶದಿಂದಲೇ ಬಂದು ಧ್ವನಿ ಉತ್ಪಾದನೆಗೆ ಕಾರಣವಾಗುತ್ತದೆಂಬ ಭಾವನೆಯಿಂದ ಹೀಗೆ ಹೇಳಿರಬಹುದಾಗಿದೆ. ಸಂಸ್ಕೃತ ವ್ಯಾಕರಣಗಳ ಸಂಪ್ರದಾಯ ಧರಣೆಯಿಂದಲೂ ಕೇಶಿರಾಜ ಹೀಗೆ ಹೇಳಿರಲು ಸಾಕು.

'ಅನುಕೂಲ ಪವನ' ಹಾಗೂ 'ಜೀವನಿಷ್ಟತೆ' ಬಹಳ ಮಹತ್ವದವು. ಗಾಳಿಯು ತನಗೆ ಅನುಕೂಲವಾಗುವಂತೆ ಹಾಯ್ದು ಬರಲು ಅವಕಾಶವಿರಬೇಕು. ಅಂದರೆ ಗಾಳಿಯ ಮಾರ್ಗದಲ್ಲಿ ಯಾವ ಅಂಗಗಳಿಗೂ ಊನವಿರಕೂಡದು. ಕೇವಲ ಗಾಳಿ ಹಾಯ್ದಾಡಿದರೆ ಧ್ವನ್ಯುತ್ಪಾದನೆ ಸಾಧ್ಯವಿಲ್ಲ. ಆಧುನಿಕರು ಹೇಳುವ 'ಪ್ರಯತ್ನ' ಅವಶ್ಯ. ಆ ಪ್ರಯತ್ನವನ್ನೇ ಕೇಶಿರಾಜನು 'ಜೀವನಿಷ್ಟತೆ' ಎಂದಿದ್ದಾನೆ. ಧ್ವನಿಯನ್ನು 'ದ್ರವ್ಯ'ವೆಂದು ಕರೆದಿರುವುದು ಜೈನಧರ್ಮ ಪರಿಭಾಷೆಗನುಗುಣವಾಗಿ ಹೇಳಿರಬಹುದಾದರೂ ಸ್ಥೂಲವಾಗಿ ಅದನ್ನು ಭಾಷೆಗೆ ಅವಶ್ಯಕವಾಗಿರುವ ಮೂಲ ಸರಕು ಎಂದು ಪರಿಗಣಿಸಬಹುದು. ಶಬ್ದವನ್ನು ನಿರ್ಮಿಸುವಲ್ಲಿ ಮೂಲದ್ರವ್ಯ ಅಂದರೆ ಸಾಮಗ್ರಿಯೇ ಧ್ವನಿ ಎಂದು ಅರ್ಥ ಮಾಡಬೇಕು. ಶ್ವೇತ ಧವಳ ಎಂದರೆ ಶುಭ್ರ ಜ್ಞಾನದ ಸಂಕೇತ. ಧ್ವನಿ-ಭಾಷೆ ಅದರಿಂದ ಜ್ಞಾನ ಎಂಬ ಕಲ್ಪನೆ ಇದರಲ್ಲಡಗಿದೆ. ಕೆಲವರು ಶ್ವೇತ ಪದವನ್ನು ಅನಾವಶ್ಯಕವಾಗಿ ಜೈನ ಪರಿಭಾಷೆಗೆ ಅನ್ವಯಿಸಿ ಗೊಂದಲ ಹಿಡಿಸಿದ್ದಾರೆ. ಪೀಠಿಕಾ ಪ್ರಕರಣದ ೯ನೆಯ ಸೂತ್ರದ ಅನಂತರ ಸಂಧಿ ಪ್ರಕರಣದ ೪೪ನೆಯ ಸೂತ್ರದಲ್ಲಿ ಸ್ಥಾನ ಕರಣಗಳ ವಿಚಾರವನ್ನು ಬಹಳ ಸ್ಥೂಲವಾಗಿ ಸೂಚಿಸಿದ್ದಾನೆ.

4.*.2 ತನುವಾದ್ಯಂ ನಾಲ ಗೆ ವಾ-
ದನದಂಡಂ ಕರ್ತೃವಾತ್ಮನವನ ಮನೋವೃ
ತ್ತಿನಿಮಿತ್ತವಾಗಿ ಶಬ್ದಂ
ಜನಿಯಿಸುಗುಂ ಧವಲವರ್ಣಮಕ್ಷರ ರೂಪಂ

ಶರೀರವೆಂಬ ವಾದ್ಯವನ್ನು ನಾಲಗೆಯೆಂಬ ದಂಡದಿಂದ ಬಡಿದರೆ, ಸ್ಪರ್ಶಿಸಿದರೆ ಶಬ್ದ ಜನಿಯಿಸುತ್ತದೆಂಬುದನ್ನು ಹೇಳುವ ಕಲ್ಪನೆ ಸುಂದರವಾಗಿದೆ. 'ಕರ್ತೃವಾತ್ಮನವನ ಮನೋವೃತ್ತಿ' 'ಧವಲವರ್ಣ' ಇವು ಈಗಾಗಲೆ ಹೇಳಿದ ಜೀವನಿಷ್ಟತೆ, ಹಾಗೂ ಶ್ವೇತವರ್ಣದ ವಿಚಾರವನ್ನೇ ಪುನರುಕ್ತಗೊಳಿಸಿವೆ. ನಾಲಗೆಯೇ ಧ್ವನಿಗಳನ್ನು ಹುಟ್ಟಿಸುವಲ್ಲಿ ಪ್ರಮುಖ ಕರಣವೆಂದು ಇಲ್ಲಿ ಸೂಚಿಸಲಾಗಿದೆ.

4*.3ಸಂಧಿ ಪ್ರಕರಣದ ೪ಂನೆಯ ಸೂತ್ರದಲ್ಲಿ ಎಂಟು ಧ್ವನ್ಯಂಗಗಳನ್ನುಹೆಸರಿಸಿದ್ದಾನೆ.

ಕೊರಲುಂ ಜಿಹ್ವಾಮೂಲಮು
ಉರಮುಂ ತಾಳುಗೆಯುಮೋಷ್ಠಮುಂ ನಾಸಿಕೆಯುಂ
ಶಿರಮುಂ ದಂತಮುಮೆಂದ
ಕ್ಕರಮುದಯಿಪ ತಾಣಮಾದುವೀ ಪೇಳ್ದೆಂಟುಂ

ಕಂಠ, ಜಿಹ್ವಾಮೂಲ, ಉರ, ತಾಲು, ಓಷ್ಠಗಳು, ನಾಸಿಕ, ಶಿರ, ದಂತ ಎಂದು ಹೇಳುವಲ್ಲಿ ಒಂದು ವ್ಯವಸ್ಥೆ ಅಷ್ಟಾಗಿ ತೋರುವದಿಲ್ಲ. ಪ್ರಾಯಶಃ ಕೇಶಿರಾಜನು ಹಿಂದಿನ ವೈಯಾಕರಣಿಗಳು ಹೇಳಿದುದನ್ನೇ ಹೇಳಿರುವಂತಿದೆ. ಈ ಎಂಟು ಅಂಗಗಳಲ್ಲಿ ಉರ (ಎದೆ) ಹಾಗೂ ಶಿರ (ತಲೆ) ಇವು ಅಪ್ರತ್ಯಕ್ಷವಾಗಿ ಧ್ವನಿಯ ಹುಟ್ಟಿಗೆ ಕಾರಣೀಭೂತವಾಗುವುದಾದರೂ ನೇರವಾಗಿ ಇವು ಧ್ವನ್ಯಂಗಗಳಲ್ಲಿ ಸೇರುವುದಿಲ್ಲ. ಕಂಠ, ತಾಲು, ನಾಸಿಕ, ದಂತ ಇವು ಸ್ಥಾನಗಳಾಗುತ್ತವೆ. ಜಿಹ್ವಾಮೂಲ, ಓಷ್ಠಗಳು ಕರಣಗಳಾಗುತ್ತವೆ. ಆದರೆ ಈ ಬಗೆಯ ಸ್ಥಾನ—ಕರಣ ವಿವರಣೆಯ ಪ್ರಸ್ತಾಪವಿಲ್ಲಿಲ್ಲ.

4.*.4 ಕೇಶಿರಾಜನು ಕೆಲವು ಧ್ವನಿಗಳ ವರ್ಣನೆಯನ್ನು ಕೆಲವು ಸೂತ್ರ ಹಾಗೂ ವೃತ್ತಿಗಳಲ್ಲಿ ನೀಡಿದ್ದಾನೆ.

ಅತಿ ಪೀಡನದಿಂ ರೇಫಾ
ಶ್ರಿತಮಾದ ಱಕಾರಮುಂ ಸಮಂತು ಡಕಾರಾ
ಶ್ರಿತಮಾದ ಱೞನುಮಂಗೀ
ಕೃತಪದಲತ್ವಕ್ಕೆ ಸಮನೆ ಸಲ್ಲದ ಕುಳನುಂ (೨೮)

ಈ ಸೂತ್ರದ ವೃತ್ತಿ—ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುಗುಂ; ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱೞವೆಸರ ೞಕಾರ ಪುಟ್ಟುಗುಂ; ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಕುಳವೆಸರ ಳಕಾರ ಪುಟ್ಟುಗುಂ; ರೇಫೆ ಮೂರ್ಧನ್ಯಂ, ಱಕಾರಮುದಱಿಕೊಳೀಕಸ್ಥಾನಿ; ಡಕಾರ ಮೂರ್ಧನ್ಯಂ ಱೞನದಱಿಕೊಳೀಕಸ್ಥಾನಿ: ಲಕಾರಂ ದಂತ್ಯಂ, ಕುಳನವಱಿಕೊಳೀಕ ಸ್ಥಾನಿ; ಅದು ಕಾರಣದಿನಿವು ವರ್ಣಾವೃತ್ತಿಗೆ ಸ್ವಲ್ಪವು ಸಂದುಂ ಪ್ರಾಸೆಯಮಕ ಲಕ್ಷಣಕ್ಕಾಗವು.

ಇಲ್ಲಿ ವಿವಾದಾಸ್ಪದಕ್ಕೆಡೆಯಾಗಿರುವ ಱೞ, ಕುಳಗಳನ್ನು ಅತ್ಯಂತ ಸ್ಪಷ್ಟವಾಗಿ ಅವು ಹುಟ್ಟುವ ಸ್ಥಾನ, ಅವುಗಳ ವಿವರಣೆಗಳನ್ನು ನೀಡಿರುವುದನ್ನು ಗಮನಿಸಿದರೆ ಕೇಶಿರಾಜನಿಗೆ ಧ್ವನಿಶಾಸ್ತ್ರದ ಪರಿಚಯ ಎಷ್ಟು ಸ್ಪಷ್ಟವಾಗಿತ್ತೆಂಬುದರ ಕಲ್ಪನೆ ಯಾಗುತ್ತದೆ. ಱೞ ಧ್ವನಿಮಾ ಇಂದು ಇಲ್ಲ. ಕೇಶಿರಾಜನ ಕಾಲಕ್ಕಾಗಲೆ ಅದು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿತ್ತು. ಅಂತೆಯೇ ಅದನ್ನು ಪ್ರತಿಷ್ಠಾಪಿಸಲು ಕೇಶಿರಾಜನು ಹೆಣಗಿದನು. ಅದು ಅವನ ವ್ಯರ್ಥ ಪ್ರಯತ್ನವಾದರೂ ಇದರಿಂದ ಅವನ ಧ್ವನಿಶಾಸ್ತ್ರದ ಪಾಂಡಿತ್ಯದ ಅರಿವು ನಮಗಾಗುವಂತಾದದಕ್ಕೆ ಒಳಿತೇ ಆಯಿತೆನ್ನಬೇಕು.

### 4.*.5 "ಅನುನಾಸಿಕಮುಂ ಯವಲಮನನುನಾಸಿಕಮುಂ ದಲೆಂಬರ್"

ಇಲ್ಲಿ ಯ, ವ, ಲ ಗಳು ಅನುನಾಸಿಕಗಳೂ, ನಿರನುನಾಸಿಕಗಳೂ ಎಂದು ಹೇಳುವಲ್ಲಿ ನಾಸಿಕ್ಯ ಧ್ವನಿಯ ಬಗೆಗೆ ಕೇಶಿರಾಜನಿಗೆ ಸ್ಪಷ್ಟ ತಿಳಿವಳಿಕೆ ಇರುವುದು ಕಾಣುತ್ತದೆ. ೩೯ನೆಯ ಸೂತ್ರದಲ್ಲಿ ಒತ್ತಕ್ಷರದ ಱೞಕ್ಕೆ ಪ್ರತಿಯಾಗಿ ರೇಫೆಯಿಂದ ಕೂಡಿದ ಒತ್ತಕ್ಷರವನ್ನು ಪ್ರಾಸದಲ್ಲಿ ಹಿರಿಯರು ಬಳಸುತ್ತಾರೆ. ಆದರೆ ಆ ಒತ್ತಕ್ಷರದ ರೇಫೆಯನ್ನು ಱೞವಾಗಿ ಉಚ್ಚರಿಸಬಾರದು ಎಂದು ಹೇಳುತ್ತಾನೆ. ೩೮ ನೆಯ ಸೂತ್ರದಲ್ಲಿ ಬೆರಲ್, ಒರಲ್, ಕೊರಲ್, ಸರಲ್, ಪರಲ್, ನರಲ್

ಮುಂತಾದ ಶಬ್ದಗಳಲ್ಲಿರುವ ಲ್ ಕಾರವನ್ನು ಗ್ರಾಮ್ಯರು ಅರಿಯದೆ ಳ್ ಕಾರವನ್ನಾಗಿ ಉಚ್ಚರಿಸುತ್ತಾರೆ. ಅದು ಸರಿಯಲ್ಲವೆನ್ನುತ್ತಾನೆ.

ಹೀಗೆ ಶಬ್ದಮಣಿದರ್ಪಣದಲ್ಲಿ ಅಲ್ಲಲ್ಲಿ ಹರಡಿ ಹೋಗಿರುವ ಧ್ವನಿಶಾಸ್ತ್ರಕ್ಕೆ ಸಂಬಂಧಿಸಿದ ಸೂತ್ರ-ವೃತ್ತಿ ಉದಾಹರಣೆಗಳನ್ನು ಪರಿಶೀಲಿಸಿದರೆ ಕೇಶಿರಾಜನಿಗೆ ಧ್ವನಿಶಾಸ್ತ್ರದ ಕಲ್ಪನೆ ಇತ್ತೆಂದೂ ಪರಂಪರಾಗತ ವ್ಯಾಕರಣ ಪದ್ಧತಿಗನುಗುಣವಾಗಿ ಅವನು ಕನ್ನಡ ವ್ಯಾಕರಣವನ್ನು ರಚಿಸಿದ್ದರಿಂದ ಧ್ವನಿಶಾಸ್ತ್ರಕ್ಕೆ ಅಷ್ಟು ಮಹತ್ವ ಕೊಡದೆ ತನಗೆ ಎಲ್ಲಿ ಹೇಳಬೇಕೆನಿಸುತ್ತದೆಯೋ ಅಲ್ಲಲ್ಲಿ ಆ ವಿಚಾರಗಳನ್ನು ತನಗೆ ತಿಳಿದಂತೆ ವಿವೇಚಿಸಿದ್ದಾನೆ. ಈ ಬಗೆಯ ದೃಷ್ಟಿಕೋನ ಮೆಚ್ಚುವಂತಹುದೇ.

೫

# ಧ್ವನಿಮಾಶಾಸ್ತ್ರ

## 5.1 ಧ್ವನಿಮಾ :

5.1.0 ಮನುಷ್ಯನು ಹಲವಾರು ಬಗೆಯ ಧ್ವನಿಗಳನ್ನು ಮೌಖಿಕವಾಗಿ ಹೊರಡಿಸಬಲ್ಲನೆಂದೂ ಅವುಗಳನ್ನು ಧ್ವನಿಶಾಸ್ತ್ರ ಹೆಚ್ಚಿನಮಟ್ಟಿಗೆ ಖಚಿತವಾಗಿ ವಿವರಿಸುತ್ತದೆಂಬುದನ್ನೂ ಹಿಂದಿನ ಪ್ರಕರಣಗಳಲ್ಲಿ ಗಮನಿಸಿದೆವು. ಮನುಷ್ಯನು ಅಸಂಖ್ಯಾತ ಧ್ವನಿಗಳನ್ನು ಸ್ಥಾನಕರಣ ಪ್ರಯತ್ನಗಳ ಮೂಲಕವಾಗಿ ಹೊರಡಿಸಲು ಶಕ್ತನಾಗಿರುವನಾದರೂ ಒಂದು ನಿರ್ದಿಷ್ಟ ಭಾಷೆ, ಆ ಎಲ್ಲಾ ಧ್ವನಿಗಳನ್ನು ಭಾಷೆಯಲ್ಲಿ ಬಳಸಿಯೇ ತೀರಬೇಕೆಂಬ ನಿಯಮವಿಲ್ಲ. ತಾನು ಹೊರಡಿಸುವ ಧ್ವನಿಗಳಲ್ಲಿ ಕೆಲವು ತನಗೆ ಮಹತ್ವದವು ಎನಿಸಿದವುಗಳನ್ನು ಮಾತ್ರ ಆಯ್ದುಕೊಂಡು ವ್ಯವಸ್ಥಿತವಾಗಿ ಅವು ಬಳಕೆಯಾಗುವಂತೆ ಮನುಷ್ಯನು ತನ್ನ ಭಾಷೆಯಲ್ಲಿ ಅಳವಡಿಸಿಕೊಳ್ಳುತ್ತಾನೆ. ಈ ರೀತಿ ಬಳಸಿಕೊಳ್ಳಲಾಗುವ ಮೂಲ ಧ್ವನಿಘಟಕಗಳು ಪ್ರತಿಯೊಂದು ಉಚ್ಚಾರಣೆಯಲ್ಲಿಯೂ ತಮ್ಮ ಭೌತಗುಣ ಧರ್ಮವನ್ನು ಹೆಚ್ಚು ಕಡಿಮೆ ಹಾಗೆಯೇ ಬಹುಕಾಲದವರೆಗೂ ಉಳಿಸಿಕೊಂಡು ಬರುತ್ತವೆ. ಕೆಲವು ಸಲ ವಿಶಿಷ್ಟ ಕಾರಣಗಳಿಂದಾಗಿ ಅವು ಜನರ ನುಡಿಯಿಂದ ಲೋಪವಾಗಲೂ ಬಹುದು. ಅಥವಾ ಕೆಲವು ಹೊಸದಾಗಿ ಬಂದು ಸೇರ್ಪಡೆಯಾಗಬಹುದು. ಹೀಗೆ ಭಾಷೆಯಲ್ಲಿ ರೂಢಿಗತವಾಗುವ ಮಹತ್ವದ ಮೂಲ ಧ್ವನಿ ಘಟಕಗಳಿಗೆ ನಿರ್ದಿಷ್ಟವಾದ ಸಗೋಚರ [ಕಣ್ಣಿಗೆ ಕಾಣುವ] ರೂಪವನ್ನು ನೀಡಿ ಲಿಪಿಯಲ್ಲಿ ಹಿಡಿದಿಡುತ್ತಾರೆ. ಆದರೆ ಭಾಷೆಯಲ್ಲಿರುವ ಧ್ವನಿಘಟಕಗಳನ್ನು ಲಿಪಿಯಲ್ಲಿ ಹಿಡಿದಿಡಲೇಬೇಕೆಂಬ ನಿಯಮವಿಲ್ಲ. ಲಿಪಿ ಇಲ್ಲದೆಯೂ ಭಾಷೆ ಮುಂದುವರಿಯಬಹುದು.

ಮನುಷ್ಯನು ಭಾಷೆಯಲ್ಲಿ ಬಳಸುವ ಪ್ರತಿಯೊಂದು ಧ್ವನಿಘಟಕಕ್ಕೂ ಲಿಪಿ ಸಂಕೇತ ನೀಡುವುದು, ಪ್ರತಿಯೊಂದು ಧ್ವನಿ ಘಟಕದ ತೀರ ಸೂಕ್ಷ್ಮ ವಿವರಗಳನ್ನೂ ಪರಿಶೀಲಿಸುವುದು, ಭಾಷೆಯ ಅಧ್ಯಯನಕ್ಕೆ ಖಚಿತತೆಯನ್ನು ತಂದುಕೊಡಬಹು

ದಾದರೂ ಇದು ಅತ್ಯಂತ ಶ್ರಮಸಾಧ್ಯವಾದ ಕಾರ್ಯವೇ. ಆದ್ದರಿಂದ ಅಸಂಖ್ಯಾತ ಧ್ವನಿಗಳನ್ನು ಭಾಷೆ ಬಳಸಿಕೊಂಡ ರೀತಿಯಲ್ಲಿ ಸ್ವೀಕರಿಸಿ ಅವುಗಳನ್ನು ಕ್ರಿಯಾತ್ಮಕ ಘಟಕಗಳಲ್ಲಿ ವಿಂಗಡಿಸಿ,ಸುಲಭವಾಗಿ ವ್ಯವಸ್ಥಿತವಾಗಿ ಅಭ್ಯಸಿಸಲು ಅನುಕೂಲವಾಗುವಂತೆ ಕಾಲ್ಪನಿಕವೆನಿಸಿದರೂ, ನಿಜಘಟಕಗಳಿಗೆ ಸಮೀಪ ಎನಿಸುವ ಅಪರಿಮಿತ ಧ್ವನಿ ಸಂಕೇತಗಳನ್ನು ಪರಿಮಿತಕ್ಕೆ ತರುವ, ವಿವರಿಸುವ ಒಂದು ಮಹತ್ವದ ಭಾಗವೇ ಧ್ವನಿಮಾಶಾಸ್ತ್ರವೆನಿಸುತ್ತದೆ. ಧ್ವನಿಶಾಸ್ತ್ರವು ಮನುಷ್ಯನು ಹೊರಡಿಸಬಹುದಾದ ಎಲ್ಲ ಧ್ವನಿಗಳ ಬಗೆಗೂ ವಿವರಣೆ ನೀಡುತ್ತದೆ. ಅದು ಧ್ವನಿಗಳ ಉತ್ಪಾದನೆ, ಅವುಗಳ ಸ್ವರೂಪ, ರಚನೆ ಮುಂತಾದವುಗಳ ಬಗೆಗೆ ಜ್ಞಾನವನ್ನುಂಟುಮಾಡಿಕೊಟ್ಟರೆ ಧ್ವನಿಮಾಶಾಸ್ತ್ರವು ನಿರ್ದಿಷ್ಟವಾಗಿ ಒಂದು ಭಾಷೆಯ ಅಥವಾ ಅನೇಕ ಭಾಷೆಯಲ್ಲಿರುವ ಮಹತ್ವದ ಧ್ವನಿಘಟಕಗಳನ್ನು ಶೋಧಿಸಿ ಕ್ರಮಬದ್ಧವಾಗಿ ವಿವರಿಸಿ ವರ್ಣಮಾಲೆಗೆ ಅನ್ವಯಿಸಿ, ಅಳವಡಿಸಿ ಬರಹಕ್ಕಿಳಿಸುವಲ್ಲಿ ಸಹಾಯಕಾರಿಯಾಗುತ್ತದೆ. ಇದನ್ನು ಇನ್ನೂ ಸ್ಪಷ್ಟಪಡಿಸಬೇಕಾದರೆ ಒಬ್ಬ ವ್ಯಕ್ತಿಗೆ 'ಪ್' ಧ್ವನಿಯನ್ನು ಹಲವು ಸಲ ಉಚ್ಚರಿಸಲು ಹೇಳಿದರೆ ಅವನು ಯಾವಾಗಲೂ 'ಪ್' ಧ್ವನಿಯನ್ನು ಒಂದೆ ರೀತಿಯಲ್ಲಿ ಉಚ್ಚರಿಸುತ್ತಾನೆ ಎನ್ನಲು ಸಾಧ್ಯವಿಲ್ಲ. ಇಂಗ್ಲೀಷ ವ್ಯಕ್ತಿ ಕನಿಷ ಮೂರು ಬಗೆಯ 'ಪ್' ಗಳನ್ನಾದರೂ ಉಚ್ಚರಿಸುತ್ತಾರೆ. pit, spit, tip ಇವುಗಳಲ್ಲಿ ಬರುವ /p/ ಒಂದೇ ಬಗೆಯಾಗಿ ಉಚ್ಚರಿತವಾಗುವುದಿಲ್ಲ. ಮೊದಲನೆಯದು $[p^h]$ ಎರಡನೆಯದು [p], ಮೂರನೆಯದು [p=] ಎಂದು ಉಚ್ಚರಿಸಲ್ಪಡುತ್ತದೆ. ಅದನ್ನು ಧ್ವನಿಶಾಸ್ತ್ರ ವಿವರಿಸುತ್ತದೆ. ಇವೆಲ್ಲವುಗಳ ಪ್ರತಿನಿಧಿಯಾಗಿ /p/ ಒಂದೇ ಧ್ವನಿಮಾಶಾಸ್ತ್ರದಲ್ಲಿ ನಿಲ್ಲುತ್ತದೆ. ಹಾಗೆಯೇ ಕನ್ನಡದಲ್ಲಿ ಡಬ್ಬಿ, ಕಡಿ ಇವುಗಳಲ್ಲಿರುವ [d] ಹಾಗೂ [r] ಧ್ವನಿಶಾಸ್ತ್ರದಲ್ಲಿ ಬೇರೆ ಬೇರೆಯಾಗಿ ವಿವರಿಸಲ್ಪಡುತ್ತವೆ. ಧ್ವನಿಮಾಶಾಸ್ತ್ರ ಇವೆರಡನ್ನು /d/ ಒಂದರಲ್ಲೇ ಪರಿಗಣಿಸುತ್ತದೆ. ಹೀಗೆ ಹಲವು ಸಮೀಪದ ಧ್ವನಿಗಳನ್ನೆಲ್ಲ ಒಂದೊಂದು ಗುಂಪುಮಾಡಿ ಅವುಗಳ ಪ್ರತಿನಿಧಿಗಳನ್ನು ಮಾತ್ರ ಧ್ವನಿಮಾ ವಿಭಾಗದಲ್ಲಿ ಅಭ್ಯಸಿಸಲಾಗುತ್ತದೆ. ಅಪರಿಮಿತ ಧ್ವನಿಗಳನ್ನು ಈ ರೀತಿ ಗುರುತಿಸಿ ವರ್ಗೀಕರಿಸಿ ಅವುಗಳಿಗೆ ಧ್ವನಿಮಾ ಸ್ವರೂಪವನ್ನು ನೀಡಲಾಗುತ್ತದೆ.[೧] ಕಲ್ಪಿಸಲಾಗಿರುವ ಧ್ವನಿಮಾಗಳು ಭಾಷೆಯನ್ನು ವಿವರಿಸಲು ಸುಲಭವಾಗಿ ದಾರಿ ಮಾಡಿಕೊಡುತ್ತವೆ.

೧. ಜಗತ್ತಿನ ಭಾಷೆಗಳಲ್ಲಿ ಅತಿ ಕಡಿಮೆಯೆಂದರೆ ೧೫. ಅತಿ ಹೆಚ್ಚೆಂದರೆ ೬೦ ಇಂತಹ ಧ್ವನಿಮಾ ಸಂಖ್ಯೆಯನ್ನು ಕಾಣಬಹುದೆಂದು ಹೇಳಲಾಗುತ್ತದೆ.

5.1.1 ಧ್ವನಿಯನ್ನು ಪ್ರಾಪನಮಾಡುವಂಥದೇ ಧ್ವನಿಮಾ ಎಂದು ಬಹು ಸ್ಥೂಲವಾಗಿ ಹೇಳಬಹುದು! ಧ್ವನಿಮಾ ಎಂದರೆ ಅರ್ಥವನ್ನು ಹೊಂದಿರದ ಅತಿ ಸಣ್ಣ ಧ್ವನಿಘಟಕ. 'ನಡಿ' ಎಂಬ ಉಚ್ಚಾರದಲ್ಲಿ ನ್+ಅ+ಡ್+ಇ ಎಂಬ ನಾಲ್ಕು ಧ್ವನಿಘಟಕಗಳು ಒಂದರ ನಂತರ ಒಂದು ಕ್ರಮವಾಗಿ ಉಚ್ಚರಿಸಲ್ಪಡುತ್ತವೆ. ಈ ನಾಲ್ಕೂ ಧ್ವನಿಘಟಕಗಳನ್ನು ಇನ್ನೂ ಮುಂದೆ ವಿಭಾಗಿಸಲು ಬರುವುದಿಲ್ಲ. ಅಂತೆಯೇ ಅತಿ ಸಣ್ಣ ಘಟಕಗಳು ಎನಿಸುತ್ತವೆ. 'ಸ್ತ್ರೀ' ಎಂಬ ಉಚ್ಚಾರದಲ್ಲಿ ಸ್+ತ್+ರ್+ಈ ಎಂಬ ನಾಲ್ಕು ಅತಿ ಸಣ್ಣ ಧ್ವನಿ ಘಟಕಗಳಿವೆ. ಹೀಗೆ ಒಂದೊಂದು ಶಬ್ದೋಚ್ಚಾರದಲ್ಲೂ ಒಂದು ಅಥವಾ ಅದಕ್ಕಿಂತ ಹೆಚ್ಚು ಧ್ವನಿಘಟಕಗಳು ಇರಬಹುದು. ಆದರೆ ಉಚ್ಚಾರದಲ್ಲಿದ್ದ ಎಲ್ಲ ಅತಿ ಸಣ್ಣ ಧ್ವನಿಘಟಕಗಳನ್ನೂ ಧ್ವನಿಮಾ ಎಂದು ಹೇಳಲಾಗುವುದಿಲ್ಲ, ಧ್ವನಿಮಾ ಕೇವಲ ಧ್ವನಿಯಲ್ಲ. ಅದು ಧ್ವನಿಸಾಮ್ಯತೆ ಹೊಂದಿರುವ ಒಂದೇ ಬಗೆಯ ಧ್ವನಿಗಳ ವರ್ಗ ಪ್ರತಿನಿಧಿಯಾಗಿರುತ್ತದೆ. ಧ್ವನ್ಯಾತ್ಮಕವಾಗಿ ಪರಸ್ಪರ ಹೋಲುವ ಧ್ವನಿಗಳ ಪ್ರತಿನಿಧಿಯಾಗಿ ನಿಲ್ಲುವ ವಿರೋಧ ಪ್ರಸಾರದಲ್ಲಿರುವ ಅರ್ಥರಹಿತ ಅತಿ ಸಣ್ಣ ಉಚ್ಚಾರದ ವಿಶಿಷ್ಟ ಧ್ವನಿ ಘಟಕವೇ–ಧ್ವನಿಮಾ. **Phoneme is a class of Phonetilcally similar sounds, contrasting and mutually exclu-sive with all similar classes in the language. [Block & Trager]** ಈ ಹಿಂದೆ ನೋಡಿದಂತೆ ಇಂಗ್ಲೀಷನಲ್ಲಿ [P]ಮೂರು ಬಗೆಯಲ್ಲಿ[ಶಬ್ದಾರಂಭ,ಶಬ್ದಮಧ್ಯ ಹಾಗೂ ಶಬ್ದಾಂತ್ಯ]ಉಚ್ಚರಿತವಾಗುತ್ತಿದ್ದರೂ ಅವೆಲ್ಲವುಗಳ ಪ್ರತಿನಿಧಿಯಾಗಿ ಕೇವಲ ಒಂದೆ /P/ ಯನ್ನು ಧ್ವನಿಮಾ ಎಂದು ಪರಿಗಣಿಸಲಾಗುವುದು. ಹೀಗೆಯೇ ನೂರಾರೂ ರೀತಿಯಲ್ಲಿ ಅದರ ಉಚ್ಚಾರಣೆ ಇದ್ದರೂ ಅವೆಲ್ಲವುಗಳ ಪ್ರತಿನಿಧಿ ಮಾತ್ರ ಧ್ವನಿಮಾ ಆಗಬಲ್ಲದು. ಕನ್ನಡದಲ್ಲಿ ಕಿಸೆ, ಕುಳ್ಳ, ಕಲ್ಲು ಈ ಶಬ್ದಗಳಲ್ಲಿರುವು [ಕ್] ಧ್ವನಿಯು ಒಂದೇ ಬಗೆಯಲ್ಲಿ ಉಚ್ಚರಿತವಾಗುವುದಿಲ್ಲವೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ತಿಳಿದುಬರುತ್ತದೆ. ಆದರೂ ಅರ್ಥ ಬದಲಾವಣೆ ಇತ್ಯಾದಿ ಯಾವ ವೈಶಿಷ್ಟ್ಯವನ್ನೂ ಈ ಧ್ವನಿಭೇದವು ಉಂಟುಮಾಡುವುದಿಲ್ಲವಾದ್ದರಿಂದ ಅದು ಅಷ್ಟು ಮಹತ್ವದ್ದಲ್ಲ. ಭಾಷಿಕವಾಗಿ ಮಹತ್ವದ್ದಲ್ಲದ ಇಂತಹ ಹಲವು ಬಗೆಯ [ಕ್]ಗಳ ಪ್ರತಿನಿಧಿಯಾಗಿ /ಕ್/ ನಿಲ್ಲುತ್ತದೆ. [ಧ್ವನಿಯನ್ನು ಸೂಚಿಸಲು [ ] ಕಂಸನ್ನೂ ಧ್ವನಿಮಾವನ್ನು ಸೂಚಿಸಲು / / ಚಿಹ್ನೆಯನ್ನೂ ಬಳಸಲಾಗುತ್ತದೆ.] ಧ್ವನಿಮಾದ ಇತರ ಕೆಲವು ವ್ಯಾಖ್ಯೆಗಳು ಹೀಗಿವೆ.

1. A phoneme is a minimum unit of distinctitve sound feature. (ಬ್ಲೂಮ್ ಫೀಲ್ಡ್)

2. A phoneme is a class of sounds in a given Language which are related in character and are used in such a way that no one member ever occurs in a word in the same phonetic context as any other member (ಡೇನಿಯಲ್ ಜೋನ್ಸ್)

ಧ್ವನಿಮಾವನ್ನು ಸ್ಪಷ್ಟವಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಅವುಗಳ ಪರಿಸರ ಮತ್ತು ಪ್ರಸಾರಕ್ಕೆ ಸಂಬಂಧಿಸಿದ ಒಂದೆರಡು ಅಂಶಗಳನ್ನು ತಿಳಿದುಕೊಳ್ಳುವುದ ಅವಶ್ಯ.

5.1.1.1 ನೀರು ಎಂಬ ಉಚ್ಚಾರದಲ್ಲಿ ನ್+ಈ+ರ್+ಉ ಎಂಬ ನಾಲ್ಕು ಧ್ವನಿಮಾಗಳಿವೆ. ಇವುಗಳಲ್ಲಿ / ಈ / ದ ಪರಿಸರವನ್ನು ನ್–ರ್ ಎಂದು ಹೇಳ ಬಹುದು. ಅಂದರೆ / ನ್ / ದ ಮುಂದೆ / ರ್ / ದ ಹಿಂದೆ / ಈ / ಬರುತ್ತ ದೆಂದಾಯಿತು. ಹೀಗೆಯೇ / ಉ / ದ ಪರಿಸರವನ್ನು ರ್–✳. (✳ ಚಿಹ್ನೆ ಯನ್ನು ಮೌನಕ್ಕೆ ಬಳಸಲಾಗುತ್ತದೆ) ಎಂದೂ / ನ್ /ದ ಪರಿಸರವನ್ನು ✳– ಎಂದೂ ಸೂಚಿಸಬಹುದು. ಈ ರೀತಿ ವ್ಯಂಜನಗಳು, ಸ್ವರಗಳು ಯಾವುದರ ಅನಂತರ ಯಾವುದು, ಯಾವುದರ ಹಿಂದೆ ಯಾವುದು ಬರುತ್ತವೆಂಬುದನ್ನು ವಿವರ ವಾಗಿ ಪರಿಶೀಲಿಸಬಹುದು. ಕನ್ನಡ ಭಾಷೆಯಲ್ಲಿ 'ರ್' ವ್ಯಂಜನವು ಯಾವ ಯಾವ ಪರಿಸರಗಳಲ್ಲಿ ಬರುತ್ತದೆ ಎಂಬುವನ್ನು ಪರಿಶೀಲಿಸಿಪವೆ :

೧. ಸ್ವರ–ಸ್ವರ. ೨. ಸ್ವರ–ವ್ಯಂಜನ ೩. ವ್ಯಂಜನ–ಸ್ವರ ೪. ✳–ಸ್ವರ ೫. ✳—ಹೀಗೆ ಐದು ಬಗೆಯ ಪರಿಸರಗಳಲ್ಲಿ ಮಾತ್ರ ಬರುತ್ತ ದೆಂಬುದನ್ನು ಮನಗಾಣಬಹುದು. /ರ್/ ದ ಮುಂದೆ, ಹಿಂದೆ ಯಾವ ಸ್ವರ ವ್ಯಂಜನಗಳು ಬರಬಹುದೆಂಬುದನ್ನು ಸೂಚಿಸಬಹುದು. ಈ ರೀತಿ 'ರ್' ಕಾರದ ಎಲ್ಲ ಪರಿಸರಗಳನ್ನು ಒಟ್ಟಾಗಿ ಪರಿಗಣಿಸಿ ಅದು 'ರ್' ಕಾರದ ಪ್ರಸಾರ ಎಂದು ವರ್ಣಿಸುತ್ತಾರೆ. ಪ್ರತಿಯೊಂದು ವರ್ಣ, ಪ್ರತ್ಯಯ, ಧಾತು ಮುಂತಾದುವುಗಳಿಗೆಲ್ಲ ಒಂದೊಂದು ಪ್ರಸಾರ ಇದ್ದೇ ಇರುತ್ತದೆ. ಆದರೆ ಎಲ್ಲ ಉಚ್ಚಾರಘಟಕ ಅಥವಾ ಘಟಕಗಳಿಗೂ ಒಂದೇ ಬಗೆಯ ಪರಿಸರ ಇರಬಹುದು ಇಲ್ಲವೆ ಇರಲಿಕ್ಕಿಲ್ಲ. ಒಂದೇ

ಬಗೆಯ ಪರಿಸರದಲ್ಲಿ ಬಾರದ ಘಟಕಗಳು ವಿಶಿಷ್ಟ ಪರಿಸರದಲ್ಲಿ ಮಾತ್ರ ಬರುತ್ತಿರಬಹುದು. ಅಂದರೆ ಒಂದು ಘಟಕ ಬರುವ ಒಂದು ನಿರ್ದಿಷ್ಟ ಪರಿಸರದಲ್ಲಿ ಮತ್ತೊಂದು ಘಟಕ ಬರುವುದಿಲ್ಲ. ಹೀಗಿರುವುದಕ್ಕೆ ವ್ಯಾವರ್ತಕ ಪರಿಸರವೆನ್ನುತ್ತಾರೆ. ಪರಸ್ಪರ ವ್ಯಾವರ್ತಕ ಪರಿಸರದಲ್ಲಿ ಬಳಕೆಗೊಳ್ಳುವ ಘಟಕಗಳು ಪೂರಕ ಪ್ರಸಾರದಲ್ಲಿವೆ ಎಂದು ವಿವರಿಸಬಹುದು. ಉದಾಹರಣೆಗೆ ಕನ್ನಡದಲ್ಲಿ ಈ ಶಬ್ದಗಳನ್ನು ಗಮನಿಸಿ–

I ಅತ್ತೆಯಂದಿರು,, ತಂಗಿಯಂದಿರು, ಅಕ್ಕಂದಿರು, ಅಣ್ಣಂದಿರು, ತಮ್ಮಂದಿರು.

II ಗಿಡಗಳು, ಕಲ್ಲುಗಳು, ಕುರ್ಚಿಗಳು, ಹಣ್ಣುಗಳು,ಕುರಿಗಳು.

III ಕರಿಯರು, ಬಿಳಿಯರು, ಜಾಣೆಯರು.

ಇಲ್ಲಿ I ಗುಂಪಿನಲ್ಲಿ 'ಅಂದಿರು', I ಗುಂಪಿನಲ್ಲಿ 'ಗಳು', III ಗುಂಪಿನಲ್ಲಿ 'ಅರು' ಎಂಬ ಬಹುವಚನ ಪ್ರತ್ಯಯಗಳು ಬಳಕೆಯಾಗಿವೆ. ಕೆಲವು ವಿಶಿಷ್ಟ ಶಬ್ದಗಳನ್ನು ಬಿಟ್ಟರೆ ಸಾಮಾನ್ಯವಾಗಿ I ಗುಂಪಿನ ಶಬ್ದಗಳಿಗೆ ಅಂದಿರು, ಬಿಟ್ಟು, ಗಳು, ಅರು ಪ್ರತ್ಯಯಗಳನ್ನಾಗಲಿ, IIನೆಯ ಗುಂಪಿನ ಶಬ್ದಗಳಿಗೆ ಅಂದಿರು, ಅರು ಪ್ರತ್ಯಯಗಳನ್ನಾಗಲಿ, III ನೆಯ ಗುಂಪಿನ ಶಬ್ದಗಳಿಗೆ ಗಳು, ಅಂದಿರು ಪ್ರತ್ಯಯಗಳನ್ನಾಗಲಿ ಅನ್ವಯಿಸಲು ಬರುವುದಿಲ್ಲ. ಆದರೂ ಇವೆಲ್ಲವೂ ಬಹುವಚನವನ್ನು ಸೂಚಿಸುವಲ್ಲಿ ಮಾತ್ರ ಬಳಕೆಗೊಂಡಿವೆ. ಒಂದೇ ಬಗೆಯ ಅರ್ಥವನ್ನು ಸೂಚಿಸುವ ಭಿನ್ನ ಭಿನ್ನ ರೂಪಗಳನ್ನು ಹೊಂದಿರುವ (ಈ ಅರ್ಥದಲ್ಲಿ ಇವುಗಳ ವ್ಯತ್ಯಾಸಗಳಿಗೆ ಬೆಲೆಯಿಲ್ಲ) ಈ ಘಟಕಗಳು ಪೂರಕ ಪ್ರಸಾರವಲ್ಲಿವೆಯೆನ್ನಬಹುದು. ಈ ಎಲ್ಲ ಪ್ರತ್ಯಯಗಳು ಪರಸ್ಪರ ಪೂರಕವಾಗಿ ನಿಂತು, ಕನ್ನಡ ಬಹುವಚನದ ಪೂರ್ಣತೆಯನ್ನುಂಟುಮಾಡುತ್ತವೆ. ಅದನ್ನೇ ಕೋಷ್ಟಕದಲ್ಲಿ ಹೀಗೆ ಕಾಣಿಸಬಹುದು.

| | ಸಂಬಂಧವಾಚಿಗಳಲ್ಲಿ | ಅಮಹತ್ವರ್ಗದ ಶಬ್ದಗಳಲ್ಲಿ | ಇತರೆಡೆಗಳಲ್ಲಿ |
|---|---|---|---|
| ಅಂದಿರು | ✓ | | |
| ಗಳು | | ✓ | |
| ಅರು | | | ✓ |

ಇನ್ನೊಂದು ಉದಾಹರಣೆಯಿಂದ ಪೂರಕ ಪ್ರಸಾರದ ವಿಚಾರವನ್ನು ಸ್ಪಷ್ಟಪಡಿಸಬಹುದು. ಕನ್ನಡದಲ್ಲಿ ಅನುನಾಸಿಕಗಳಿಂದೊಡಗೂಡಿದ ಶಬ್ದಗಳನ್ನು ಗಮನಿಸಿರಿ. ಅಂತೆ, ತಂದೆ, ಅಂಚೆ, ಮುಂಜು, ಅಂಕ, ಅಂಗಿ, ಅಂಟು, ಉಂಡಿ, ತುಂಬು–ಇವುಗಳ ಉಚ್ಚಾರದಲ್ಲಿರುವ ಧ್ವನಿಗಳ ಅನುಸಾರ ಅವುಗಳನ್ನು ಹೀಗೆ ಬರೆಯಬಹುದು.–

ಅನ್ತ್ಎ, ತ್ಅನ್ದ್ಎ, ಅಞ್ಚ್ಎ, ಮುಞ್ಜ್ಉ, ಅಙ್ಕ್ಅ, ಅಙ್ಗ್ಇ, ಅಣ್ಟ್ಉ, ಉಣ್ಡ್ಇ, ತ್ಉಮ್ಬ್ಉ, ಈ ಉಚ್ಚಾಗಳಲ್ಲಿ ನ್, ಞ್ ಙ್, ಣ್, ಮ್. ಅನುನಾಸಿಕಗಳು ಉಚ್ಚಾರವಾಗುತ್ತಿದ್ದರೂ ಅವೆಲ್ಲಕ್ಕೂ ಸೊನ್ನೆ (ಂ) ಯನ್ನು ಲಿಪಿ ಸಂಕೇತವಾಗಿ ಬಳಸಲಾಗುವುದು. ಸ್ವಲ್ಪ ಗಮನವಿಟ್ಟು ನೋಡಿದರೆ ಈ ಐದು ಅನುನಾಸಿಕಗಳು ಒಂದೊಂದು ನಿರ್ದಿಷ್ಟ ಪರಿಸರದಲ್ಲಿ ಮಾತ್ರ ಬರುವುದನ್ನೂ ಒಂದರ ಸ್ಥಳದಲ್ಲಿ ಮತ್ತೊಂದು ಬರದೆ ಇರುವುದನ್ನೂ ಮನಗಾಣಬಹುದು. ತನ್ನ ಮುಂದೆ ಬರುವ ವರ್ಗೀಯ ವ್ಯಂಜನವನ್ನು ಅನುಸರಿಸಿ ಅದೇ ವರ್ಗದ ಅನುನಾಸಿಕ ಬರುತ್ತದೆ. ಅಂದರೆ ತ್ ಥ್ ದ್ ಧ್ ಇವುಗಳ ಹಿಂದೆ 'ನ್'; ಚ್ ಛ್ ಜ್ ಝ್ ಇವುಗಳ ಹಿಂದೆ 'ಞ್'; ಟ್, ಠ್, ಡ್, ಢ್ ಇವುಗಳ ಹಿಂದೆ ಣ್,; ಕ್, ಖ್, ಗ್, ಘ್ ಇವುಗಳ ಹಿಂದೆ 'ಙ್' ಹಾಗೂ ಪ್, ಫ್, ಬ್, ಭ್ ಇವುಗಳ ಹಿಂದೆ 'ಮ್' ನಿಶ್ಚಿತವಾಗಿ ಬರುತ್ತದೆ.೧ ಇದನ್ನು ಕೋಷ್ಟಕರೂಪದಲ್ಲಿ ಹೀಗೆ ತೋರಿಸಬಹುದು.

| | ಕ್ ವರ್ಗ, | ಚ್ ವರ್ಗ, | ಟ್ ವರ್ಗ, | ತ್ ವರ್ಗ, | ಪ್ ವರ್ಗ |
|---|---|---|---|---|---|
| ಙ್ (ಕಂಠ್ಯ) | ✓ | | | | |
| ಞ್ (ತಾಲವ್ಯ) | | ✓ | | | |
| ಣ್ (ಮೂರ್ಧನ್ಯ) | | | ✓ | | |
| ನ್ (ದಂತ್ಯ) | | | | ✓ | |
| ಮ್ (ಉಭಯೋಷ್ಠ್ಯ) | | | | | ✓ |

೧ ಹೀಗೆ ಈ ಐದೂ ಅನುನಾಸಿಕಗಳು ಪರಸ್ಪರ ವ್ಯಾಯವರ್ತಕ ಪರಿಸರದಲ್ಲಿ ಬರುತ್ತವೆ. ಇವುಗಳ ಒಟ್ಟು ಪ್ರಸಾರವನ್ನು ಪೂರಕ ಪ್ರಸಾರವೆಂದು ವರ್ಣಿಸಬಹುದು. ಅವರ್ಗೀಯ ವ್ಯಂಜನಗಳಾದ ಯ್,ರ್, ಲ್,ವ್, ಶ್,ಸ್, ಹ್, ಇವುಗಳ ಹಿಂದೆ ಬರುವ ಅನುನಾಸಿಕಗಳ ಉಚ್ಚಾರ ಈ ಮೇಲಿನ ಐದು ಅನುನಾಸಿಕಗಳ ಉಚ್ಚಾರದಂತೆ ಇಲ್ಲ. ಅದನ್ನು ಸಂಸ್ಕೃತ ವ್ಯಾಕರಣಗಳಲ್ಲಿ ಅನುಸ್ವಾರವೆನ್ನುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಅನುಸ್ವಾರವಿಲ್ಲ. ಕನ್ನಡವೂ ಅದಕ್ಕೆ ಹೊರತಾಗಿಲ್ಲ. ಆದ್ದರಿಂದ ಅನುಸ್ವಾರವನ್ನಿಲ್ಲಿ ಪರಿಗಣಿಸಿಲ್ಲ. ಕನಡದಲ್ಲಿ ಬಿಂದುವಿನ ಸ್ವರೂಪ ವಿವರಣೆಯಲ್ಲಿ (ನೋಡಿ ೫.೨-೭) ಈ ಬಗ್ಗೆ ವಿವರಿಸಲಾಗಿದೆ.

| | II | ಸ್ವ–ಸ್ವ | ದ್ವಿತ್ವ | ಅನುನಾಸಿಕ ದೊಡನೆ |
|---|---|---|---|---|
| 1. ಸ್ಪರ್ಶ ಡ್ ಕಾರ | √ | — | √ | √ |
| 2. ತಾಡಿತ ಡ್ ಕಾರ | — | √ | — | — |

1+2=ಪ್ರಸಾರ

**5.1.1.2.** ಈ ವರೆಗಿನ ವಿವರಣೆಯಿಂದ ಧ್ವನಿಘಟಕಗಳು ಒಂದೇ ಪರಿಸರದಲ್ಲಿ ಬರಬಹುದು. ಇಲ್ಲವೆ ಪರಸ್ಪರ ವ್ಯಾವರ್ತಕ ಪರಿಸರದಲ್ಲಿ ಬರಬಹುದು ಎಂಬುದನ್ನು ಕಂಡುಕೊಳ್ಳಲಾಯಿತು. ಹೀಗೆ ಬಳಕೆಗೊಳ್ಳುವ ಘಟಕಗಳು ಅರ್ಥಭೇದವನ್ನುಂಟು ಮಾಡಬಹುದು. ಅಥವಾ ಮಾಡದೇ ಇರಲೂಬಹುದು. ಅರ್ಥಭೇದ ಸಾಮರ್ಥ್ಯದ ಮೇಲೆ ಎರಡು ಬಗೆಯ ಪ್ರಸಾರಗಳನ್ನು ಗುರುತಿಸಬಹುದಾಗಿದೆ.

೧. **ವಿರೋಧ ಪ್ರಸಾರ** ೨. **ವೈಕಲ್ಪಿಕ ಪ್ರಸಾರ**

ವಿರೋಧ ಪ್ರಸಾರದಲ್ಲಿರುವ ಧ್ವನಿಘಟಕಗಳೆಂದರೆ ಒಂದೇ ಪರಿಸರದಲ್ಲಿದ್ದು ಅರ್ಥಭಿನ್ನತೆಯನ್ನುಂಟುಮಾಡುವ ಘಟಕಗಳು.

ಉದಾ : ಕ್+ಎ ರ್ ಎ → ಕೆರೆ; ಗ್+ಎ, ರ್+ಎ → ಗೆರೆ

ಇಲ್ಲಿ /ಕ್/ ಹಾಗೂ /ಗ್/ ಧ್ವನಿಘಟಕಗಳು ಒಂದೇ ಪರಿಸರದಲ್ಲಿದ್ದು ಕೇವಲ ಈ ಎರಡು ಕಾರಣವಾಗಿಯೆ ಬೇರೆ ಬೇರೆ ಅರ್ಥವುಳ್ಳ ಎರಡು ಶಬ್ದಗಳು ನಿರ್ಮಾಣವಾಗಿವೆ. ಅವು ವಿರೋಧ ಪ್ರಸಾರದಲ್ಲಿವೆ. ಅಂತೆಯೇ ಅವುಗಳನ್ನು ಸ್ವತಂತ್ರ ಧ್ವನಿಮಾ ಎಂದು ಪರಿಗಣಿಸಬಹುದಾಗಿದೆ. ಒಂದೇ ಪರಿಸರವನ್ನು ಉಳ್ಳ ಉಚ್ಚಾರಣೆಯ ಘಟಕಗಳ ಎರಡು ಪದಗಳ ಗುಂಪನ್ನು ಅಥವಾ ಯುಗ್ಮವನ್ನು ಕನಿಷ್ಠತಮಯುಗ್ಮ [Minimal pair]ಎನ್ನುತ್ತಾರೆ. ಧ್ವನಿಮಾಗಳನ್ನು ನಿರ್ಧರಿಸಲು ಬಲು ಸುಲಭವೂ ಖಚಿತವೂ ಆದ ಕನಿಷ್ಠಯುಗ್ಮಗಳನ್ನು ಗುರುತಿಸುವುದು ಭಾಷಾ ವಿಜ್ಞಾನದಲ್ಲಿ ಬಹು ಮುಖ್ಯ ಅಂಶವಾಗಿದೆ. ಕನಿಷ್ಠತಮಯುಗ್ಮಗಳಲ್ಲಿ ತೀರ ಸಮೀಪವಿರುವ ಬೇರೆ ಬೇರೆ ಧ್ವನಿಘಟಕಗಳನ್ನು ಮಾತ್ರ ವಿವಕ್ಷೆಗೆ ಎತ್ತಿಕೊಳ್ಳಲಾಗುತ್ತದೆ. ಮೇಲಿನ ಉದಾಹರಣೆಯಲ್ಲಿ /ಕ್/ /ಗ್/ ಗಳನ್ನು ಆಯ್ದುಕೊಂಡಿದ್ದು ಇದೇ ಉದ್ದೇಶದಿಂದಲೇ. ಏಕೆಂದರೆ (ಕ್) ಹಾಗೂ (ಗ್) ಇವು ಕೇವಲ ಘೋಷತ್ವದಲ್ಲಿ ಮಾತ್ರ ಭಿನ್ನವಾಗಿವೆ. ಘೋಷತ್ವದ ಅಂಶವನ್ನು ಬಿಟ್ಟರೆ

ಇವು ಒಂದೇ ಸ್ಥಾನಕರಣದಲ್ಲಿ ಹುಟ್ಟುತ್ತವೆ. ಕುಡಿ–ಪುಡಿ ಎಂಬ ಯುಗ್ಮವನ್ನು ಏಕೆ ಆಯ್ದುಕೊಳ್ಳಬಾರದು ? ಎಂದು ಕೇಳಿದರೆ [ಕ್], [ಪ್] ಗಳಲ್ಲಿ ಧ್ವನಿ ಸಾಮ್ಯತೆ ಇಲ್ಲವೆಂದೇ ಉತ್ತರಿಸಬೇಕಾಗುತ್ತದೆ. /ಪ್/ ಧ್ವನಿಮಾ ನಿರ್ಧರಿಸ ಬೇಕಾದರೆ ಅದಕ್ಕೆ ಸಮೀಪದ /ಬ್/ ವನ್ನು ಕನಿಷ್ಠತಮ ಯುಗ್ಮದಲ್ಲಿ ಆಯ್ದು ಕೊಳ್ಳುವುದು ಸೂಕ್ತವಾಗಿದೆ. ಕನಿಷ್ಠತಮ ವೈದೃಶ್ಯ (contrast) ಇರುವ ಉಚ್ಚಾರಣೆಗಳ ಯುಗ್ಮವೇ ಕನಿಷ್ಠತಮಯುಗ್ಮ. ಕನಿಷ್ಠತಮಯುಗ್ಮದಲ್ಲಿ ಬರುವ ವಿವಕ್ಷೆಯಲ್ಲಿರುವ ಘಟಕಗಳು ವಿರೋಧ ಪ್ರಸಾರದಲ್ಲಿರುತ್ತವೆ. ಕನಿಷ್ಠತಮಯುಗ್ಮ ಧ್ವನಿಮಾಗಳನ್ನು ನಿರ್ಧರಿಸುವ ಅತ್ಯಂತ ಖಚಿತವಾದ ಆಧಾರವಾಗಿದೆ.

5.1.1.3 ಒಮ್ಮೊಮ್ಮೆ ಕೆಲವು ಧ್ವನಿಮಾಗಳನ್ನು ನಿರ್ಧರಿಸಲು ಕನಿಷ್ಠತಮಯುಗ್ಮ ಗಳು ಸಿಗದೇ ಹೋಗಬಹುದು. ಆಗ ಕನಿಷ್ಠತಮಕ್ಕಿಂತ ಸ್ವಲ್ಪ ಹೆಚ್ಚು ವ್ಯತ್ಯಾಸ ವುಳ್ಳ ಯುಗ್ಮಗಳನ್ನು ಆಯ್ದುಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಸ್ವಲ್ಪಮಟ್ಟಿಗೆ ಸಂದಿಗ್ಧತೆ ಕಾಣುವುದರಿಂದ ಇವುಗಳನ್ನು ಸಂದಿಗ್ಧಯುಗ್ಮ (Suspicious pair) ಎಂದೇ ಕರೆಯುತ್ತಾರೆ. ಕನಿಷ್ಠತಮಯುಗ್ಮಕ್ಕೆ ಸಮೀಪವಿರುವುದರಿಂದ ಸಾಮಿಪ್ಯ ಕನಿಷ್ಠತಮಯುಗ್ಮವೆಂದೂ ಇವುಗಳನ್ನು ಹೆಸರಿಸುತ್ತಾರೆ. ಇಂಥ ಯುಗ್ಮದಲ್ಲಿನ ಸಂದಿಗ್ಧತೆಯನ್ನು ನಿವಾರಣೆ ಮಾಡಿಕೊಂಡಾಗ ಮಾತ್ರ ಧ್ವನಿಮಾಗಳನ್ನು ಸ್ವತಂತ್ರ ಎಂದು ನಿರ್ಧರಿಸುವುದಕ್ಕಾಗುತ್ತದೆ. ಉದಾಹರಣೆಗೆ ಕನ್ನಡದಲ್ಲಿ /ಚ್/ ಹಾಗೂ /ಜ್/ ಗಳಿಗೆ ಕನಿಷ್ಠತಮಯುಗ್ಮ ದೊರೆಯಲಿಲ್ಲ ಎಂದಿಟ್ಟುಕೊಳ್ಳೋಣ. ಆಗ ಸಂದಿಗ್ಧಯುಗ್ಮಗಳನ್ನಾದರೂ ಹುಡುಕಬೇಕು—

ಚ್+ಎ+ಣ್+ಡ್+ಉ—ಚೆಂಡು; ಜ್+ಒ+ಣ್+ಡ್+ಉ—ಜೊಂಡು

ಈ ಯುಗ್ಮದಲ್ಲಿ [ಚ್], [ಜ್] ಅಲ್ಲದೆ [ಎ] [ಒ] ಇವುಗಳ ಭಿನ್ನತೆಯೂ ಇದೆ. ಆದ್ದರಿಂದ ಇದು ಕನಿಷ್ಠತಮಯುಗ್ಮವಲ್ಲ. ಸಂದಿಗ್ಧಯುಗ್ಮ, ಇಲ್ಲಿ ಸಂದಿಗ್ಧತೆ ಇರುವುದು ಎಲ್ಲಿ ? [ಎ] ಸ್ವರದ ಕಾರಣವಾಗಿಯೇ [ಚ್] ಉಚ್ಚರಿತವಾಗು ತ್ತವೆಯೋ ? ಹಾಗೆಯೇ [ಒ] ಸ್ವರದ ಕಾರಣವಾಗಿಯೇನಾದರೂ [ಜ್] ಬಂದಿದೆಯೇ ? ಎಂಬುದರಲ್ಲಿ ಸಂದಿಗ್ಧತೆಯಿದೆ. ಇದನ್ನು ನಿವಾರಿಸಿಕೊಳ್ಳಲು ಬೇರೆ ಇದೇ ತರದ ಪರಿಸರವುಳ್ಳ ಯುಗ್ಮಗಳನ್ನು ಪರಿಶೀಲಿಸಬೇಕು. ಕ್+ಒ+ಣ್+ ಡ್+ಉ ಕೊಂಡು, ಬ್+ಎ+ಣ್+ಡ್+ಉ—ಬೆಂಡು. ಈ ಯುಗ್ಮಗಳಲ್ಲಿ [ಕ್] [ಬ್] ಧ್ವನಿ ಘಟಕಗಳು ಒ, ಎ ಬಂದಾಗಲೂ ಯಾವ ಬದಲಾವಣೆಗೊಳಪಟ್ಟಿಲ್ಲ.

ಹಾಗೆಯೇ ಚೀರಿ, ಜೋಳ್ಳು, ಜೊಂಬು, ಜೇಡ, ಜೆಲ್ಲಿ, ಚೋಟು ಇಂತಹ ಹಲವಾರು ಉದಾಹರಣೆಗಳನ್ನು ಗಮನಿಸಿದಾಗ ಎ ಇಲ್ಲವೆ ಒ ಸ್ವರಗಳು [ಚ್] [ಜ್] ಇವುಗಳ ಮೇಲೆ ಯಾವ ಪ್ರಭಾವವನ್ನು ಮಾಡುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆಗ ಸಂದಿಗ್ಧತೆ ದೂರವಾಗುತ್ತದೆ. /ಚ್/ ಹಾಗೂ /ಜ್/ ಸ್ವತಂತ್ರ ಧ್ವನಿಮಾ ಎಂಬುದು ಸಿದ್ಧವಾಗುತ್ತದೆ.

**5.1.1.4** ಒಂದೇ ಪರಿಸರದಲ್ಲಿ ಬಂದು ಅರ್ಥವನ್ನು ಬದಲಾಯಿಸಲಾರದ ಧ್ವನಿ ಘಟಕಗಳನ್ನು ವೈಕಲ್ಪಿಕ ಪ್ರಸಾರದಲ್ಲಿವೆಯೆಂದು ಅಥವಾ ಸ್ವಚ್ಛಂದ ಪರಿವರ್ತನೆ ಗೊಳ್ಳುತ್ತವೆಯೆಂದು ವಿವರಿಸಲಾಗುತ್ತದೆ. ಉದಾಹರಣೆಗೆ ಕನ್ನಡದಲ್ಲಿ ಚಳಿಹೊಡಿ, ಸಳಿಹೊಡಿ (ಸೀರು ಸಿಂಪಡಿಸು) ಇವುಗಳಲ್ಲಿ /ಚ್/ /ಸ್/ ಘಟಕಗಳು ಸ್ವಚ್ಛಂದ ಪರಿವರ್ತನೆಗೊಳ್ಳುತ್ತವೆ. ಚೇಳು, ಶೇಳು ಇವುಗಳಲ್ಲಿ /ಚ್/ /ಶ್/ ಗಳು ಸ್ವಚ್ಛಂದ ಪರಿವರ್ತನೆಯಲ್ಲಿವೆ. ಪುಟ್ಟ, ಬುಟ್ಟ, ಇವುಗಳಲ್ಲಿ /ಪ್/, /ಬ್/.

**5.1.15** .ವಿರೋಧ ಪ್ರಸಾರದಲ್ಲಿ ಬರುವ ಅರ್ಥವಿಲ್ಲದ ಆದರೆ ಅರ್ಥಭೇದದ ಸಾಮರ್ಥ್ಯವುಳ್ಳ ಮಹತ್ವದ ಧ್ವನಿಘಟಕಗಳೇ ಧ್ವನಿಮಾಗಳು. ಒಂದೇ ಪರಿಸರ ದಲ್ಲಿ ಇಲ್ಲವೆ ಎರಡು ಭಿನ್ನತೆಗಳುಳ್ಳ ಪರಿಸರದಲ್ಲಿ ಅವು ಬರಬಹುದು. ಧ್ವನಿಮಾ ಗಳು ಆಡುನುಡಿಯ ಕನಿಷ್ಠ ಧ್ವನಿಘಟಕಗಳು. ಸ್ವತಃ ಧ್ವನಿಗಳು ಭಾಷೆಯಲ್ಲಿ ಬಳಕೆಗೊಳ್ಳುತ್ತವೆಯಾದರೂ ಅವುಗಳ ಪ್ರತಿನಿಧಿಗಳನ್ನಾಗಿ ಧ್ವನಿಮಾಗಳನ್ನು ರೂಪಿಸಲಾಗುತ್ತದೆ. ಆದ್ದರಿಂದ ಧ್ವನಿಮಾ ಎನ್ನುವುದೊಂದು ಕಲ್ಪನೆ. ಭಾಷೆಯ ಅಧ್ಯಯನಕ್ಕಾಗಿ ರೂಪಿಸಿಕೊಳ್ಳಲಾಗುವ ಧ್ವನಿಮಾಗಳು ಉಚ್ಚಾರಣೆಯ ಅತಿ ಸಣ್ಣ ಮಹತ್ವದ ಘಟಕಗಳಾಗಿರುತ್ತವೆ. ಪ್ರತಿಯೊಂದು ಭಾಷೆಯಲ್ಲೂ ನಿರ್ದಿಷ್ಟ ಸಂಖ್ಯೆಯಲ್ಲಿ ಧ್ವನಿಮಾಗಳನ್ನು ಗುರುತಿಸಬಹುದು. ಧ್ವನಿಮಾ ಧ್ವನಿಯಲ್ಲವೆಂಬು ದನ್ನು ನೆನಪಿನಲ್ಲಿಡಬೇಕು- ಒಂದು ಧ್ವನಿಮಾ ಅನೇಕ ಅವತಾರಗಳನ್ನು ಹೊಂದಿದ್ದರೆ ಅವು ವಿಶಿಷ್ಟ ಪರಿಸರದಲ್ಲಿ ಪೂರಕ ಪ್ರಸಾರದಲ್ಲಿ ಬರುತ್ತಿದ್ದು ಭಾಷಿಕ ವಾಗಿ ಮಹತ್ವದವಾಗಿದ್ದರೆ, ಅಂಥವುಗಳನ್ನು ಉಪಧ್ವನಿಗಳೆಂದು ಪರಿಗಣಿ

ಲಾಗುತ್ತದೆ.೧ ಉದಾಹರಣೆಗೆ ಕನ್ನಡದಲ್ಲಿ ಅನುನಾಸಿಕ ಧ್ವನಿಗಳನ್ನು ಪರಿಶೀಲಿಸಿದರೆ ಅವುಗಳನ್ನು ಹೀಗೆ ಸೂಚಿಸಬಹುದು.

| | | | | |
|---|---|---|---|---|
| /ನ್/ | ——→ | (ಙ್) | — | ಕಂಠ್ಯ |
| | ——→ | (ಞ್) | | ತಾಲವ್ಯ |
| | ——→ | (ಣ್) | | ಮೂರ್ಧನ್ಯ |
| | ——→ | (ನ್) | | ದಂತ್ಯ |

ಹೆಚ್ಚು ಪ್ರಸಾರವುಳ್ಳ /ನ್/ವನ್ನು ಧ್ವನಿಮಾ ಎಂದು ಪರಿಗಣಿಸಿ ಅದರ ನಾಲ್ಕೂ ಅವತಾರಗಳನ್ನು ಅಂದರೆ ನಿರ್ದಿಷ್ಟ ಪರಿಸರದಲ್ಲಿ ಬಳಕೆಗೊಳ್ಳುವಂಥವು ಗಳನ್ನು /ನ್/ ಧ್ವನಿಮಾದ ಅಂಗವೆಂದು ಭಾವಿಸಿ ಅವುಗಳನ್ನು ಉಪಧ್ವನಿಮಾ ಅಥವಾ ಧ್ವನಿಪ್ರಭೇಧಗಳೆಂದು ಹೇಳಬಹುದು. ಧ್ವನಿಮಾ ಸ್ವತಂತ್ರವಾಗಿರುವಂತೆ ಉಪಧ್ವನಿಮಾ ಸ್ವತಂತ್ರವಲ್ಲ. ಅವು ಯಾವಾಗಲೂ ಪೂರಕ ಪ್ರಸಾರದಲ್ಲಿರುತ್ತವೆ ಮತ್ತು ಆಧೀನವಾಗಿ ಬರುತ್ತವೆ.

## 5.2 ಕನ್ನಡ ಧ್ವನಿಮಾಗಳು :

**5.2.0** ಕನ್ನಡದಲ್ಲಿಯ ಧ್ವನಿಮಾಗಳನ್ನು ವಿವರಿಸುವಲ್ಲಿ ಗಮನಿಸಬೇಕಾದ ಮುಖ್ಯ ಅಂಶಗಳೆಂದರೆ—

೧. ಯಾವ ಕಾಲದ ಕನ್ನಡ ಭಾಷೆಯನ್ನು ಆಧರಿಸಿ ಧ್ವನಿಮಾಗಳನ್ನು ವಿವರಿಸಲಾಗುತ್ತಿದೆಯೆಂಬುದರ ಸ್ಪಷ್ಟ ಕಲ್ಪನೆಯಿರಬೇಕು.

---

೧. Allophones : If two or more sounds are distributed among the forms of a language that none of them even occurs in exactly the same position as any of the others and if all the sounds in question are phonetically similar in the sense of sharing a feature of articulation absent from all other sounds then they are to be classified together as allophones of the same phoneme.

೨. ಯಾವ ಕನ್ನಡವನ್ನು ಪರಿಗಣಿಸಲಾಗಿದೆಯೆಂಬುದನ್ನು ಅರಿತಿರಬೇಕು (ಗ್ರಂಥಸ್ಥಕನ್ನಡವೋ, ಆಡುನುಡಿಯೋ ಇತ್ಯಾದಿ).

೩. ಆಡುನುಡಿಯಾದರೆ ಯಾವ ಪ್ರದೇಶದ ಕನ್ನಡ (ಕಲಬುರ್ಗಿ, ಧಾರವಾಡ, ಮಂಗಳೂರು, ಮೈಸೂರು ಇತ್ಯಾದಿ) ಎಂಬುದನ್ನು ಸೂಚಿಸಬೇಕು. ಐತಿಹಾಸಿಕ ವ್ಯಾಕರಣವಾದರೆ ಒಂದು ಭಾಷೆಯ ಬೇರೆ ಬೇರೆ ಕಾಲದ ಅವಸ್ಥೆಗಳನ್ನು ಸವಿವರವಾಗಿ ವಿವರಿಸಬೇಕು. ವರ್ಣನಾತ್ಮಕ ವ್ಯಾಕರಣದಲ್ಲಿ ಒಂದು ಕಾಲದ, ಒಂದು ಭಾಗದ ಆಡುನುಡಿ ಅಥವಾ ಗ್ರಂಥಸ್ಥಭಾಷೆಯ ರಚನೆಯನ್ನು ವಿವರಿಸಲಾಗುತ್ತದೆ.

ಒಂದು ಭಾಷೆಯಲ್ಲಿ ಅತ್ಯಾವಶ್ಯಕವಾಗಿರುವ ಸಹಜವಾಗಿರುವ ದೇಸಿ ಧ್ವನಿಮಾಗಳ ಪಟ್ಟಿಯನ್ನು ತಿರುಳು (Common Core)ಎಂದೂ, ತಿರುಳಿನಲ್ಲಿರುವ ಧ್ವನಿಮಾಗಳು ಹಾಗೂ ಬೇರೆ ಬೇರೆ ಭಾಷೆಗಳಿಂದ ಆ ಭಾಷೆಯಲ್ಲಿ ಬಂದು ಸೇರಿರುವ ಧ್ವನಿಮಾಗಳು ಇವೆಲ್ಲವನ್ನೂ ಒಟ್ಟಿಗೆ ಸೇರಿಸಿ ಸಮಗ್ರಧ್ವನಿಮಾವ್ಯವಸ್ಥೆ (Overall pattern) ಎಂದೂ ಪ್ರತ್ಯೇಕವಾಗಿಯೂ ವಿವರಿಸುವ ವಾಡಿಕೆ ಇದೆ.

ಕನ್ನಡದ ಧ್ವನಿಮಾವ್ಯವಸ್ಥೆಯನ್ನು ಇಲ್ಲಿ ಪ್ರಾದೇಶಿಕ (ಧಾರವಾಡ ಕನ್ನಡ, ಮೈಸೂರು ಕನ್ನಡ, ಇತ್ಯಾದಿ) ಇಲ್ಲವೆ ಸಾಮಾಜಿಕ ಉಪಭಾಷೆಗಳನ್ನು ಗಮನಿಸದೆ ಶಿಷ್ಟ ಕನ್ನಡದ ಧ್ವನಿಮಾಗಳನ್ನು ಮಾತ್ರ ವಿವರಿಸಲಾಗಿದೆ. ಆನುಷಂಗಿಕವಾಗಿ ಆಡುನುಡಿಯ ಇಂದಿನ ಕನ್ನಡದ ಪ್ರಚಲಿತ ಧ್ವನಿಮಾಗಳ ಬಗೆಗೂ ಅಲ್ಲಲ್ಲಿ ಪ್ರಸ್ತಾಪಿಸಲಾಗಿದೆ. ಆಧುನಿಕ ರೀತಿಯ ಧ್ವನಿಮಾ ವಿವರಣೆಯ ಅನಂತರ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಸುಳಿವು ನೀಡಿದ ಈ ಬಗೆಗಿನ ಅಂಶಗಳ ವಿಚಾರವಾಗಿ ವಿವೇಚಿಸಲಾಗಿದೆ.

5.2.1.1 ಶಿಷ್ಟ ಕನ್ನಡದಲ್ಲಿ ಈಗ ಬಳಕೆಯಲ್ಲಿರುವ ಸಮಗ್ರ ಧ್ವನಿಮಾವ್ಯವಸ್ಥೆ (Oveall Pattern) ಯಲ್ಲಿ ಸೇರುವ ಒಟ್ಟು ಧ್ವನಿಮಾಗಳು ಹೀಗಿವೆ—

I. ವ್ಯಂಜನಗಳು :

| | | |
|---|---|---|
| 1. ಸ್ಪರ್ಶ ಅಲ್ಪಪ್ರಾಣಗಳು | : | ಪ್, ಬ್, ತ್, ದ್, ಟ್, ಡ್, ಚ್, ಜ್, ಕ್, ಗ್, (೧೦) |
| 2. ಅವರ್ಗೀಯ | : | ಯ್,ರ್,ಲ್,ವ್, ಸ್,ಹ್,ಳ್ (೭) |
| 3. ಅನುನಾಸಿಕಗಳು | : | ಮ್,ನ್,ಣ್, (೩ |

II. ಸ್ವರಗಳು :

1. ಹ್ರಸ್ವ : ಅ, ಇ, ಉ, ಎ, ಒ, [೫]

2. ದೀರ್ಘ : ಆ ಈ ಊ ಏ ಓ [೫]

III. ಅನ್ಯಭಾಷಾ ಸ್ವೀಕೃತ :

1. ವ್ಯಂಜನಗಳು (ಸಂಸ್ಕೃತ) : ಫ್,ಭ್,ಥ್,ಧ್,ಠ್,ಢ್,
ಛ್,ಝ್,ಖ್,ಘ್, ಶ್,
ಷ್, [೧೨]

(ಇಂಗ್ಲೀಷ) : ಫ್ [f], ಸ್ [z] [೨]

2. ಸ್ವರಗಳು [ಸಂಸ್ಕೃತ] : 1. ಋ, ೠ [೨]
2. ಐ, ಔ, [ಸಂಧ್ಯಕ್ಷರಗಳು] [೨]
3. ಅಂ, ಅಃ, [ಅನುಸ್ವಾರ, ವಿಸರ್ಗ] [೨]
4. ಕ್ಷ,ಜ್ಞ [ಸಂಯುಕ್ತಾಕ್ಷರಗಳು][೨]
೫೨

IV. ಉಪಧ್ವನಿಗಳು : ಞ್, ಙ್ ೨

V. ಕನ್ನಡ ಆಡುನುಡಿಯ ಕೆಲವು ಧ್ವನಿಮಾಗಳು[೧]
[ಉತ್ತರ ಕರ್ನಾಟಕದ ಆಡುನುಡಿಯಲ್ಲಿ]

1. ಸ್ವರಗಳು, ಅs ಅ, ಆ್ಯ [æ] ಹಾಗೂ ɔ, ೪

2. ವ್ಯಂಜನ. (ಉರ್ದು) ಖ್ ೧

VI. ಅವಿಭಾಜಕ ಉಪಧ್ವನಿಗಳು – ವಿರಾಮ, ಶ್ರುತಿ, ನಾಸಿಕ್ಯತೆ ೩

ಒಟ್ಟು ೬೨

5.2.1.2 **ಕನ್ನಡ ತಿರುಳು(Common Core )ಧ್ವನಿಮಾಗಳು :**

ಅಚ್ಚಗನ್ನಡದ ದೃಷ್ಟಿಯಿಂದ ತೀರ ಅವಶ್ಯಕವೆನಿಸುವ (ಅಂದರೆ ಅನ್ಯಭಾಷೆಯಿಂದ ಸ್ವೀಕೃತ ಧ್ವನಿಮಾಗಳನ್ನು ಹಾಗೂ ಪ್ರಾದೇಶಿಕ ವಿಶಿಷ್ಟ ಧ್ವನಿಮಾಗಳನ್ನು ಬಿಟ್ಟು) ತಿರುಳು ಧ್ವನಿಮಾಗಳು ಇಷ್ಟು :

1. ವ್ಯಂಜನಗಳು:

1. ಪ್,ಬ್,ತ್,ದ್,ಟ್,ಡ್,ಚ್,ಜ್,ಕ್,ಗ್, [೦]

೧. ಆಡುನುಡಿಯ ಧ್ವನಿಮಾಗಳು ಪ್ರಾದೇಶಿಕ ಸಾಮಾಜಿಕ ಉಪಾಭಾಷೆಗಳಿಗೆ ಅನುಗುಣವಾಗಿ ಬೇರೆ ಬೇರೆಯಾಗಿರುತ್ತವೆ.

2. ಯ್, ರ್, ಲ್, ಶ್, ಸ್, ಹ್, ಳ್, (೭)
3. ವ್, ನ್, ಣ್, (೩)

೨. ಸ್ವರಗಳು, 1. ಅ, ಇ, ಉ, ಎ, ಒ, (೫)
2. ಆ, ಈ, ಊ, ಏ, ಓ, (೫)

3. ಉಪಧ್ವನಿಗಳು: ಞ್, ಙ್ ೨

ಒಟ್ಟು ೩೨

ಸ್ವರಗಳಲ್ಲಿ ದೀರ್ಘತ್ವವು ಎಲ್ಲ ಸ್ವರಗಳಿಗೂ ಸಮಾನವಾಗಿರುವುದರಿಂದ ದೀರ್ಘ ಎಂಬುದೊಂದನ್ನೇ (ಅದಕ್ಕೊಂದು ಯಾವುದಾದರೂ ಸಂಕೇತವನ್ನಿಟ್ಟುಕೊಂಡು) ಧ್ವನಿಮಾ ಎಂದು ಪರಿಗಣಿಸಲು ಸಾಧ್ಯವಿದೆ. ಹಾಗೆ ಮಾಡಿದರೆ ಹ್ರಸ್ವಸ್ವರ + ದೀರ್ಘ=ದೀರ್ಘಸ್ವರ. ಅ+ ದೀರ್ಘ= ಅ̄ ; ಇ+ದೀರ್ಘ = ಇ̄ : ಹಾಗೆಯೆ ಉ̄,ಎ̄,ಒ̄, ಎಂಬುದಾಗಿ ಬರೆಯಬಹುದಾಗಿದೆ. ಇದರಿಂದ ಹ್ರಸ್ವಸ್ವರ ಐದು ದೀರ್ಘ ಒಂದು, ಈ ರೀತಿ ಕೇವಲ ಆರು ಸ್ವರ ಧ್ವನಿಮಾ ಮಾತ್ರ ಲೆಕ್ಕಕ್ಕೆ ಸಿಕ್ಕುತ್ತವೆ. ಇದರಿಂದ ತಿರುಳಿನಲ್ಲಿ ಇನ್ನೂ ನಾಲ್ಕು ಕಡಿಮೆ ಅಂದರೆ ೩೨–೪=೨೮ ಧ್ವನಿಮಾ ಉಳಿಯುತ್ತವೆ. ಇದೇ ರೀತಿ ಸಮಗ್ರ ವ್ಯವಸ್ಥೆಯಲ್ಲಿಯೂ ಮಾಡಬಹುದು. ಆದ್ದರಿಂದ ಅಲ್ಲಿ, ೬೨–೪=೫೮ ಉಳಿಯುತ್ತವೆ. ಇದರಿಂದ ತಿರುಳಿನಲ್ಲಿ ಒಟ್ಟು ಕನ್ನಡ ಧ್ವನಿಮಾಗಳ ಸಂಖ್ಯೆ ೨೮ ಎಂದೂ ಸಮಗ್ರ ವ್ಯವಸ್ಥೆಯಲ್ಲಿ ೬೨ ಎಂದು ಹೇಳಬೇಕಾಗುತ್ತದೆ. ಸಮಗ್ರ ವ್ಯವಸ್ಥೆಯಲ್ಲಿ ಸೇರುವ ಅನ್ಯಭಾಷಾ ಸ್ವೀಕೃತ ೧೦ ಮಹಾಪ್ರಾಣಗಳು, ೪ ಘರ್ಷಕಗಳು, ಋ, ೠ, ಸ್ವರಗಳು, ಸಂಧ್ಯಕ್ಷರಗಳು ಅನುಸ್ವಾರ ವಿಸರ್ಗ ಸಂಯುಕ್ತಾಕ್ಷರಗಳು ಉಪಭಾಷಿಕ ವಿಶಿಷ್ಟ ಧ್ವನಿಮಾಗಳನ್ನು ತಿರುಳಿನಲ್ಲಿ ಏಕೆ ಬಿಡಬೇಕೆಂಬುದನ್ನು ಮುಂದೆ ವಿವರಿಸಲಾಗಿದೆ. (5.2.4)

ಅನ್ಯಭಾಷೆಯಿಂದ ಸ್ವೀಕೃತ ಶಬ್ದಗಳಲ್ಲಿ ಬಳಕೆಗೊಳ್ಳುವ ಧ್ವನಿಮಾಗಳನ್ನು ಬಿಟ್ಟು ಅಚ್ಚಗನ್ನಡದ ದೃಷ್ಟಿಯಿಂದ ೩೧+೨ ಧ್ವನಿಮಾಗಳನ್ನು ಪಟ್ಟಿಮಾಡಬಹುದಾದರೂ ಕಾಲಾನುಕ್ರಮದಲ್ಲಿ ಕನ್ನಡವು ಸಂಸ್ಕೃತ, ಇಂಗ್ಲಿಷ್, ಮುಂತಾದ ಭಾಷೆಗಳ ಪ್ರಭಾವಕ್ಕೆ ಒಳಗಾಗಿ ಅನೇಕ ಶಬ್ದಗಳನ್ನು ಸ್ವೀಕರಿಸಿತು. ಇದರಿಂದ ಇಂದಿನ ಕನ್ನಡದಲ್ಲಿ ಅವುಗಳಿಗೆ ಸಂಬಂಧಿಸಿದ ಧ್ವನಿಮಾಗಳು ಬಳಕೆಯಲ್ಲಿ ಬಂದವು. ಸುಶಿಕ್ಷಿತ ನುಡಿಯಲ್ಲಿ ಶಿಷ್ಟಕನ್ನಡದಲ್ಲಿ ಅವುಗಳನ್ನು ಗುರುತಿಸಬಹುದು. ಆದರೆ

ಯಾವುದೇ ಪ್ರಭಾವದಿಂದ ದೂರವಿರುವ ಅಶಿಕ್ಷಿತರ ಅಚ್ಚಗನ್ನಡ ನುಡಿಯಲ್ಲಿ ನಾವಿದನ್ನು ಈಗಲೂ ಕಾಣಲಾರೆವು. ಸ್ವೀಕೃತ ಧ್ವನಿಮಾಗಳು ಇಲ್ಲದೆಯೇ ವ್ಯವಹಾರ ಕನ್ನಡ ಭಾಷೆಯಲ್ಲಿ ನಡೆಯುಬಹುದು. ಆದರೆ ಅಚ್ಚಗನ್ನಡ ಧ್ವನಿಮಾಗಳಿಲ್ಲದೆಯೇ ಭಾಷೆ ಪ್ರಯೋಜನಕ್ಕೆ ಬಾರದು. ಈ ಕಾರಣದಿಂದ ಅಚ್ಚಗನ್ನಡದ ಧ್ವನಿಮಾಗಳು ಯಾವುವು ? ಹೊರಗಿನಿಂದ ಬಂದು ಸೇರಿದಂಥವು ಯಾವುವು ? ಅವುಗಳಲ್ಲಿ ಎಷ್ಟು ಅವಶ್ಯಕ ? ಎಷ್ಟು ಅನಾವಶ್ಯಕ ? ಕನ್ನಡದ ಸಾಮಾಜಿಕ ಪ್ರಾದೇಶಿಕ ಉಪಭಾಷೆಗಳಲ್ಲಿ ಶಿಷ್ಟ ಭಾಷೆಯಲ್ಲಿರುವ ಧ್ವನಿಮಾಗಳ ಹೊರತಾಗಿ ಹೆಚ್ಚಿನ ಯಾವ ಧ್ವನಿಮಾಗಳು ಇವೆ ? ಎಂಬಿವೇ ಅಂಶಗಳನ್ನು ಕನ್ನಡ ಧ್ವನಿಮಾಪಟ್ಟಿಯನ್ನು ಸಿದ್ಧಪಡಿಸುವಾಗ ಗಮನಿಸುವುದು ಅಧ್ಯಯನದ ದೃಷ್ಟಿಯಿಂದ ಹೆಚ್ಚು ಅವಶ್ಯ .

ಸಮಗ್ರ ವ್ಯವಸ್ಥೆಯಲ್ಲಿ ಸೂಚಿಸಿರುವ ಧ್ವನಿಮಾಗಳನ್ನು ನಿರ್ಧರಿಸಲು ಆಧಾರವಾಗುವ ಕೆಲವು ಕನಿಷ್ಟತಮುಯುಗ್ಮಗಳನ್ನಿಲ್ಲಿ ಕೊಡಲಾಗಿದೆ.

### 5.2.2. ಕನಿಷ್ಠತಮ ಯುಗ್ಮಗಳು :

### 5.2.2.1 ಶಿಷ್ಟಕನ್ನಡ ವ್ಯಂಜನ ಧ್ವನಿಮಾಗಳು :

/ಪ್/÷/ಬ್/ ಪೇಟೆ, ಬೇಟೆ; ತಪ್ಪು, ತಬ್ಬು.
/ಪ್/÷/ಫ್/ ಮಾಪು, ಮಾಫ್; ಪಲ, ಫಲ,
/ಬ್/÷/ಭ್/ ಬಾವಿ, ಭಾವಿ; ಬಾರಿ, ಭಾರಿ,
/ತ್/÷/ದ್/ ತಂಡ, ದಂಡ; ಸತ್ತು, ಸದ್ದು; ತಡಿ, ದಡಿ
/ತ್/÷/ಥ್/ ತಡಿ, ಥಡಿ; ತರ, ಥರ; ತಟ್ಟು, ಥಟ್ಟು
/ದ್/÷/ಧ್/ ದಣಿ, ಧಣಿ, ದನ,ಧನ.
/ಟ್/÷/ಡ್/ ತಟ, ತಡ; ದಟ್ಟ, ದಡ್ಡ; ಟೊಳ್ಳು, ಡೊಳ್ಳು.
/ಟ್/÷/ಠ್/ ಟೀಕು, ಠೀಕು; ಟಾರು, ಠಾರು,
/ಡ್/÷/ಢ್/ ಮೂಡ, ಮೂಢ.
/ಕ/÷/ಗ್/ ಕೆಲವು, ಗೆಲವು; ಅಕ್ಕ, ಅಗ್ಗ; ಕುಡಿ, ಗುಡಿ,
/ಕ್/÷/ಖ್/ ಕಾಟೆ, ಖಾಟೆ; ಕುರ,/ಖುರ, ಕಣ, ಖಣ
/ಗ್/÷/ಘ/ ಗಟ್ಟ, ಘಟ್ಟ.
/ಚ್/÷/ಜ್/ ಅಂಚು, ಅಂಜು; ಚಾರೆ, ಜಾರೆ, ಚಿಗಿ, ಜಿಗಿ.

/ಚ್/÷/ಜ್/ ಚಾಣ, ಜಾಣ, ಚಾರ, ಜಾರ.
/ಜ್/÷/ಝ್/ ಜರಿ, ಝರಿ
/ಲ್/÷/ಳ್/ ಕಲೆ, ಕಳೆ, ಎಲೆ, ಎಳೆ,ಹಾಲು, ಹಾಳು
/ನ್/÷/ಣ್/ ಆನೆ, ಆಣೆ; ಅನ್ನ, ಅಣ್ಣ; ಮನೆ, ಮಣೆ,
/ಮ್/÷/ನ್/ ಮಾರು, ನಾರು; ಮನೆ, ನನೆ; ಆಮೆ, ಆನೆ
/ವ್/÷ಬ್/ ವರ, ಬರ; ವಯಸು, ಬಯಸು
/ಸ್/÷/ಚ್/ ಸಲಿಸು, ಚಲಿಸು; ಸಲ್ಲು, ಚಲ್ಲು
/ಡ್/÷/ಳ್/ ತಡೆ, ತಳೆ; ಅಡಕ, ಅಳಕ; ಕಡಿ, ಕಳಿ
/ರ್/÷/ಡ್/ ತೀರು, ತೀಡು; ಬರಿಸಿ, ಬಡಿಸಿ
/ಣ್/÷/ಳ್/ ಎಳೆ, ಎಣೆ; ಅಣಕ, ಅಳಕ
/ಪ್/÷/ಫ್/ ಕಾಪಿ,ಕಾಫಿ; ಸೋಪು, ಸೋಫ: ಪಲ, ಫಲ
/ಷ್/÷/ಸ್/ ಷರಾ, ಸರಾ
/ಶ್/÷/ಸ್/ ಶುರು, ಸುರು; ಶರ, ಸರ; ಶಶಿ, ಸಸಿ
/ಸ್/=/ಹ್/ ಬಸಾರು, ಬಸರು
/ಸ್/÷/ಸ್/ ಸಾಕು, ಹಾಕು, ಸರಿ, ಹರಿ, ಸಸಿ, ಸಹಿ
/ಯ್/÷/ವ್/ ನೋವು, ನೋಯು; ಕಾವು, ಕಾಯು

5.2.2.2 ಶಿಷ್ಟ ಕನ್ನಡ ಸ್ವರಧ್ವನಿಮಾಗಳು :

/ಇ/÷/ಉ/ ಇಳಿ, ಉಳಿ; ಇಲಿ, ಉಲಿ; ಇಕ್ಕು, ಉಕ್ಕು; ಇಡಿ, ಇಡು
/ಇ/÷ಎ/ ಇಳಿ, ಎಳಿ; ಇರುವು, ಎರವು; ಬಿಕ್ಕು, ಬೆಕ್ಕು
/ಎ/÷/ಒ/ ಎಲೆ, ಒಲೆ; ಕಲೆ, ಕೊಲೆ; ಎಡೆ, ಒಡೆ
/ಉ/÷/ಒ/ ಉಲಿ, ಒಲಿ, ಕುಡಿ, ಕೊಡಿ; ಉರಿ, ಒರಿ
/ಇ/÷/ಅ/ ಇರಿ, ಅರಿ; ತಿಳಿ, ತಳಿ; ಇಳಿ, ಅಳಿ
/ಉ/÷/ಅ, ಉಗಿ, ಅಗಿ; ಉಚ್ಚು, ಅಚ್ಚು; ಉಡಿ, ಅಡಿ
/ಎ/÷/ಅ/ ಎಂತು, ಅಂತು; ಎಗ್ಗ, ಅಗ್ಗ; ಒಂದು, ಅಂದು
/ಒ/÷/ಅ/ ಒಗೆ, ಅಗೆ; ಒತ್ತೆ, ಅತ್ತೆ; ಒಡ್ಡ, ಅಡ್ಡ
/ಇ/÷/ಈ/ ಇಡು, ಈಡು; ಇಳೆ, ಈಳೆ; ಇಸು, ಈಸು

/ಎ/÷/ಏ/ ಎರಿ, ಏರಿ; ಕೆಡು, ಕೇಡು; ಬೆಳೆ, ಬೇಳೆ
/ಉ/÷/ಊ/ ಉರು; ಊರು; ಉರಿ, ಊರಿ; ಮುಡಿ, ಮೂಡಿ
/ಒ/÷/ಓ/ ಒರೆ, ಓರೆ; ಕೊಡು, ಕೋಡು; ಒಲೆ, ಓಲೆ
/ಅ/÷/ಆ/ ಅಳು, ಆಳು; ಅರಿ, ಆರಿ; ತಳಿ, ತಾಳಿ
/+/ ನೀ+ನಾರಿಗಾದೆಯೋ; ನೀನಾರಿಗಾದೆಯೋ;
ಆ+ಲೋಕ, ಆಲೋಕ

**5.2.3** ಉತ್ತರಕರ್ನಾಟಕದ ಆಡುನುಡಿಯಲ್ಲಿ ಕೆಲವು ವಿಶಿಷ್ಟ ಧ್ವನಿಮಾಗಳನ್ನು ಗುರುತಿಸಬಹುದು. ಅವುಗಳಲ್ಲಿ—

æ (ಆ್ಯ), ɔ (ಒ), ə (ಅ) ಮುಂತಾದುವು ಮುಖ್ಯವಾಗಿವೆ.

ಉದಾಹರಣೆಗಳು— (ಕನಿಷ್ಟಯುಗ್ಮಗಳನ್ನು ಕಂಸಿನಲ್ಲಿ ಕೊಟ್ಟಿದೆ.)

ಆ್ಯ–ಬ್ಯಾಡ, ಬ್ಯಾರೆ, ಬ್ಯಾಟೆ, ಕ್ಯಾವಿ, ತ್ಯಾಪಿ (ಬ್ಯಾರೆ-ಬಾರೆ)
ಒ– ದೋಸಿ, ಕೋಟಿ, ಕೋಣಿ. (ಕ್ವಾಟಿ–ಕೋಟಿ)
– – – –
(ಇವುಗಳನ್ನು ದ್ವಾಸಿ,ಕ್ವಾಟಿ,ಕ್ವಾಣಿ ಎಂದೂ ಕೆಲವೆಡೆ ಉಚ್ಚರಿಸಲಾಗುತ್ತದೆ.
ಅ– ಮರಿ (young one); ಕಡಿ (side); ಕರಿ [Black]
–
ಮರಿ (young) ಮರಿ [forget]

ವ್ಯಂಜನಗಳಲ್ಲಿ ಙ್, ಞ್, ಇವು ಹವ್ಯಕ ಕನ್ನಡದಲ್ಲಿ ಸ್ವತಂತ್ರ ಧ್ವನಿಮಾಗಳಾಗಿವೆ. ಅನ್ಯಭಾಷಾಪ್ರಭಾವದಿಂದ ಬೀದರ, ಕಲಬುರ್ಗಿ, ಮುಂತಾದ ಭಾಗಗಳಲ್ಲಿ f,v,z,q ಮುಂತಾದ ವ್ಯಂಜನ ಧ್ವನಿಮಾಗಳನ್ನು ಗುರುತಿಸಲಾಗಿದೆ.[೧] ಆಡುನುಡಿಯನ್ನಾಧರಿಸಿ ಕನ್ನಡದ ಸಮಗ್ರ ಧ್ವನಿಮಾವ್ಯವಸ್ಥೆಯನ್ನು ಸಿದ್ಧಪಡಿಸಬೇಕಾದರೆ ಇಂತಹ ಎಲ್ಲ ಧ್ವನಿಮಾಗಳನ್ನೂ ಪಟ್ಟಿಯಲ್ಲಿ ಸೇರಿಸಬೇಕಾಗುತ್ತದೆ. ಇಲ್ಲಿಯವರೆಗೆ ಈ ದಿಶೆಯಲ್ಲಿ ಸಮಗ್ರವೂ ಪರಿಪೂರ್ಣವೂ ಎನಿಸುವ ಅಧ್ಯಯನ ನಡೆದಿಲ್ಲ. ಇಲ್ಲಿ (5.2.1) ಸೂಚಿಸಿರುವ ಸಮಗ್ರ ವ್ಯವಸ್ಥೆಯಲ್ಲಿ ಅನ್ಯಭಾಷೆಗಳಿಂದ ಸ್ವೀಕರಿಸ್ಪಟ್ಟ ಶಬ್ದಗಳಲ್ಲಿ ಬಳಕೆಯಾಗುವ ಧ್ವನಿಮಾಗಳು ಕನ್ನಡನಾಡಿನ ಬಹಳಷ್ಟು ಪ್ರದೇಶಗಳಲ್ಲಿ ವ್ಯಾಪಕವಾಗಿ ಬಳಕೆಯಾಗುತ್ತಿವೆಯೆಂಬ ಕಾರಣದಿಂದ ಸೇರಿಸಲಾಗಿದೆ.

**5.2.4.** ಸಹಜವಾಗಿ ಕನ್ನಡದಲ್ಲಿದ್ದಂಥವು ಹಾಗೂ ಕನ್ನಡಕ್ಕೆ ಅತಿ ಅವಶ್ಯವೆನಿಸು–

---

೧. ಕನ್ನಡದ ಜಿಲ್ಲಾವಾರು ಭಾಷಾ ವಿವರಣೆಗಾಗಿ ನೋಡಿ. ಕರ್ನಾಟಕದ ಭಾರತಿ–ರಜತೋತ್ಸವ ವಿಶೇಷ ಸಂಚಿಕೆ ೧–೨ ಸಂಪುಟ –೯ (೧೯೭೬) ಪುಟ ೭೩–೪೦೧.

ವಂಥ ಧ್ವನಿಮಾಗಳನ್ನು ತಿರುಳಿನಲ್ಲಿ ಪಟ್ಟಿಮಾಡಲಾಯಿತು. ಶುದ್ಧಕನ್ನಡ ನಿಲ್ಲುವುದೇ ಇಂಥ ತಿರುಳಿನ ಧ್ವನಿಮಾಗಳಿಂದ. ತಿರುಳಿನಲ್ಲಿ ಸೇರದ ಕೆಲವು ವಿಶಿಷ್ಟ ಕನ್ನಡ ಧ್ವನಿಮಾಗಳ ಬಗೆಗೆ ಈಗ ಒಂದಿಷ್ಟು ವಿವರವಾಗಿ ನೋಡೋಣ.

**5.2.4.1 ಮಹಾಪ್ರಾಣಗಳು :**

ಆಧುನಿಕ ಭಾಷಾವಿಜ್ಞಾನಿಗಳು ಮಹಾಪ್ರಾಣವನ್ನು ೧. ಗುಂಫನ(Cluster) ಇವೆಲ್ಲ, ೨. ಸಂಯುಕ್ತಧ್ವನಿಮಾ (Unitp honeme) ಎಂದು ಪರಿಗಣಿಸುತ್ತಾರೆ. ಇನ್ನು ಕೆಲವು ಪಂಡಿತರು [C. A. Ferguson, M. Chowdhary] ಮಹಾಪ್ರಾಣಗಳನ್ನು ಇನ್ನೊಂದು ಬಗೆಯಾಗಿ ಅಂದರೆ ಮೂರು ಅವಧಾರಣೆ [Accent] ಎಂಬುದಾಗಿಯೂ ಪರಿಗಣಿಸುತ್ತಾರೆ.

ಗುಂಫನದಲ್ಲಿ ಎರಡು ಉಚ್ಚಾರಗಳು ಒಂದರ ಅನಂತರ ಸ್ಪಷ್ಟವಾಗಿ ಯಾವ ವಿರಾಮವಿಲ್ಲದೆ ಉಚ್ಚರಿತವಾಗುತ್ತವೆ. ಎರಡೂ ಉಚ್ಚಾರಗಳನ್ನು ಸ್ಪಷ್ಟವಾಗಿ ಕೇಳಬಹುದು. ಕಸ್ತೂರಿ, ಶಕ್ತ, ಉತ್ಕಟ, ಇಂಥ ಉದಾಹರಣೆಗಳಲ್ಲಿ ಸ್+ತ್=ಸ್ತ್, ಕ್+ತ್=ಕ್ತ್, ತ್+ಕ್ ತ್ಕ್ ಉಚ್ಚಾರಗಳಲ್ಲಿ ಗುಂಫನವನ್ನು ಮನಗಾಣಬಹುದು. ಸಂಯುಕ್ತ ಧ್ವನಿಮಾದಲ್ಲಿ ಒಂದರ ಅನಂತರ ಮತ್ತೊಂದು ಧ್ವನಿಯು ಉಚ್ಚಾರವಿದ್ದರೂ ಅಲ್ಲಿ ಅವೆರಡೂ ಒಮ್ಮೆಲೆ ಉಚ್ಚರಿತವಾಗಿ ಅವೆರಡು ತಮ್ಮ ತಮ್ಮ ಮೂಲದ ಧ್ವನಿ ಗುಣಧರ್ಮವನ್ನು ಸ್ವಲ್ಪ ಸ್ವಲ್ಪ ಕಳೆದುಕೊಂಡು ಬೇರೊಂದು ಮೂರನೆಯ ಗುಣಧರ್ಮವುಳ್ಳ ಧ್ವನಿಯ ಉಚ್ಚಾರಣೆಗೆ ಕಾರಣವಾಗುತ್ತವೆ. ಅವು ಒಂದರೊಳಗೊಂದು ಸೇರಿ ಒಂದು ಸಂಯುಕ್ತ [Unit] ಧ್ವನಿಯಾಗಿ ಪರಿವರ್ತಿತಗೊಳ್ಳುತ್ತವೆ ಸಂಸ್ಕೃತದ ಸಂಧ್ಯಕ್ಷರಗಳು ಇದಕ್ಕೆ ತಕ್ಕ ಉದಾಹರಣೆಗಳಾಗಿವೆ. ಅವಧಾರಣೆ ಕೇವಲ ಒಂದು ವಿಶಿಷ್ಟ ಒತ್ತು. ಉಚ್ಚಾರದಲ್ಲಿ ವಿಶಿಷ್ಟ ಸ್ಥಾನದಲ್ಲಿ ಒತ್ತು ಬೀಳುವುದರಿಂದ ತನ್ನ ಸಹಜವಾದ ಮೊದಲಿನ ಉಚ್ಚಾರಕ್ಕಿಂತ ಭಿನ್ನವಾಗಿ ತೋರುತ್ತದೆ.

ಮಹಾಪ್ರಾಣವನ್ನು ಗುಂಫನ ಎಂದು ಪರಿಗಣಿಸಬೇಕಾದರೆ ವ್ಯಂಜನ+ಹ್ ಎಂದಿಟ್ಟುಕೊಳ್ಳಬೇಕಾಗುತ್ತದೆ. (ಬ್+ಹ್=ಭ. ತ್+ಹ್=ಥ್ ಇತ್ಯಾದಿ) ಆದರೆ ಇಲ್ಲಿ ಹ್ ಕಾರದ ಉಚ್ಚಾರ, ವ್ಯಂಜನದ ಉಚ್ಚಾರ ಎರಡೂ ಅಷ್ಟೇ ಮಹತ್ವದವಾಗಿಲ್ಲ. ವ್ಯಂಜನವೇ ಇಲ್ಲಿ ಪ್ರಮುಖವಾಗಿದೆ. ಆದ್ದರಿಂದ ಗುಂಫನವೆನ್ನಲು ಬರುವುದಿಲ್ಲ. ವಿಲ್ಯಂಬ್ರೈಟ ಅವರು ಮಹಾಪ್ರಾಣಗಳನ್ನು ಗುಂಫನವೆಂದು ವಿವರಿಸುತ್ತ

''Since distributional criteria offer no clear basis for choice and since there is no phonemic contrast of aspirated con-

sonant Vs consonant plus /h/, there seems to be no reason to set up additional aspirated phonemes" ಎಂದು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯದ ಮೇರೆಗೆ ಮಹಾಪ್ರಾಣಗಳನ್ನು ಪ್ರತ್ಯೇಕ ಧ್ವನಿಮಾಗಳೆಂದು ಪರಿಗಣಿಸುವ ಅವಶ್ಯಕತೆಯಿಲ್ಲ. ಆದರೆ ಈ ಅಭಿಪ್ರಾಯವನ್ನು ಒಪ್ಪುವುದಕ್ಕೆ ಆಗುವದಿಲ್ಲ. ಉದಾಹರಣೆಗಳನ್ನು ಗಮನಿಸಿರಿ :

ಬರ–ಭರ, ದನ-ಧನ, ಕೋಡಿ–ಖೋಡಿ, ಪಲ–ಫಲ.

ಇವುಗಳಲ್ಲಿ ಬ್, ದ್, ಕ್, ಪ್, ವ್ಯಂಜನಗಳಿಗೆ 'ಹ್' ಕಾರ ಸೇರಿದುದರಿಂದಲೇ ಅರ್ಥಭಿನ್ನತೆ ಉಂಟಾಗಿದೆ. ಆದರೆ ಆ 'ಹ್' ಕಾರದ ಉಚ್ಚಾರ ಗುಂಫನದ ರೀತಿಯಲ್ಲಿ ಆಗುವುದಿಲ್ಲವೆಂಬುದು ಇಲ್ಲಿರುವ ಮುಖ್ಯ ಅಂಶ. ಅಂತೆಯೇ ಅರ್ಥ 'ಹ್' ಉಚ್ಚಾರವನ್ನು ಒಳಗೊಂಡ ಕೆಲವು ವ್ಯಂಜನಗಳು ಉಳಿದವುಗಳಿಗಿಂತ ಬೇರೆಯಾಗಿ ನಿಲ್ಲುತ್ತವೆ. ಅವುಗಳನ್ನು ಚ್‌ಹ್, ತ್‌ಹ್, ಪ್‌ಹ್ ಎಂದು ಸೂಚಿಸಬಹುದೇನೋ. ಆದ್ದರಿಂದ ಗುಂಫನಗಳ ಮೌಲ್ಯವಂತೂ ಮಹಾಪ್ರಾಣಗಳಿಗಿಲ್ಲ.

ಸಂಸ್ಕೃತ ಸಂಧ್ಯಕ್ಷರಗಳಂತೆ ಸಂಯುಕ್ತ ಧ್ವನಿಮಾಗಳೆಂದು ಸಹ ಮಹಾಪ್ರಾಣಗಳನ್ನು ಪರಿಗಣಿಸುವುದು ದುಸ್ತರವಾಗುತ್ತದೆ. ಯಾಕೆಂದರೆ ವ್ಯಂಜನದ ಉಚ್ಚಾರ ಸ್ಪಷ್ಟವಾಗಿಯೂ ಅದರೊಂದಿಗಿನ 'ಹ್' ಕಾರದ ಉಚ್ಚಾರ ಅಸ್ಪಷ್ಟವಾಗಿಯೂ ಉಚ್ಚರಿಸಲ್ಪಡುವುದರಿಂದ ಅವೆರಡೂ ಕೂಡಿ ವಿಶಿಷ್ಟ ಉಚ್ಚಾರವಂತೂ ಆಗುವುದಿಲ್ಲ.

ಇನ್ನು ಮಹಾಪ್ರಾಣಗಳು ಕೇವಲ ಅವಧಾರಣೆಗಳೆಂದೂ ಹೇಳಲು ಬರುವುದಿಲ್ಲ. ಅವಧಾರಣೆಗಿಂತ ಹೆಚ್ಚಿನ ಧ್ವನಿ ಮೌಲ್ಯ ಇವುಗಳಿಗಿರುವುದು ಸ್ಪಷ್ಟವಾಗಿದೆ. ಶಬ್ದಾರಂಭದಲ್ಲಿ, ಶಬ್ದ ಮಧ್ಯದಲ್ಲಿ ಮಹಾಪ್ರಾಣಗಳು ಬಂದಾಗ ಮಹಾಪ್ರಾಣ, ಹಾಗೂ ಅಲ್ಪಪ್ರಾಣಗಳಲ್ಲಿ ಇರುವ ಗಮನಾರ್ಹ ವ್ಯತ್ಯಾಸವನ್ನು ಕಾಣಬಹುದು. ಸಂಸ್ಕೃತ ಮೂಲವಾಗಿರುವ ಮಹಾಪ್ರಾಣಗಳನ್ನು ಶಿಕ್ಷಣವನ್ನು ಪಡೆದ ಹಾಗೂ ಸುಧಾರಿಸಿದ ಜನರು ಅವುಗಳನ್ನು ಇದ್ದಕ್ಕಿದ್ದಂತೆ ಉಳಿಸಿಕೊಂಡು ಬಂದಿದ್ದಾರೆ. ಹಳ್ಳಿಗರು, ಅಶಿಕ್ಷಿತರು ಮಹಾಪ್ರಾಣಗಳನ್ನು ಅಲ್ಪಪ್ರಾಣಗಳಾಗಿ ಉಚ್ಚರಿಸುತ್ತಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ಮೂಲತಃ ಮಹಾಪ್ರಾಣಗಳು ಕನ್ನಡದವಲ್ಲ. ಆರ್. ಸಿ. ಹಿರೇಮಠ ಅವರು ಮಹಾಪ್ರಾಗಳನ್ನು

(Mariginal phonemes) ಸೀಮಿತ ಧ್ವನಿಮಾಗಳೆಂದು ಪರಿಗಣಿಸಿದ್ದಾರೆ. ಹಾ. ಮಾ. ನಾಯಕ ಅವರು, "We feel that it is quite legitimate to treat the aspirate sounds as unit phonemes rather than clusters", ಎಂಬುದಾಗಿ ಮಹಾಪ್ರಾಣಗಳನ್ನು ಸಂಯುಕ್ತಧ್ವನಿಮಾಗಳೆಂದು ನಿರ್ಣಯಿಸಿದ್ದಾರೆ.

ಗಲಕುಹರೀಯ ಹ್' ಕಾರವು ಸ್ಪರ್ಶಗಳನ್ನು ಹಾಗೂ ಈಷತ್ ಸ್ಪರ್ಶ ಚ್, ಜ್ ಗಳನ್ನು ತಕ್ಷಣ ಅನುಸರಿಸಿ ಹವೆಯು ಒತ್ತಡವನ್ನು ಒಮ್ಮೆಲೆ ವಿಮೋಚಿಸುವುದರಿಂದ ಮಹಾಪ್ರಾಣಗಳು ಉಚ್ಚರಿಸಲ್ಪಡುತ್ತವೆ. ಸಂಯುಕ್ತಧ್ವನಿಗೆ ಇದು ಸಮೀಪವಾದರೂ ಇದರಲ್ಲಿನ 'ಹ್' ಕಾರದ ಹಿಂದಿನ ವ್ಯಂಜನದ ಉಚ್ಚಾರಕ್ಕೆ ಪ್ರಾಮುಖ್ಯ ಇದೆ. ಆದುದರಿಂದ ಮಹಾಪ್ರಾಣವನ್ನು ವಿಶಿಷ್ಟ ಸಂಯುಕ್ತಧ್ವನಿಮಾ ಎಂದರೆ ಹೆಚ್ಚು ಉಚಿತವೆಂದು ನನ್ನ ಅಭಿಪ್ರಾಯ.

5.2.4.1.1 ಮಹಾಪ್ರಾಣಗಳನ್ನು ಕನ್ನಡ ಧ್ವನಿಮಾ ಪಟ್ಟಿ (ವರ್ಣಮಾಲೆ) ಯಲ್ಲಿ ಸೇರಿಸಬೇಕೆ ಬೇಡವೆ ? ಎಂಬುದೊಂದು ಪ್ರಶ್ನೆ. ಹಲವಾರು ವಿದ್ವಾಂಸರು ಇದನ್ನುಚ್ಚರಿಸಿ ಕೆಲವರು ಇಟ್ಟುಕೊಳ್ಳಬೇಕೆಂದೂ ಕೆಲವರು ಅನಾವಶ್ಯಕವೆಂದೂ ವಾದಿಸಿದ್ದಾರೆ. ಕೇಶಿರಾಜನು 'ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟಕ ಭಾಷೆಯೊಳ್ ಕೆಲವು ನಿಜೋಜ್ವಳಮಾಗಿ ವರ್ಗದಂತ್ಯಂಗಳನಱಿಯಸು ನಾಸಿಕಾಖ್ಯೆಯಂ ತಿಳಿದಿರ್ಕುಂ' (25) ಎಂಬ ಸೂತ್ರದ ಪೂರ್ವಭಾಗದಲ್ಲಿ ಮಹಾಪ್ರಾಣಗಳು ಕನ್ನಡದಲ್ಲಿ ಕೆಲವು ಶಬ್ದಗಳಲ್ಲಿ ಸಹಜವಾಗಿ ಉಂಟು ಎಂದು ಹೇಳಿ ಆ ಶಬ್ದಗಳ ಉದಾಹರಣೆಗಳ ಪಟ್ಟಿಯನ್ನು ನೀಡಿದ್ದಾನೆ. ಆದರೆ ಅವಾವವೂ ಕನ್ನಡ ಶಬ್ದಗಳೆಂದು ಧೈರ್ಯವಾಗಿ ಹೇಳುವಂತಿಲ್ಲ. ಈ ಮೊದಲಿನ ಸೂತ್ರದಲ್ಲಿ 'ವರ್ಗ ದ್ವಿತೀಯ ವರ್ಣಂ ವರ್ಗ ಚತುರ್ಥಾಕ್ಷರಂ ಮಹಾಪ್ರಾಣಮವಂ ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್' (೨೪) ಎಂಬುದಾಗಿ ವರ್ಗ ದ್ವಿತೀಯ ಚತುರ್ಥಾಕ್ಷರಗಳು ಮಹಪ್ರಾಣಗಳಾಗುತ್ತವೆ. ಅವುಗಳನ್ನು ಪಂಡಿತರು ಸಂಖ್ಯಾವಾಚಕ ಹಾಗೂ ಅನುಕರಣವಾಚಕ ಶಬ್ದಗಳಲ್ಲಿ ಬಳಸುತ್ತಾರೆ ಎಂದಿದ್ದಾನೆ. ಈ ಅಸ್ಪಷ್ಟ ವಿವರಣೆಯಿಂದ ನಮಗೆ ಮಹಾಪ್ರಾಣಗಳ ವ್ಯಾಪ್ತಿ ಗೊತ್ತಾಗುವುದಿಲ್ಲ. ಅಲ್ಲಿವೆ ಅವನು ನೀಡುವ ಉದಾಹರಣೆಗಳೆಲ್ಲ ಸಂಸ್ಕೃತ ಅಥವಾ ಪ್ರಾಕೃತಕ್ಕೆ ಸೇರಿದವಾಗಿವೆ. ಸ್ವತಃ ಕೇಶಿರಾಜನಿಗೇ ಈ ಬಗ್ಗೆ ಸಂಶಯ ವಿರಬೇಕು. ಕನ್ನಡದಲ್ಲಿ ಸಹಜವಾಗಿದ್ದರೆ ಕೇವಲ ಸಂಖ್ಯಾವಾಚಕ, ಅನುಕರಣ

ವಾಚಕಗಳಲ್ಲಿ ಮಾತ್ರವೇ ಏಕೆ ಬರಬೇಕು ? ಸಂಖ್ಯಾವ್ಯಾಚಕಗಳಿಗೂ ಅವನು ನೀಡಿದ ಉದಾಹರಣೆಗಳು ಸಂಸ್ಕೃತದ ಸಹಸ್ರಪದದ ತದ್ಭವವಾದ ಸಾಸಿರ ಎಂಬ ಉತ್ತರ ಪದದಿಂದ ಕೂಡಿವೆ ಹಾಗೂ ಉಳಿದವುಗಳಲ್ಲಿ ಮಹಾಪ್ರಾಣ ಕ್ವಚಿತ್ತಾಗಿ ಬರುತ್ತವೆ. ಅನುಕರಣವಾಚಕಗಳು ಭಾಷಾಶಾಸ್ತ್ರದ ದೃಷ್ಟಿಯಿಂದ ಭಾಷಾ ರಚನೆ ವೈಶಿಷ್ಟ್ಯವನ್ನು ನಿರ್ಧರಿಸುವಷ್ಟು ಮಹತ್ವಪೂರ್ಣವಲ್ಲ. ಕೇಶಿರಾಜನು ಉದಾಹರಿಸಿದ ಬಹಳಷ್ಟು ಶಬ್ದಗಳೂ ಮೂಲತಃ ಅಲ್ಪಪ್ರಾಣಗಳಾಗಿರಬೇಕು. ಅಲ್ಲದೆ 'ಕಂಭಕ್ಕಂ, ಭಾಸೆಗಂ ಪಿಕಲ್ಪಂ' ಎಂದು ಅವನು ಹೇಳಿರುವುದನ್ನು ನೋಡಿದರೆ ಮಹಾಪ್ರಾಣೀಕರಣ ಸಾರ್ವತ್ರಿಕವಾಗಿದ್ದಂತಿಲ್ಲ. ಸಂಸ್ಕೃತದ ಕೆಲವು ಅಲ್ಪಪ್ರಾಣ ಯುಕ್ತ ಶಬ್ದಗಳೂ ಮಹಾಪ್ರಾಣಗಳಾಗಿ ಉಚ್ಚರಿಸಲ್ಪಟ್ಟಿರುವ ಉದಾರಣೆಗಳಿರ ಬಹುದಾದರೂ ಅವು ಕನ್ನಡದಲ್ಲಿ ವ್ಯಾಪಕವಾಗಿಲ್ಲವಾದ್ದರಿಂದ ಅವುಗಳ ಆಧಾರ ಅಷ್ಟಾಗಿ ನಿಲ್ಲದು.

ಕರ್ನಾಟಕ ಭಾಷಾಭೂಷಣಕಾರನು ಕನ್ನಡದಲ್ಲಿ ಮಹಾಪ್ರಾಣಗಳ ಬಗೆಗೆ ಅನುಮಾನವನ್ನು ವ್ಯಕ್ತಪಡಿಸಿದ್ದಾನೆ. 'ನಾತ್ರ ಪ್ರಾಯೇಣವರ್ಗಾಣಾಂ ದ್ವಿತೀಯ ಚತುರ್ಥಾಃ ಪ್ರಾಯೇಣೇತಿ ವಚನಾತ್ ಸಂಖ್ಯಾನುಧಾರಣಾತ್ ದೃಶ್ಯಂತೇ.' ಪ್ರಾಯಶಃ ವರ್ಗ ದ್ವಿತೀಯ ಹಾಗೂ ವರ್ಗಚತುರ್ಥ ಅಕ್ಷರಗಳು ಕನ್ನಡದಲ್ಲಿಲ್ಲ. 'ಪ್ರಾಯಶಃ' ಅಂದರೆ ಸಂಖ್ಯಾವಾಚಕಗಳಲ್ಲಿ ಹಾಗೂ ಅನುಕರಣವಾಚಕಗಳಲ್ಲಿ ಅವು ತೋರಬಹುದಾಗಿದೆ.

ಕನ್ನಡ ಕೈಪಿಡಿಕಾರರು ಕನ್ನಡದಲ್ಲಿ ಮಹಾಪ್ರಾಣಗಳು ಇಲ್ಲವೆಂಬುದಕ್ಕೆ ಮೂರು ಕಾರಣಗಳನ್ನು ನೀಡಿದ್ದಾರೆ :

೧. ಕೇಶಿರಾಜನು ನೀಡಿದ ಸಂಖ್ಯಾವಾಚಕ ಉದಾಹರಣೆಗಳು ದ್ವಿತೀಯಾರ್ಥದಲ್ಲಿ ಸಾಸಿರಪದದಿಂದ ಮಾತ್ರ ಪ್ರಾರಂಭವಾಗಿವೆ. ಸಾಸಿರಶಬ್ದ ಕನ್ನಡದ್ದಲ್ಲ, ಸಂಸ್ಕೃತದ ತದ್ಭವ.

೨. ಶಬ್ದಾದಿಯಲ್ಲಿರುವ ಮಹಾಪ್ರಾಣಗಳು ಮೊದಲು ಅಲ್ಪಪ್ರಾಣಗಳಾಗಿರುವ ಸಂಭವವಿದೆ.

೩. ಕೇಶಿರಾಜನು ಮಹಾಪ್ರಾಣಗಳಿಗೆ ನೀಡಿದ ಉದಾಹರಣೆಯ ಶಬ್ದಗಳಾವವೂ ಕನ್ನಡದವುಗಳಲ್ಲ.

ದ್ರಾವಿಡ ಭಾಷೆಗಳಲ್ಲಾಗಲಿ ಕನ್ನಡದ ಪ್ರಾದೇಶಿಕ ಉಪಭಾಷೆಗಳಲ್ಲಾಗಲಿ ಮಹಾಪ್ರಾಣಗಳ ಬಳಕೆ ಇಲ್ಲ. ಕೇವಲ ಸುಶಿಕ್ಷಿತರ ನುಡಿಯಲ್ಲಿ ಮಾತ್ರ (ಮೂಲತಃ ಕನ್ನಡದಲ್ಲಿ ಸಹಜವಾಗಿಲ್ಲದ ಮಹಾಪ್ರಾಣಗಳು) ಸಂಸ್ಕೃತ-ಪ್ರಾಕೃತ ಭಾಷೆಗಳ ಪ್ರಭಾವದಿಂದ ಸೇರಿಕೊಂಡವು. ಈ ಎಲ್ಲ ಕಾರಣಗಳಿಂದ ಅಚ್ಚಗನ್ನಡದಲ್ಲಿ (ತಿರುಳಿನಲ್ಲಿ) ಮಹಾಪ್ರಾಣಗಳನ್ನು ಸೇರಿಸಲಾಗುವುದಿಲ್ಲ.

ಕನ್ನಡಭಾಷೆ ಅನ್ಯಭಾಷೆಗಳಿಂದ ಸಾಕಷ್ಟು ಶಬ್ದಗಳನ್ನು ಸ್ವೀಕರಿಸಿ ಪರಿಪುಷ್ಟವಾಗಿದೆ, ಹಾಗೂ ಬೆಳವಣಿಗೆ ಹೊಂದುತ್ತಿದೆ. ಈ ನಿಟ್ಟಿನಲ್ಲಿ ಮಡಿವಂತಿಕೆಗೆ ಆಸ್ಪದವಿಲ್ಲ. ಮೂಲದಲ್ಲಿ ಇದ್ದಿರಲಿಲ್ಲವೆಂಬ, ವರ್ಣಮಾಲೆ ಬೆಳೆಯುವುದೆಂಬ, ನಮ್ಮವಲ್ಲವೆಂಬ, ಕಾರಣಗಳಿಂದ ಬಿಡುವುದಕ್ಕಿಂತ ಆಧುನಿಕ ಕನ್ನಡದ ಸಮೃದ್ಧಿಯ ದೃಷ್ಟಿಯಿಂದ ಅವುಗಳನ್ನು ಇಟ್ಟುಕೊಂಡರೆ ಯಾವ ಕೊರತೆಯೂ ಉಂಟಾಗುವುದಿಲ್ಲ. ಕೇಶಿರಾಜನು ಪ್ರಯೋಗ ಶರಣನಾಗಿ ಮಹಾಪ್ರಾಣಗಳನ್ನು ಹೇಳಿದ್ದಾನೆಯೆ ಹೊರತು ಶಿಷ್ಟಕನ್ನಡಕ್ಕೆ ಅವು ಹೇಗೆ ಬೇಕು ಎಂಬುದನ್ನು ವಿವೇಚಿಸಲಿಲ್ಲ. ಮಹಾಪ್ರಾಣಗಳು ಕನ್ನಡಕ್ಕೆ ಬೇಕೆಂದು ಹೇಳುವಲ್ಲಿ ಪ್ರಾಯಃ ಅವನು ಅಪಭ್ರಂಶ ಕನ್ನಡವನ್ನು ಗಮನದಲ್ಲಿರಿಸಿರುವಂತೆ ತೋರುತ್ತದೆ. ಸಮಗ್ರ ವ್ಯವಸ್ಥೆಯಲ್ಲಿ ಅವುಗಳನ್ನಿಟ್ಟುಕೊಂಡು ತಿರುಳಿನಲ್ಲಿ ಕೈ ಬಿಟ್ಟರೆ ಯಾವ ಬಾಧಕವಿಲ್ಲ.

5.2.5 ಮಹಾಪ್ರಾಣಗಳಂತೆಯೆ ಅನ್ಯಭಾಷೆಗಳಿಂದ ಬಂದು ಸೇರಿದ /ಶ್/ /ಷ್/, /ಜ಼್/,/ಫ಼್/, ಇತ್ಯಾದಿ ಧ್ವನಿಮಾಗಳಿಗೂ ಅಚ್ಚಗನ್ನಡ ಶುದ್ಧಗೆಯಲ್ಲಿ ಸ್ಥಾನವಿಲ್ಲ. ಇವುಗಳನ್ನು ಸಮಗ್ರ ವ್ಯವಸ್ಥೆಯಲ್ಲಿ ಮಾತ್ರ ಸೇರಿಸಬೇಕು.

5.2.6. ಅವಿಭಾಜಕ ಧ್ವನಿಮಾ /+/ (ವಿರಾಮ) ವನ್ನು ಶಿಷ್ಟಭಾಷೆಯಲ್ಲಿಯಾಗಲಿ ಆಡುನಾಡಿಯಲ್ಲಾಗಲಿ ಸಹಜವಾಗಿ ಸಂದರ್ಭಕ್ಕನುಗುಣವಾಗಿಬಳಸಲಾಗುತ್ತದೆ. ಇದು ಸಂದರ್ಭನಿಷ್ಠವಾಗಿ ಕೆಲವೆಡೆ ಮಾತ್ರ ಬರುತ್ತದೆಯೇ ವಿನಾ ಇನ್ನಿತರ ಧ್ವನಿಮಾಗಳಂತೆ ಇದಕ್ಕೆ ಸ್ವತಂತ್ರ ಸ್ಥಾನವಿಲ್ಲ. ವಿರಾಮವು ಧ್ವನಿಮಾತ್ಮಕವಾಗಿದ್ದರೂ ಅದಕ್ಕೆ ವಿಶಿಷ್ಟ ಸ್ಥಾನವಿದೆ. ಆದುದರಿಂದ ಅದನ್ನು ಸ್ವತಂತ್ರ ಧ್ವನಿಮಾಗಳ ಸಾಲಿನಲ್ಲಿ ನಿಲ್ಲಿಸುವುದಕ್ಕಿಂತ ಸೀಮಿತ ಧ್ವನಿಮಾ ಸ್ಥಾನವನ್ನು ನೀಡುವುದೇ ಹೆಚ್ಚು ಉಚಿತವೆನಿಸುತ್ತದೆ. ಅಂತೆಯೇ ಅದನ್ನು ತಿರುಳಿನಲ್ಲಿ ಸೇರಿಸದೆ ಸಮಗ್ರ ವ್ಯವಸ್ಥೆಯಲ್ಲಿ ಕಾಣಿಸುವುದೇ ಸರಿ.

### 5.2.7 ಅನುನಾಸಿಕಗಳು, ಅನುಸ್ವಾರ, ಬಿಂದು :

ಅನುನಾಸಿಕಗಳ ಉಚ್ಚಾರಕ್ಕೂ ಅನುಸ್ವಾರದ ಉಚ್ಚಾರಕ್ಕೂ ಭೇದವಿದೆ. ಕನ್ನಡದಲ್ಲಿ ಅನುಸ್ವಾರವಿಲ್ಲ. ಆದರೆ ಕೇಶಿರಾಜ ಹಾಗೂ ಅನೇಕ ಪಂಡಿತರು ಅದನ್ನು ಕನ್ನಡದಲ್ಲಿ ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಅವರ್ಗೀಯ ವ್ಯಂಜನಗಳ ('ಳ್' ಬಿಟ್ಟು) ಹಿಂದೆ ಬರುವ 'ನಾಸಿಕ' ಧ್ವನಿ ಅನುಸ್ವಾರವೆನಿಸುತ್ತದೆ. ಉದಾ : ಸಂಯಮ, ಸಂರಕ್ಷಣ, ಸಂಲಗ್ನ, ಸಂವೇದನೆ, ಸಂಶಯ, ಸಂಸಾರ, ಸಂಹಾರ, ಸಂಕ್ಷೇಪ, ಸಂಜ್ಞೆ. ಸಂಸ್ಕೃತದಲ್ಲಿ ಅನುಸ್ವಾರಕ್ಕೆ ಬೆಲೆ ಇದೆ. ವರ್ಗೀಯ ವ್ಯಂಜನಗಳ ಹಿಂದೆ ನಾಸಿಕ ಧ್ವನಿ ಬಂದರೆ ಅದು ಅನುಸ್ವಾರಕ್ಕಿಂತ ಭಿನ್ನವಾಗಿ ಉಚ್ಚಾರವಾಗುತ್ತದೆ. ಅದನ್ನೇ ಅನುನಾಸಿಕವೆಂದು ಕರೆಯುತ್ತಾರೆ. ಅಂಕ, ಅಂಗ, ಸಂಚಕಾರ, ಕುಂಜರ, ಕಂಠ, ಮಂಡನ, ಕ್ರಾಂತಿ, ಆಕ್ರಂದನ, ಸಂಪೀಡನ, ಕುಂಭ ಈ ಉದಾಹರಣೆಗಳಲ್ಲಿ ಅನುನಾಸಿಕಗಳ ಉಚ್ಚಾರವನ್ನು ಗಮನಿಸಬಹುದು. ವರ್ಗೀಯ, ಅವರ್ಗೀಯ, ವ್ಯಂಜನಗಳ ಹಿಂದಲ್ಲದೆ ಸ್ವರಗಳ ಜೊತೆಗೂ ನಾಸಿಕ್ಯಧ್ವನಿ ಸಹೋಚ್ಚಾರಣೆ (4.53) ಗೊಳ್ಳುವುದನ್ನು ಗಮನಿಸಬೇಕು. ಕಾँವು, ಬೇँವು, ಹೂँ, ಹಾँ, ಹೊँಸು,ಮುಂತಾದ ಕನ್ನಡ ಉದಾಹರಣೆಗಳಲ್ಲಿ ಈ ಬಗೆಯ ಉಚ್ಚಾರವಿದೆ. ಆದರೆ ಈ ಉಚ್ಚಾರದ ಬಳಕೆ ಕಡಿಮೆ ಪ್ರಮಾಣದಲ್ಲಿದೆಯಲ್ಲದೆ, ಎಷ್ಟೋ ಸಲ ವಿಕಲ್ಪವೂ ಆಗಿರುತ್ತದೆ. ಆದುದರಿಂದ ಮೂರು ಭಿನ್ನ ಪರಿಸರಗಳಲ್ಲಿ ಬರುವ ನಾಸಿಕ್ಯ ಉಚ್ಚಾರವು ಬೇರೆ ಬೇರೆ ಎಂದಾಯಿತು. ಸಂಸ್ಕೃತದಲ್ಲಿ ಅನುನಾಸಿಕವನ್ನು, ಅನುಸ್ವಾರವನ್ನು ಮೊದಲು ಬೇರೆ ಬೇರೆಯಾಗಿಯೇ ಲಿಪಿಯಲ್ಲಿ ಗುರುತಿಸುತಿದ್ದುದು ಬರುಬರುತ್ತ ಸೊನ್ನೆಯನ್ನು ಎರಡಕ್ಕೂ ಬಳಸಲು ಆರಂಭಿಸಿರಬೇಕು.[೧] ಅನುನಾಸಿಕ ಹಾಗೂ ಅನುಸ್ವಾರಗಳನ್ನು ಬಿಂದುವಿನ ಸಂಕೇತದ ಮೂಲಕ ಬರಹದ ಸೌಲಭ್ಯಕ್ಕಾಗಿ ಲಿಪಿಯಲ್ಲಿ ಬಳಸಲು ಆರಂಭವಾಗಿರಬೇಕು. ಸಹೋಚ್ಚರಿತ ನಾಸಿಕ್ಯ ಧ್ವನಿಗೆ ಮಾತ್ರ ಬಿಂದುವನ್ನು ಬಳಸುವುದು ರೂಢಿಗತವಾಗಲಿಲ್ಲ.

---

೧. ನೋಡಿ : ಕುಳ್ಳಿ ಜೆ. ಎಸ್.–ಕನ್ನಡ ಭಾಷೆಯಲ್ಲಿ ಬಿಂದು ಕ. ಭಾ. ಸಂ. ೨ ಸಂಚಿಕೆ ೧ (೧೯೬೯).

ವರ್ಗೀಯ ವ್ಯಂಜನಗಳ ಕೊನೆಗೆ ಬರುವ ಸಂಕೇತಗಳನ್ನು ಅನುನಾಸಿಕಗಳಿಗೆ ಮೊದಲು ಪ್ರಾಯಶಃ ಬಳಸಲಾಗುತ್ತಿತ್ತು. ಅಂತೆಯೇ ಅವುಗಳನ್ನು ಉಚ್ಚರಿಸಲಾಗುತ್ತಿತ್ತು.

ಉದಾ : ಶಮ್ಭು, ಹನ್ದೆ, ಅಞ್ಜೆ, ಅಙ್ಕಿ, ಅಮ್ಬು

ಬಿಂದುವನ್ನು ಅನುಸ್ವಾರಗಳಿಗೆ ಮಾತ್ರ ಮೊದಲು ಬಳಸಲಾಗುತ್ತಿರಬೇಕು. ಅನಂತರ ಅನುನಾಸಿಕಗಳ ಉಚ್ಚಾರ ಹಾಗೇ ಉಳಿದು ಲಿಪಿಯಲ್ಲಿ ಮಾತ್ರ ಬಿಂದು ಕಾಣಿಸಿಕೊಳ್ಳಲಾರಂಭಿಸಿತು. ಆದ್ದರಿಂದ ಮೊದಲಿದ್ದ ಲಿಪಿ ಸಂಕೇತಗಳಿಗೆ ಎಲ್ಲಕ್ಕೂ ಸಾಮಾನ್ಯವಾದ ಬಿಂದುವಿನ ಸಂಕೇತದ ಬಳಕೆ ಆರಂಭವಾಗಿ ಬಿಂದುವು ಸಂಕೇತಗಳ ಸಂಕೇತವೆನಿಸಿತು[೨] ಎಂದು ಕುಳ್ಳಿ ಅವರು ನಿರ್ಣಯಿಸಿದರೆ ಬಿಂದುವು ಅನುನಾಸಿಕಗಳನ್ನು ಆಕ್ರಮಿಸಿಕೊಂಡ ಮೂರು ಹಂತಗಳನ್ನು ಕೃಷ್ಣಭಟ್ಟ ಅವರು ಹೀಗೆ ಗುರುತಿಸಿದ್ದಾರೆ.[೩]

೧. ಪದಾಂತ್ಯದ ಮ್ > ೦
೨. ಪದಾಂತ್ಯದ ನ್ > ೦
೩. ಪದಮಧ್ಯದ ಙ್, ಣ್, ನ್, ಮ್ > ೦

5.2.7.2 ಕನ್ನಡದಲ್ಲಿ ಞ್, ಙ್ ಇವುಗಳಿಗೆ ಸ್ವತಂತ್ರ ಧ್ವನಿಮಾದ ಸ್ಥಾನವಿಲ್ಲ. ನ್, ಣ್, ಮ್ ಗಳು ಸ್ವತಂತ್ರ ಧ್ವನಿಮಾಗಳಾಗಿವೆಯಾದರೂ ವಿಶಿಷ್ಟ ಪರಿಸರದಲ್ಲಿ ಞ್ ಙ್, ಗಳಂತೆ ಅವೂ ಉಪಧ್ವನಿಗಳಾಗುತ್ತವೆ. ಅವುಗಳನ್ನು ಹೀಗೆ ವಿವರಿಸಬಹುದು :

(ಙ್) ಕ್ ವರ್ಗದ ಹಿಂದೆ, ಸ್ವರದ ಮುಂದೆ
(ಞ್) ಚ್ ವರ್ಗದ ಹಿಂದೆ, ಸ್ವರದ ಮುಂದೆ
/ನ್/ > (ಣ್) ಟ್ ವರ್ಗದ ಹಿಂದೆ, ಸ್ವರದ ಮುಂದೆ
(ನ್) ತ್ ವರ್ಗದ ಹಿಂದೆ, ಸ್ವರದ ಮುಂದೆ
(ಮ್) ಪ್ ವರ್ಗದ ಹಿಂದೆ, ಸ್ವರದ ಮುಂದೆ

---

೨. ಕುಳ್ಳಿ ಜೆ. ಎಸ್.–ಕನ್ನಡ ಭಾಷೆಯಲ್ಲಿ ಬಿಂದು ಕ. ಭಾ. ಸಂ. ೨ ಸಂಚಿಕೆ ೧ (೧೯೬೯)
೩. ಕೃಷ್ಣಭಟ್ಟ ಪಿ.–ಕರ್ನಾಟಕ ಭಾರತಿ ಸಂ. ೯. ಸಂ. ೪. (೧೯೭೭). ಪು. ೮,೧೪

ಈ ಎಲ್ಲ ಉಪಧ್ವನಿಗಳಿಗೆ ಸಾಮಾನ್ಯವಾದ /ನ್/ ಒಂದನ್ನು ಧ್ವನಿಮಾ ಎಂದಿಟ್ಟುಕೊಳ್ಳಬಹುದು. ಇಲ್ಲಿ /ನ್/ ಅನುಕೂಲಾತ್ಮಕ ಸಂಕೇತವಾಗಿರುವಂತೆ ಬಿಂದುವನ್ನು ಇಟ್ಟುಕೊಂಡರೆ ಅನುಸ್ವಾರದ ಉಚ್ಚಾರಗಳ ಬಗೆಗೆ ಏನು ಪರಿಹಾರ ? ಎಂಬ ಪ್ರಶ್ನೆ ಏಳುತ್ತದೆ. ಕನ್ನಡದಲ್ಲಿ ಅನುಸ್ವಾರವಿಲ್ಲದ್ದರಿಂದ ಕೇವಲ ಅನ್ಯಭಾಷೆ ಯಿಂದ ಸ್ವೀಕೃತ ಪದಗಳಲ್ಲಿ ಮಾತ್ರ ಇರುವುದರಿಂದ ಅನುಸ್ವಾರವನ್ನು ಪ್ರತ್ಯೇಕ ವಾಗಿಟ್ಟುಕೊಳ್ಳಬಹುದು. ಕನ್ನಡದ ಅನುನಾಸಿಕಗಳೊಡನೆ ಸಮಾನವಾಗಿ ಅದನ್ನು ಪರಿಗಣಿಸುವುದು ಅಷ್ಟು ಸಮಂಜಸವೆನಿಸುವುದಿಲ್ಲ. ಬಿಂದುವನ್ನು ಧ್ವನಿಮಾ ಎಂದು ಪರಿಗಣಿಸಬಹುದೇ ? ಎನ್ನುವುದು ಮತ್ತೊಂದು ಪ್ರಶ್ನೆ. ಯಾವ ಅವತಾರವು ಹೆಚ್ಚು ಪ್ರಸಾರವನ್ನು ಹೊಂದಿರುತ್ತದೆಯೋ ಅಂಥ ಧ್ವನಿಯ ಸಂಕೇತವನ್ನೇ ಧ್ವನಿ ಮಾಕ್ಕೆ ಇಟ್ಟುಕೊಳ್ಳುವುದು ವಾಡಿಕೆ. ಇಲ್ಲಿ ಬಿಂದು ಯಾವ ಅನುನಾಸಿಕಕ್ಕೂ ನೇರ ಸಂಬಂಧವನ್ನು ಹೊಂದಿಲ್ಲ (ಮೂಲತಃ ಬಿಂದು ಸಂಸ್ಕೃತದ ಅನುಸ್ವಾರ ಸೂಚಕ ವಾಗಿ ಲಿಪಿಯಲ್ಲಿ ಬಳಕೆಗೊಳ್ಳುವಂತಹದು) ಆದುದರಿಂದ ಬಿಂದು ಕನ್ನಡದಲ್ಲಿ ಸಂಸ್ಕೃ ತದ ಅಂಧಾನುಕರಣೆಯಿಂದ ಲಿಪಿ ಸಂಕೇತವಾಗಿ ಮಾತ್ರ ಸೇರಿಕೊಂಡಿದೆ ಎಂದಂತಾ ಯಿತು. ಹೀಗಿದ್ದರೂ ಬಿಂದು ಕನ್ನಡದಲ್ಲಿ ಸೇರುವುದರಿಂದ ಆದ ಮುಖ್ಯ ಅನುಕೂಲತೆಯೆಂದರೆ ಸ್ವತಂತ್ರ ಧ್ವನಿಮಾಗಳಾದ /ನ್/, /ಮ್/, /ಣ್/ ಗಳನ್ನು ಪ್ರತಿನಿಧಿಸದೆ ಎಲ್ಲ ಐದು ಅನುನಾಸಿಕ ಉಪಧ್ವನಿಮಾಗಳನ್ನು ಹಾಗೂ ಸ್ವೀಕೃತ ಪದಗಳಲ್ಲಿರುವ ಅನುಸ್ವಾರವನ್ನು ಒಂದೇ ಸಂಕೇತ ದಿಂದ ಸೂಚಿಸುವುದರಿಂದಾಗುವ ಲಿಪಿ ಸೌಕರ್ಯ. ಬಿಂದುವಿನ ಬದಲು [ಅನುಸ್ವಾರಯುಕ್ತ ಪದಗಳ ಹೊರತಾಗಿ] ಅನುನಾಸಿಕಗಳ ಲಿಪಿ ಸಂಕೇತವನ್ನೇ ಬಳಸುತ್ತ ಬಂದಿದ್ದರೆ ಅಥವಾ ಬಳಸುತ್ತ ಹೋದರೆ ಯಾವ ತೊಂದರೆಯೂ ಇಲ್ಲ [ಅಙ್ಗಿ, ಸಞ್ಜೆ, ಅಣ್ಟು, ಸನ್ತೆ, ತಮ್ಪು.... ಇತ್ಯಾದಿ] ಆದರೆ ರೂಢಿಯಲ್ಲಿ ಅವುಗಳ ಬದಲಾಗಿ ಬಿಂದುವನ್ನು ಬಳಸುತ್ತ ಬರಲಾಗಿರುವುದರಿಂದ ಈ ಅನುನಾಸಿಕಗಳು ಲಿಪಿಯಲ್ಲಿ ಮಾಯವಾದವು. ಉಚ್ಚಾರದಲ್ಲಿ ಉಳಿದು ಕೊಂಡವು. ನ್, ಮ್, ಣ್ ಗಳಿಗೆ ಬೇರೆ ಸಂದರ್ಭದಲ್ಲಿ ಸ್ವತಂತ್ರ ಅಸ್ತಿತ್ವ ವಿರುವುದರಿಂದ ಅಂಥಲ್ಲೆಲ್ಲ ಅವು ಉಳಿದುಕೊಂಡು ಬಂದವು. ಆದರೆ ಙ್ ಮತ್ತು ಞ್‌ಗಳಿಗೆ ಆ ರೀತಿ ಸ್ವತಂತ್ರ ಅಸ್ತಿತ್ವ ಇಲ್ಲದಿರುವದರಿಂದ ಅವು ಲೋಪವಾಗಿ ಹೋದವು. ಬಿಂದುವನ್ನು ಲಿಪಿ ಸೌಂಕರ್ಯಕ್ಕಾಗಿ ಬಳಸಿಕೊಂಡಿದ್ದು ಎಂಬುದನ್ನು ಈವರೆಗಿನ ವಿವರಣೆಯಿಂದ ಮನಗಾಣಬಹುದು. ಆದರೆ ಇಷ್ಟಕ್ಕೆ ಮಾತ್ರ ಅದರ ಸ್ಥಾನ ಸೀಮಿತಗೊಳಿಸಬೇಕಾಗಿಲ್ಲ. ಐದೂ ಅನುನಾಸಿಕ ಉಪಧ್ವನಿಗಳ ಪರವಾಗಿ

ಯಾವ ಸಂಕೇತವನ್ನು ಧ್ವನಿಮಾಕ್ಕೆ ಇಟ್ಟುಕೊಳ್ಳಬೇಕು ಎಂದು ಯೋಚಿಸಿದಾಗ ಹೆಚ್ಚು ಪ್ರಸಾರವುಳ್ಳ ನ್, ಮ್, ಙ್,ಗಳು ಸ್ವತಂತ್ರ ಧ್ವನಿಮಾಗಳೂ ಆಗಿವೆ. ಇವುಗಳಲ್ಲಿ ಯಾವುದನ್ನಿಟ್ಟುಕೊಂಡರೂ ಸ್ವತಂತ್ರ ಧ್ವನಿಮಾ ಸಂಕೇತವೋ, ಉಪಧ್ವನಿ ಸಂಕೇತವೋ ಎಂಬ ಗೊಂದಲವೇಳುವುದು ಸಹಜ. ಉಳಿದವು ಹೆಚ್ಚು ಪ್ರಸಾರವನ್ನು ಹೊಂದಿಲ್ಲವಾದ್ದರಿಂದ ಅವುಗಳಲ್ಲಿ ಯಾವುದಾದರೊಂದನ್ನು ಇಟ್ಟು ಕೊಳ್ಳುವುದು ಸಮಂಜಸವೆನಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಎಲ್ಲ ಐದೂ ಉಪಧ್ವನಿಗಳ ಪ್ರತಿನಿಧಿಯಾಗಿ ಬಿಂದುವನ್ನು ಧ್ವನಿಮಾ ಎಂದು ಪರಿಗಣಿಸಬಹುದಾಗಿದೆ.

ಆದರೆ ಇತರ ಸ್ವತಂತ್ರ ಧ್ವನಿಮಾ ಮೌಲ್ಯ ಬಿಂದುವಿಗೆ ಇಲ್ಲ ಯಾಕೆಂದರೆ—

೧. ಬಿಂದುವಿಗೆ ಶಬ್ದಾರಂಭದಲ್ಲಿ ಸ್ಥಾನವಿಲ್ಲ.

೨. ಶಬ್ದ ಮಧ್ಯದಲ್ಲಿ ಕೇವಲ ಸ್ವರದ ಮುಂದೆ ವ್ಯಂಜನಗಳ ಹಿಂದೆ ಬರುತ್ತದೆ.

೩. ಶಬ್ದಾಂತ್ಯದಲ್ಲಿ [ಮಾಡಿದಂ, ಕಾಡಿದಂ] ಬಂದಾಗ ಬಿಂದುವು ಮ್ ಅಥವಾ ನ್ ಧ್ವನಿಯ ಬದಲಾಗಿ ಬರೆಯಲ್ಪಟ್ಟಿರುತ್ತದಷ್ಟೆ.

೪. ಅವರ್ಗೀಯ ವ್ಯಂಜನಗಳ ಹಿಂದೆ ಅದು ಅನುಸ್ವಾರವನ್ನು ಸೂಚಿಸುತ್ತದೆ. ಹೀಗೆ ಬಿಂದು ವಿಶಿಷ್ಟ ಕಟ್ಟಳೆಗಳಿಗನುಸಾರವಾಗಿ ಬಳಸಲ್ಪಡುತ್ತದೆ.

ಈ ಕಾರಣಗಳಿಂದ ಬಿಂದುವನ್ನು ಅನುನಾಸಿಕ, ಅನುಸ್ವಾರ ಧ್ವನಿಗಳ ಸಂಕೇತ ಮಾತ್ರವೆಂದು ಹೇಳಬೇಕಾಗುತ್ತದೆ.

**5.2.7.3** ಕೇಶಿರಾಜನು ಬಿಂದುವನ್ನು ಬಹಳ ಸ್ಥೂಲವಾಗಿ ವಿವರಿಸಿದ್ದಾನೆ. ಬಿಂದುವನ್ನು ಅವನು

"ಬಿಂದುವನುಸ್ವಾರಂ ತಾ
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ
ಸಂದಿರ್ಪುದು........ [ಸೂ. ೨೧]

ಎಂಬುದಾಗಿ ಹೇಳಿ ಇದೇ ಸೂತ್ರದ ವೃತ್ತಿಯಲ್ಲಿ—

"ಬಿಂದುವೆಂದುಂ ಅನುಸ್ವಾರವೆಂದುಂ ಸೊನ್ನೆಗೆ ಪೆಸರ್. ಬಿಡುಮುತ್ತಂ ಪೋಲ್ತು, ಬಟ್ಟಿತ್ತಾಗಿರ್ಪುದಱಿಂ, ಶೂನ್ಯಶಬ್ದದಪಭ್ರಂಶವಾಗಿಯುಂ ; ಕನ್ನಡದೊಳ್ ಸೊನ್ನೆಯೆಂದಾಯ್ತು; ಬಿಂದುವಿನಂತಿರ್ಪುದಱಿಂ ಬಿಂದುವೆಂದಾಯ್ತು, ಬಿಂದು ಸ್ವರೂಪಂ—೦."

ಈ ರೀತಿಯಾಗಿ ಬಿಂದುವಿನ ಆಕಾರ, ಸ್ವರೂಪಗಳನ್ನು ವಿವರಿಸಿದ್ದಾನೆ. ಬಿಂದು ಹಾಗೂ ಅನುಸ್ವಾರಗಳಲ್ಲಿ ಅಭೇದವನ್ನು ಸೂಚಿಸಿದ್ದಾನೆ. ಆದ್ದರಿಂದ ಕೇಶಿರಾಜನು ಅವರ ಭೌತಿಕ ಆಕಾರಕ್ಕೆ ಹೆಚ್ಚು ಗಮನ ನೀಡಿರುವಂತೆ ತೋರುತ್ತದೆ. ಆದರೆ ಇನ್ನೆರಡು ಸೂತ್ರಗಳಲ್ಲಿ ಅದರ ಉಚ್ಚಾರದ ಬಗೆಗೆ—

ಸ್ವರಪರದೊಳಿರ್ಪ ಕತದಿಂ
ದುರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ
ಪರಕಿಸೆ ಬಿಂದು ವಿಸರ್ಗಂ
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ [ಸೂ. ೨೨]

ಮಕಾರದ ಪರದೊಳ್ ವ್ಯಂ
ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ
ಜನಿಯಿಪುದು ವರ್ಗಮಿದಿರಿರೆ
ತನಗೆ ವಿಕಲ್ಪದೆ ತದೀಯ ಪಂಚಮಮಕ್ಕುಂ [ಸೂ. ೧೭೨]

ಎಂದು ಹೇಳಿ ಇವಕ್ಕೆ ಉಚ್ಚಾರಣೆಯಲ್ಲಿ ಸ್ವತಂತ್ರ ಸ್ಥಾನವಿಲ್ಲವೆಂಬುದನ್ನು ಹಾಗೆಯೆ ಸ್ವರದ ಮುಂದೆ ಬರುವ ಪರಿಸರವನ್ನು ಗುರುತಿಸಿದ್ದಾನೆ. ವ್ಯಂಜನದ ಲಕ್ಷಣ ಹೊಂದಿರುವದೂ ಸ್ವರದ ಪರದಲ್ಲಿ ಬರುವುದೂ ಇವರ ವೈಶಿಷ್ಟ್ಯವೆಂದು ಹೇಳಿದ್ದಾನೆ. ಕೇಶಿರಾಜನ ಕಾಲದಲ್ಲಿ ಬಿಂದುವಿನ ಉಚ್ಚಾರ ಶಬ್ದ ಮಧ್ಯದಲ್ಲಿ ಮುಂದೆ ಬರುವ ವ್ಯಂಜನವರ್ಗದ ಅನುನಾಸಿಕವೇ ಆಗಿತ್ತೆಂಬುದು ಅವನು ನೀಡಿರುವ ಈ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

ಬಿಜ್ಜಮೆಟ್ಟತ್ತೆಸೆವಿಣ್ಚಿಯ
ಸಜ್ಜುಗಳಮುಂ ತೊಣ್ಡುಗೆಡೆವ ಶುಕಸಾರಿಕೆಯುಂ
ಸೋಜಿಗ್ಗೆ ಬಲವನ್ದು ತೀಡುವ
ತೆಜ್ಜಣಗಾಳಿಯುಮವೇಂ ಮನಜಕ್ಕೊಳಿಸಿದುವೋ

ಕೆಲವು ವ್ಯಾಕರಣಕಾರರು ಬಿಂದುವನ್ನು ಸ್ವರಗಳಲ್ಲಿ ಸೇರಿಸಿರುತ್ತಾರೆ. ಮತ್ತೆ ಕೆಲವರು ಯೋಗವಾಹಗಳಲ್ಲಿ ಸೇರಿಸಿರುತ್ತಾರೆ. ಎಂದು ಹೇಳಿ ೨೭ ನೆಯ ಸೂತ್ರದಲ್ಲಿ ತಾನೇ ಬಿಂದುವನ್ನು ಯೋಗವಾಹಗಳಲ್ಲಿ ಒಂದೆಂದು ಪಟ್ಟಿಮಾಡಿದ್ದಾನೆ.

ಜ್, ಞ್, ನ್. ಮ್ ಇವ್ರಗಳನ್ನು ಅನುನಾಸಿಕಗಳೆಂದು ಹೇಳಿ ಯ್, ವ್, ಲ್ ಇವು ಅನುನಾಸಿಕಗಳೂ, ನಿರನುನಾಸಿಕಗಳೂ ಆಗುತ್ತವೆಂದಿದ್ದಾನೆ. ಕೇಶಿರಾಜನ ಈ ಎಲ್ಲ ವಿಚಾರಗಳನ್ನು ಪರಿಶೀಲಿಸಿದರೆ ಕನ್ನಡದಲ್ಲಿಯ ಬಿಂದುವಿನ ಸ್ವರೂಪ ಅವನಿಗೆ ಅಷ್ಟು ಸ್ಪಷ್ಟವಾಗಿಲ್ಲ ಎನ್ನುವುದು ಭಾಸವಾಗುತ್ತದೆ. ಬಿಂದು ಅನುಸ್ವಾರ ಒಂದೇ ಎನ್ನುವಲ್ಲಿ ಪ್ರಥಮತಃ ಎಡವಿದ್ದಾನೆ. ಯ್, ವ್, ಲ್ ಗಳ ಹಿಂದೆ ಬರುವ ಸ್ವರದೊಡನೆ ಸಹೋಚ್ಚಾರಣೆಯಾಗಿ ಬರುವ ನಾಸಿಕ್ಯ ಧ್ವನಿಯನ್ನು ಅನುನಾಸಿಕವೆಂದು ತಪ್ಪಾಗಿ ಗ್ರಹಿಸಿದ್ದಾನೆ. ಮ್, ನ್ ಕಾರದ ಮುಂದೆ ವ್ಯಂಜನವಿರಲಿ ಇಲ್ಲದಿರಲಿ ಅನುಸ್ವಾರ ಹುಟ್ಟುತ್ತದೆ ಎಂಬ ಅವನ ಅಭಿಪ್ರಾಯದಿಂದ ಏನೊಂದೂ ಸ್ಪಷ್ಟವಾಗುವುದಿಲ್ಲ ಮತ್ತೊಂದೆಡೆಗೆ ಕೇಶಿರಾಜನು ಕನ್ನಡದಲ್ಲಿ ಸ್ವಭಾವದಿಂದ ನಿತ್ಯ ಬಿಂದುಗಳು ಇರುವ ೬೪ ಪದಗಳ ಪಟ್ಟಿಯನ್ನು ನೀಡಿದ್ದಾನೆ (ಸೂ. ೪೬). ಆದರೆ ಆಧುನಿಕ ಕನ್ನಡದಲ್ಲೀಗ ಅವು ಅಬಿಂದುಕಗಳಾಗಿವೆ. ಬಿಂದು ಕೇಶಿರಾಜನ ಕಾಲಕ್ಕಾಗಲೆ ಅನೇಕ ಪದಗಳಲ್ಲಿ ಲೋಪವಾಗತೊಡಗಿತ್ತೆಂಬುದಕ್ಕೆ ಅವನೇ ಕೊಟ್ಟ ೮ ಉದಾಹರಣೆಗಳು (ಇಱುಂಪೆ–ಇಱುಪೆ, ನೊರಂಜು–ನೊರಜು) ಇತ್ಯಾದಿ ಸಾಕ್ಷಿಯಾಗಿವೆ. ಒಟ್ಟಿನಲ್ಲಿ ಅನುನಾಸಿಕಗಳನ್ನು ಸಂಕೇತಿಸುವ ಬಿಂದುವಿನ ಸ್ವರೂಪ ಸ್ಪಷ್ಟ ಕಲ್ಪನೆ ಕೇಶಿರಾಜನಿಗಿದ್ದಿಲ್ಲ.

5.[illegible].7.4 ಭಟ್ಟಾಕಳಂಕನು ಶಬ್ದಾನುಶಾಸನದಲ್ಲಿ ಬಿಂದು, ಅನುಸ್ವಾರಗಳನ್ನು ಯೋಗವಾಹಗಳಲ್ಲಿ ಸೇರಿಸಿದ್ದಾನೆ. ಇತರ ಧ್ವನಿಘಟಕಗಳ ಯೋಗ [ಸಂಬಂಧ] ದಿಂದ ಮಾತ್ರ ಬಳಕೆಗೊಳ್ಳುವಂಥವು (ವಾಹಕಗಳು) ಯೋಗವಾಹಗಳೆಂದು ಅಂದರೆ ಪರಾವಲಂಬಿಯಾಗಿರುವಂತಹುಗಳೆಂದು ಅವನು ಹೇಳಿದ್ದಾನೆ. ಆದರೆ ಪಾಣಿನಿ ಇವುಗಳನ್ನು ಅಯೋಗವಾಹಗಳೆನ್ನುತ್ತಾನೆ. ಅಯೋಗವಾಹಗಳೆಂದರೆ ಯಾವ ವರ್ಣದಲ್ಲಿಯೂ ಅಂತರ್ಭಾವವನ್ನು ಹೊಂದದೆ. ಪ್ರಯೋಗ ಮಾತ್ರದಲ್ಲಿದ್ದು ಶಬ್ದಗಳ ಸಾಧುತ್ವವನ್ನು ಬೋಧಿಸುವಂತವು, ಯೋಗವಾಹಗಳಲ್ಲಿ ೧. ಜಿಹ್ವಾಮೂಲೀಯ (ᳵ), ೨. ಉಪಾಧ್ಮಾನೀಯ (ᳶ), ೩. ಬಿಂದು. (೦). ೪. ವಿಸರ್ಗ (ಃ) ಇವಿಷ್ಟನ್ನು ಕೇಶಿರಾಜ ಸೇರಿಸಿದ್ದಾನೆ.

ಸಂಸ್ಕೃತ ಭಾಷೆಯ ದೃಷ್ಟಿಯಿಂದ ಬಿಂದುವಿನ ಬದಲಾಗಿ ಅನುಸ್ವಾರವೇ ಈ ಯೋಗವಾಹಗಳಲ್ಲಿ ಸೇರಬೇಕು. ಬಿಂದುವು ಅದನ್ನು ಆಕ್ರಮಿಸಿಕೊಂಡಿದೆ. ಕನ್ನಡದಲ್ಲಿ ಈ ಯೋಗವಾಹಗಳಲ್ಲಿ ಯಾವುವೂ ಇಲ್ಲ. ಬಿಂದು ಕನ್ನಡ ಭಾಷೆಯಲ್ಲಿ

ವಿಶಿಷ್ಟ ಸ್ಥಾನವನ್ನೇ ಪಡೆದಿರುವುದನ್ನು ಈ ಮೊದಲು ಪರಿಶೀಲಿಸಲಾಗಿದೆ. ದ್ರಾವಿಡ ಭಾಷೆಗಳಲ್ಲಿ ಇಲ್ಲದಿರುವ ಅನುಸ್ವಾರ ಕನ್ನಡದಲ್ಲಿಯೂ ಸಹಜವಾಗಿ ಇಲ್ಲ. ಆದುದರಿಂದ ಬಿಂದು ಅನುನಾಸಿಕಗಳ ಉಚ್ಚಾರಕ್ಕೆ ಮಾತ್ರ ಸಂಬಂಧಿಸಿರುವುದು ಎಂಬುದನ್ನು ಗಮನದಲ್ಲಿಟ್ಟರೆ ಅದರ ಸ್ವರೂಪ ಸ್ಪಷ್ಟವಾಗುತ್ತದೆ.

### 5.2.8. ಸಂಧ್ಯಕ್ಷರಗಳು :

**5.2.8.1** ಮೂಲತಃ ದ್ರಾವಿಡ ಭಾಷೆಗಳಲ್ಲಿ ಸಂಧ್ಯಕ್ಷರಗಳು ಇಲ್ಲ. ಆದರೆ ಕನ್ನಡದಲ್ಲಿ ಐ ಮತ್ತು ಔ ಇವುಗಳನ್ನು ಸೂಚಿಸಲು ಲಿಪಿ ಸಂಕೇತಗಳಿವೆ. ಸಂಧ್ಯಕ್ಷರ ಎನ್ನುವ ಪದವು ಸಂಸ್ಕೃತ ಕಾತಂತ್ರ ವ್ಯಾಕರಣದಿಂದ ತೆಗೆದುಕೊಂಡದ್ದು ಸಂಸ್ಕೃತ ವ್ಯಾಕರಣಗಳ ಅನುಸಾರ ಸಂಧ್ಯಕ್ಷರಗಳು ನಾಲ್ಕು ಏ, ಓ, ಐ ಹಾಗೂ ಔ. ಸಂಸ್ಕೃತ ದಲ್ಲಿ ಇವುಗಳಿಗೆ ವಿಶಿಷ್ಟ ಉಚ್ಚಾರವಿದೆ. ಅಲ್ಲಿ ಏ, ಓ ಗಳು ಕೇವಲ ದೀರ್ಘ ಸ್ವರಗಳಲ್ಲ. ಐ ಹಾಗೂ ಔ ಗಳಲ್ಲಿ ಎರಡು ಸ್ವರಗಳ ಧ್ವನಿ ಅಂಶಗಳು ಒಂದೇ ಉಚ್ಚಾರದಲ್ಲಿ ಹೇಗೆ ವಿಶಿಷ್ಟವಾಗಿ ಉಚ್ಚರಿಸಲ್ಪಡುತ್ತದೆಯೋ ಹಾಗೆಯೇ ಏ, ಓ ಗಳು ಸಂಸ್ಕೃತದಲ್ಲಿ ಎರಡು ಭಿನ್ನ ಸ್ವರಗಳ ಧ್ವನಿ ಅಂಶಗಳನ್ನು ಒಳಗೊಂಡು ಉಚ್ಚರಿತವಾಗುತ್ತಿರಬೇಕು. ಅಂತೆಯೇ ಅವುಗಳನ್ನು ಸಂಧ್ಯಕ್ಷರಗಳಲ್ಲಿ ಸಂಸ್ಕೃತ ವ್ಯಾಕರಣಕಾರರು ಸೇರಿಸಿದ್ದಾರೆ. ಆದರೆ ಏ ಹಾಗೂ ಓ ಇವು ಕನ್ನಡ ಭಾಷೆಯಲ್ಲಿ ಕೇವಲ ದೀರ್ಘಸ್ವರಗಳು ಮಾತ್ರ. ಸಂಧ್ಯಕ್ಷರಗಳನ್ನು ಉಚ್ಚಾರಕ್ಕನುಗುಣವಾಗಿ ಮೂರು ರೀತಿಯಲ್ಲಿ ನಾವು ವಿಂಗಡಿಸಬಹುದಾಗಿದೆ.[೧]

೧. ಸಂಯುಕ್ತವರ್ಣಗಳು, ೨. ಸ್ವರಾನುವೃತ್ತಿ ೩. ಅರ್ಧ ಸ್ವರದಿಂದೊಡ ಗೂಡಿದ ಸ್ವರಾನುವೃತ್ತಿ.

ಎರಡು ಸ್ವರಗಳು ತಮ್ಮ ಮೂಲ ಗುಣಧರ್ಮಗಳನ್ನು ಒಟ್ಟಿಗೆ ಉಚ್ಚರಿತ ವಾಗುವಂತೆ ಸಂಯುಕ್ತಗೊಳಿಸಿಕೊಂಡು ಭಾಷೆಯಲ್ಲಿ ವರ್ಣವೈಶಿಷ್ಟ್ಯ ಹೊಂದಿ ಬಳಕೆಗೊಳ್ಳುತ್ತಿದ್ದರೆ ಅವುಗಳಿಗೆ ಸಂಯುಕ್ತವರ್ಣಗಳೆನ್ನಬಹುದು. ಉದಾಹರಣೆಗೆ ಏ, ಓ, ಐ ಹಾಗೂ ಔ. ಸ್ವರಾನುವೃತ್ತಿಯಲ್ಲಿ ಎರಡು ಸ್ವರಗಳು ಒಂದರ ಅನಂತರ ಮತ್ತೊಂದು ಅನುಕ್ರಮವಾಗಿ ಬಂದು ಉಚ್ಚರಿಸಲ್ಪಡುತ್ತವೆ. ಅರ್ಧಸ್ವರ

---

೧. ನೋಡಿ-ಸವದತ್ತಿಮಠ ಸಂಗಮೇಶ–ದ್ರಾವಿಡ ಭಾಷಾ ವ್ಯಾಸಂಗ (೧೯೭೬)ಪು.೬೦–೬೫.

ದಿಂದೊಡಗೂಡಿದ ಸ್ವರಾನುವೃತ್ತಿಯು ಸ್ವರಾನುವೃತ್ತಿಯಂತೆಯೇ ಇದ್ದು ಸ್ವರದ ಮುಂದೆ ಅರ್ಧಸ್ವರ ಒಡಗೂಡಿರುತ್ತದೆ. ಸಂಧ್ಯಕ್ಷರಗಳಲ್ಲಿ ಸ್ವರಾನುವೃತ್ತಿ ಅ+ಇ, ಅ+ಉ ಎಂಬುದಾಗಿಯೂ ಅರ್ಧ ಸ್ವರಾನುವೃತ್ತಿ ಅ+ಯ್, ಅ+ವ್ ಎಂಬುದಾಗಿಯೂ ಆಗುತ್ತದೆ. ಇವುಗಳಲ್ಲಿ ಸಂಯುಕ್ತ ವರ್ಣವನ್ನೇ ಸಂಧ್ಯಕ್ಷರವೆಂದು ಕರೆಯುವುದು ಹೆಚ್ಚು ಉಚಿತವೆನಿಸುತ್ತದೆ. ಕನ್ನಡದಲ್ಲಿ ಐ ಹಾಗೂ ಔ ಇವುಗಳನ್ನು ಸಂಧ್ಯಕ್ಷರಗಳೆಂದು ಬಹುಜನ ವಿದ್ವಾಂಸರು ಹೇಳುತ್ತ ಬಂದಿದ್ದರೂ ಅವುಗಳ ಉಚ್ಚಾರವು ಸಂಸ್ಕೃತ ಸಂಧ್ಯಕ್ಷರಗಳಂತೆ ಇಲ್ಲದಿರುವುದನ್ನು ಯಾರೂ ಗಮನಿಸಿರುವಂತೆ ತೋರುವುದಿಲ್ಲ. ದ್ರಾವಿಡ ಭಾಷೆಗಳಲ್ಲಿ ಈ ಸಂಧ್ಯಕ್ಷರಗಳ ಬಗೆಗೆ ಖಚಿತವಾಗಿ ಕಾಲ್ಡುವೆಲ್ ಅಭಿಪ್ರಾಯಿಸಿದ್ದಾರೆ.೧ ಅವರ ಅಭಿಪ್ರಾಯದ ಮೇರೆಗೆ ದ್ರಾವಿಡ ಭಾಷೆಗಳಲ್ಲಿ ಸಂಧ್ಯಕ್ಷರಗಳು ಅರ್ಧ ಸ್ವರದಿಂದೊಡಗೂಡಿದ ಸ್ವರಾನುವೃತ್ತಿಯಾಗುತ್ತವೆ. ಅವು ಸ್ವತಂತ್ರ ಧ್ವನಿಮಾಗಳಲ್ಲ.

5.8.2 ಕನ್ನಡದಲ್ಲಿ ಹಸಿರು ಪಯಿರು ಶಬ್ದಗಳನ್ನೇ ಎತ್ತಿಕೊಂಡರೆ ಹಸಿರು ಮೂಲದಲ್ಲಿ ಪಸಿರು ಅದಕ್ಕೂ ಹಿಂದೆ ಪಚಿರ್ ಆಗಿತ್ತು. ಈ 'ಪಚಿರ್' ಇಂದು ಪೈರು ಆಗಿದೆ. ಪಚ್+ಇರ್> ಪಯ್+ಇರ್> 'ಪಯಿರ್' ಆಯಿತೆ? ಅಥವಾ ಪ+ಇರ್> ಪೈರ್ ಆಯಿತೆ? ಎಂಬುವನ್ನು ಪರಿಶೀಲಿಸಿದರೆ ದ್ರಾವಿಡ ಭಾಷೆಗಳಲ್ಲಿ ಅ+ಇ ಎಂಬುದಾಗಿ ಎರಡು ಸ್ವರಗಳು ಒಟ್ಟಿಗೆ ಉಚ್ಚಾರಿತವಾಗುವ ಬಗೆ ಇರಲಿಲ್ಲ. ಆದ್ದರಿಂದ ಪೈರ್‌ಗಿಂತ ಪಯಿರ್ (ಚ> ಯ್ ಬದಲಾವಣೆ) ಎಂಬುದೇ ಸಮಂಜಸವೆನಿಸುತ್ತದೆ. ಇಲ್ಲಿ ಪ್ರಥಮಾಕ್ಷರದ 'ಅ' ದ್ವಿತೀಯಾಕ್ಷರದ 'ಇ' ಸ್ವರಗಳ ಮಧ್ಯ 'ಯ್' ಅರ್ಧಸ್ವರ ಸೇರಿದೆ. ಇಷ್ಟಾದರೂ ಕೆಲವರು ಪೈರು ಎಂಬುದಾಗಿ ಸಂಧ್ಯಕ್ಷರವನ್ನು ಸೂಚಿಸಿ ಬರೆಯುತ್ತಾರೆ. ಇದು ಸಂಸ್ಕೃತದ ಪ್ರಭಾವದಿಂದಲ್ಲದೆ ಮತ್ತೇನೂ ಅಲ್ಲ.

'ಐದು' ಎಂಬ ಸಂಖ್ಯಾವಾಚಕದಲ್ಲಿ ಮೂಲತಃ ಐ ಇಲ್ಲವೇ ಇಲ್ಲ. ಈ ಶಬ್ದವನ್ನು ಮೂಲ ದ್ರಾವಿಡದಲ್ಲಿ ಚ್ ಎಂದು ಪುನರ್ರಚಿಸಲಾಗಿದೆ.೨ ಅನೇಕ ಕಡೆ 'ಅಯ್ದು' ಎಂದೇ ಅದನ್ನು ಬರೆದಿರುವದನ್ನು ಕಾಣಬಹುದು. 'ಕವುಂಗು' ಶಬ್ದ

೧. ನೋಡಿ, Caldwell-Comparative Grammar of Dravidian or South Indian Family of Languages p. 136.

೨. ನೋಡಿ. ನಾಗರಾಜಯ್ಯ ಹಂಪ ದ್ರಾವಿಡ ಸಂಖ್ಯಾವಾಚಕಗಳು.

ದಲ್ಲಿ ಪ್ರಥಮಾಕ್ಷರದ 'ಅ' ಹಾಗೂ ದ್ವಿತೀಯಾಕ್ಷರದ 'ಉ' ಸ್ವರಗಳ ಮಧ್ಯ 'ವ್' ಅರ್ಧಸ್ವರ ಸೇರಿದೆ. ಇಲ್ಲಿಯೂ ಅ+ಉ ಉಚ್ಚಾರವಿಲ್ಲ. ಕನ್ನಡದಲ್ಲಿ ಔಂಕು, ಕೌಂಗು, ಮೈ, ಗೈ ಮುಂತಾದವುಗಳನ್ನು ಅವುಂಕು, ಕವುಂಗು, ಮೆಯ್, ಗೆಯ್ ಎಂದೇ ಬರೆಯುವ ವಾಡಿಕೆ ಇತ್ತು. ಸಂಸ್ಕೃತದ ಐ ಹಾಗೂ ಔ ಇವುಗಳನ್ನು ಹೊಂದಿದ ಪದಗಳನ್ನು ಕನ್ನಡವು ತದ್ಭವೀಕರಿಸಿಕೊಳ್ಳುವಾಗ ಅವುಗಳನ್ನು ಸುಲಭ ಉಚ್ಚಾರಕ್ಕೆ ಅಳವಡಿಸಿಕೊಳ್ಳುವದು ಕಂಡುಬರುತ್ತದೆ. ಉದಾಹರಣೆಗೆ: ದ್ರೌಪದಿ> ದುರುಪದಿ. ಕೌಪೀನ > ಕೋವಣ, ಔಷಧ> ಅಗಸುದ್ಧಿ, ಯೌವನ> ಜವ್ವನ, ವೈಶಾಖ> ಬೇಸಿಗೆ, ವೈದ್ಯ> ಬೆಜ್ಜ, ಸೈಂಧವ> ಸೆಂಧವ, ಇತ್ಯಾದಿ.

ಈ ಬಗೆಯ ಸುಲಭೀಕರಣ ನಡೆದಿರುವದು ಆಕಸ್ಮಿಕವಂತೂ ಅಲ್ಲ. ಕನ್ನಡದಲ್ಲಿ ಸಂಧ್ಯಕ್ಷರಗಳು ಇದ್ದುದೇ ನಿಜವಾದರೆ ಈ ಶಬ್ದಗಳು ಹೀಗೆ ಬದಲಾವಣೆಗೆ ಒಳಗಾಗುತ್ತಿರಲಿಲ್ಲ.

ಬಯ್-ಬಾಯ್, ಕೆಯ್-ಕಾಯ್
ಪಯ್-ಪಾಯ್, ಸಯ್-ಸಾಯ್

ಇಂತಹ ಉದಾಹರಣೆಗಳಲ್ಲಿ 'ಅಯ್' ಹಾಗೂ 'ಆಯ್' ಇವುಗಳಲ್ಲಿ ಸ್ಪಷ್ಟವಾದ ಭಿನ್ನತೆಯನ್ನು ಮನಗಾಣಬಹುದು. ಇದರಿಂದ 'ಅಯ್' ಇದನ್ನು ಸಂಧ್ಯಕ್ಷರವೆಂದು ಪರಿಗಣಿಸಿ 'ಐ' ಎಂಬ ಲಿಪಿ ಸಂಕೇತವನ್ನು ಕೊಟ್ಟಿರುವಂತೆ 'ಆಯ್' ರೂಪವನ್ನು ದೀರ್ಘ ಸಂಧ್ಯಕ್ಷರವೆಂದು ಪರಿಗಣಿಸಿ ಅದಕ್ಕೂ ಒಂದು ಹೊಸ ಲಿಪಿ ಸಂಕೇತವನ್ನು ಏಕೆ ಕೊಡಬಾರದು ಎನಿಸುತ್ತದೆ. ಹಾಗಿಲ್ಲವೆಂದಮೇಲೆ 'ಐ' ಇದು ಕೇವಲ ಹ್ರಸ್ವ ಸ್ವರಗಳಿಗೆ ಮಾತ್ರ ಸೀಮಿತವೆನ್ನುವದು ಸ್ಪಷ್ಟವಾಗುತ್ತದೆ. 'ಅಯ್', ಅಯ್" ಎಂಬ ಉಚ್ಚಾರಗಳನ್ನು ಅಂತೆಯೇ ಅವುಗಳನ್ನು ಬರೆದರೆ ಯಾವ ಅಭ್ಯಂತರವಿಲ್ಲವೆಂದಮೇಲೆ 'ಐ' 'ಔ' ಗಳಿಗೆ ಸ್ವತಂತ್ರವಾದ ಲಿಪಿ ಸಂಕೇತದ ಆವಶ್ಯಕತೆಯೆ ಇಲ್ಲ. ಇತರ ದ್ರಾವಿಡ ಭಾಷೆಗಳಂತೆ ಕನ್ನಡದಲ್ಲೂ ಅಯ್, ಅವ್ ಎಂಬ ಉಚ್ಚಾರವೇ ಇದೆ.

---

೧. ನೋಡಿ. ಆಯ್, ಎಯ್ ಇತ್ಯಾದಿ ಹೆಚ್ಚಿನ ವಿವರಣೆಗಾಗಿ : ಕೃಷ್ಣಭಟ್ಟ ಸೇಡಿಯಾಪು (೧೯೫೪) ಕನ್ನಡ ವರ್ಣಗಳು. ಪು. ೩೮-೬೧.

5.2.8.3. ಕೇಶಿರಾಜನು ಸಂಧ್ಯಕ್ಷರಗಳನ್ನು ಸಂಸ್ಕೃತದವುಗಳೆಂದೇ (ಸೂ. :೦) ಸೂಚಿಸಿದ್ದಾನೆ. 'ಸಂಧ್ಯಕ್ಷರಗಳೆಂದೊಡೆ ಸಂಸ್ಕೃತ ವ್ಯವಹಾರದಲ್ಲಿ ಸಂಧಿಯಾಕ್ಷರಗಳೆಂದುಋಬ್ಬುದು; ಅದೆಂತೆಂದೊಡೆ ಅಕಾರಮುಂ ಇಕಾರಮುಂ ಕೂಡಿ ಸಂಧಿಯಾಗೆ ಏಕಾರಂ ಪುಟ್ಟುಗುಂ, ಅಕಾರಮುಂ ಉಕಾರಮುಂ ಕೂಡಿ ಸಂಧಿಯಾಗೆ ಐಕಾರಂ ಪುಟ್ಟುಗುಂ, ಅಕಾರಮುಂ ಓಕಾರಮುಂ ಕೂಡಿ ಸಂದಿಯಾಗಿ ಔಕಾರಮುಂ ಪುಟ್ಟುಗುಂ'. ಎಂದು ತನ್ನ ವಿಚಾರವನ್ನು ಸ್ಪಷ್ಟಪಡಿಸಿ ಈ ಉದಾಹರಣೆಗಳನ್ನು ನೀಡಿದ್ದಾನೆ :

ಅ+ಇ = ಏ → ನಿಜ+ ಇಷ್ಟಸಿದ್ಧಿಗಳ್ = ನಿಜೇಷ್ಟಸಿದ್ಧಿಗಳ್
ಅ + ಏ = ಐ → ಸಮಸ್ತ+ಏಕಾಕ್ಷರಂ=ಸಮಸ್ತೈಕಾಕ್ಷರಂ
ಅ + ಉ = ಓ → ವಿದಿತ + ಉಭಯ ಕರ್ತೃಕಂ=ವಿದಿತೋಭಯಕರ್ತೃಕಂ
ಅ + ಓ = ಔ → ವಿದಿತ + ಓಕಾರಂ = ವಿದಿತೌಕಾರಂ

ಇವೆಲ್ಲವೂ ಸಂಸ್ಕೃತದ ಉದಾಹರಣೆಗಳಾಗಿವೆ. ಎರಡು ಶಬ್ದಗಳನ್ನು ಸೇರಿಸಿ ಉಚ್ಚರಿಸುವಾಗ ಒಂದರ ಮುಂದೆ ಮತ್ತೊಂದು ಸ್ವರ ಬಂದಾಗ ಆ ಸ್ವರ ಉಚ್ಚಾರಕ್ಕೆ ಒಂದು ಪ್ರತ್ಯೇಕ ವರ್ಣಸ್ಥಾನ ಕೊಡುವದು ಎಷ್ಟರಮಟ್ಟಿಗೆ ಕನ್ನಡಕ್ಕೆ ಸಮಂಜಸವಾಗುತ್ತದೆ ?

ಈ ನಾಲ್ಕಕ್ಕೆ ಮಾತ್ರ ಸಂಧ್ಯಕ್ಷರಗಳೇಕೆ ಎನ್ನಬೇಕು ? ಅ+ಇ=ಏ ಸರಿಯೋ ಅ+ಇ=ಐ ಸರಿಯೋ ? ಅನೇಕ ಕಡೆಗೆ ಅ+ಏ ಏ ಮಾತ್ರ ಬರುವುದಲ್ಲ ? ಇನ್ನುಳಿದ ಸ್ವರಗಳು ಒಂದರ ಮುಂದೆ ಮತ್ತೊಂದು ಬಂದಾಗ ಸಂಧಿ ನಡೆಯುವುದಿಲ್ಲವೆ ? ಈ ಎಲ್ಲ ಪ್ರಶ್ನೆಗಳಿಗೆ ನಮಗೆ ಸಮಾಧಾನಕರ ಉತ್ತರ ದೊರೆಯುವುದಿಲ್ಲ. ಕೇಶಿರಾಜ ಎಲ್ಲ ಪ್ರಶ್ನೆಗಳಿಗೆ ೬೪ ನೆಯ ಸೂತ್ರದಲ್ಲಿ ನೀಡಿರುವ ಈ ಉದಾಹರಣೆಗಳನ್ನು ಗಮನಿಸಿರಿ.

ಶುದ್ಧ+ಇಸಿದು=ಶುದ್ಧಯಿಸಿದಂ, ತಾರ+ಇಸಿದಂ=ತಾರಯಿಸಿದಂ
ಪೂರ+ಇಸಿದಂ=ಪೂರಯಿಸಿದಂ, ಕೋರ+ಇಸಿದಂ=ಕೋರಯಿಸಿದಂ,
ಮೇಳ್+ಇಸಿದಂ=ಮೇಳಯಿಸಿದಂ, ಸೊಗ+ಇಸು=ಸೊಗಯಿಸು.

ಇಲ್ಲಿ ಅ+ಇ=ಎ ಆಗಿಲ್ಲ ಅಷ್ಟೇ ಏಕೆ ಐ ಕೂಡ ಆಗಿಲ್ಲ. ಇನ್ನೊಂದೆಡೆಗೆ ಐ, ಔ ಗಳನ್ನು ಕನ್ನಡದಲ್ಲಿ ಅಯ್, ಅವ್ ಎಂದು ಬರೆಯಬಹುದಾಗಿದೆಯೆಂದು ಅವನೇ ಹೇಳುತ್ತಾನೆ. ಈ ಗೊಂದಲವನ್ನು ನೋಡಿದರೆ ಕೇಶಿರಾಜನಿಗೂ ಸಂಧ್ಯಕ್ಷರಗಳ ಸ್ಪಷ್ಟ ಕಲ್ಪನೆ ಇದ್ದಂತಿಲ್ಲ. -ಸಂಸ್ಕೃತದ ಅನುಕರಣೆಯಿಂದ ಕನ್ನಡಕ್ಕೆ ಹೇಳ ಹೋಗಿದ್ದಾನೆ ಅಷ್ಟೇ. ವಾಸ್ತವವಾಗಿ ಸಂಧ್ಯಕ್ಷರಗಳು ಕನ್ನಡದಲ್ಲಿ ಇಲ್ಲವೇ ಇಲ್ಲ. ಸಂಸ್ಕೃತದಲ್ಲಿರುವದರಿಂದ ಅದರಲ್ಲಿ ಐ ಔ ಇವೆರಡನ್ನು ಕನ್ನಡಕ್ಕೆ ಎಳೆದು ತರಲಾಗಿದೆ.

5.2.8.4 ಕನ್ನಡದ ಉಚ್ಚಾರದಲ್ಲಿ ಮೊದಲೇ ಇಲ್ಲದ, ಲಿಪಿಯಲ್ಲಿ ಮಾತ್ರ ಇಟ್ಟುಕೊಳ್ಳಲಾಗಿರುವ ಐ ಹಾಗೂ ಔ ಸಂಧ್ಯಕ್ಷರಗಳನ್ನು ವರ್ಣಮಾಲೆಯಲ್ಲಿ ಸೇರಿಸದಿರುವುದೇ ಉಚಿತ. ಯಾಕೆಂದರೆ ಕನ್ನಡ ವರ್ಣಮಾಲೆಯಲ್ಲಿ ಈಗಾಗಲೇ 'ಅ', 'ಯ್', 'ವ್' ಇರುವುದರಿಂದ ಐ, ಔ ಗಳ ಕಾರ್ಯವನ್ನು ಇವು ನಿರ್ವಹಿಸ ಬಲ್ಲವು. ವರ್ಣಮಾಲೆಯ ಸಂಖ್ಯೆ ಭೌತಿಕವಾಗಿ ಎರಡು ಕಡಿಮೆಯಾಗುವುದ ರಿಂದಲೂ ಐ, ಔ, ಸಂಕೇತಗಳನ್ನು ಬಿಟ್ಟು ಬಿಡುವುದರಿಂದ ಕನ್ನಡಕ್ಕೆ ಯಾವ ಕೊರತೆಯೂ ಆಗುವದಿಲ್ಲ.

## 5.2.9 **ಱುಳ, ಕುಳ, ಕ್ಷಳ. :**

**5.2.9.1** ಱ ಆಕಾರದಂತೆ ಇರುವ ಹಳಗನ್ನಡ ೞ, ಕನ್ನಡದಲ್ಲಿ ಸಹಜವಾಗಿರುವ **ಳ**, ಸಂಸ್ಕೃತದ ಲ ಅಥವಾ ಳ ಈ ಮೂರು ಳ ಕಾರಗಳನ್ನೇ ಅನುಕ್ರಮವಾಗಿ ಱುಳ, ಕುಳ, ಕ್ಷಳ ಎಂದು ಕರೆಯಲಾಗಿದೆ. ಕುಳ ಮತ್ತು ಕ್ಷಳ ಇವುಗಳನ್ನು ಕಾವ್ಯದಲ್ಲಿ ಆದಿ ಪ್ರಾಸಕ್ಕೆ ಬಳಸುವಾಗ ಮಿಶ್ರ ಮಾಡಬಹುದಾದರೂ ಕನ್ನಡ ಲ ಕಾರ ಹಾಗೂ ಸಂಸ್ಕೃತದ ಲ ಕಾರಗಳನ್ನು ಪ್ರಾಸದಲ್ಲಿ ಕೂಡಿಸಬಾರದೆಂದು ಕೇಶಿರಾಜ (ಸೂ. ೧೫) ಹೇಳಿದ್ದಾನೆ. ಈ ವಿಷಯ ನೇರವಾಗಿ ವ್ಯಾಕರಣಕ್ಕೆ ಸೇರುವುದಿಲ್ಲವಾದರೂ ಕನ್ನಡ ಸಂಸ್ಕೃತ ಧ್ವನಿಮಾಗಳ ಮಿಶ್ರಣ ತರವಲ್ಲವೆಂಬ ಅಭಿಪ್ರಾಯ ಇಲ್ಲಿರುವುದು ಗಮನಾರ್ಹ. ಱುಳ, ಕುಳ, ಕ್ಷಳಗಳು ಪ್ರಾಸಕ್ಕೆ ಸಲ್ಲುವುದಿಲ್ಲವಾದರೂ ವರ್ಣಾ ವೃತ್ತಿಯಲ್ಲಿ ಸೇರುತ್ತವೆ ಎನ್ನುತ್ತಾನೆ. ಱುಳ, ಕುಳ, ಕ್ಷಳಗಳ ಬಗೆಗೆ ಕೇಶಿರಾಜನು ಪ್ರಯಾಸಪಟ್ಟು ಅವುಗಳ ಸ್ವರೂಪವನ್ನು ಸ್ಥಾಪಿಸಲು ಯತ್ನಿಸಿದ್ದಾನೆ. ಆದರೆ ಕ್ಷಳ–ಲ. ಕುಳ–ಕ್ಷಳ, ಱುಳ–ಕುಳ ಹೀಗೆ ಪರಸ್ಪರವಾಗಿ ಅದರ ಸ್ಥಾನದಲ್ಲಿ ಇದು, ಇದರ ಸ್ಥಾನದಲ್ಲಿ ಅದು ಅದಲು ಬದಲಾಗಿ ಬಳಕೆಗೊಳ್ಳುವ ಬಗೆ ಕೇಶಿರಾಜನಿಗಿಂತ

ಎಷ್ಟೋ ಕಾಲ ಮುಂಚೆಯೆ ಅಂದರೆ ೯ನೆಯ ಶತಮಾನದ ವೇಳೆಗೆ ಆರಂಭವಾಗಿತ್ತು. ಕಾವ್ಯಗಳಲ್ಲೂ ನಿಯಮ ಸಡಿಲಗೊಂಡಿತ್ತು. ಹರಿಹರನಂತೂ ಈ ಗೊಂದಲವೇ ಬೇಡವೆಂದು—

ನೋಡುವಡೊಂದಕ್ಕರಮುದು
ಮಾಡುವ್ವೊಡುಚ್ಚರಣೆಗರಿದು ಮೂರು ತೆರಸಂ
ಕೂಡೆ ಕವಿತತಿ ವಿಚಾರಿಸೆ
ಬೇಡದಱಿಂ ಱಿಃ ಕುಳ ಕ್ಷಳಂಗಳನಿದಱೊಳ್

ಎಂದು ಗಿರಿಜಾಕಲ್ಯಾಣದಲ್ಲಿ ಘಂಟಾಘೋಷವಾಗಿ ಸಾರಿದನು. ಕೇಶಿರಾಜನು ವೈಯ್ಯಾಕರಣಿ ಅದರಲ್ಲೂ ಪ್ರಯೋಗಶರಣನಾದ ವೈಯ್ಯಾಕರಣಿ. ಅತನಿಗೆ ನೇಮಿಚಂದ್ರ, ಹರಿಹರ ಮುಂತಾದವರು ಱಿ, ಕುಳ, ಕ್ಷಳ ನಿಯಮವನ್ನು ಮೀರಿದಂತೆ ಕೇಶಿರಾಜ ಮೀರುವ ಸ್ಥಿತಿಯಲ್ಲಿರಲಿಲ್ಲ. ಅವು ರೂಢಿಯಿಂದ ಗತಿಸಿ ಹೋಗುತ್ತಿದ್ದರೂ ಅವುಗಳನ್ನು ಕಾಯ್ದುಕೊಳ್ಳಲು ಶ್ರಮಪಟ್ಟ, ಅಷ್ಟೇ ಏಕೆ ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಎರಡನೆಯ ಲಕ್ಷಣವಾಗಿ ಱಿ, ಕುಳ, ಕ್ಷಳಗಳನ್ನು ಸೇರಿಸಿ (ಸೂ. ೩೪೨) ತನ್ನ ಹಟವನ್ನೇ ಸಾಧಿಸಿದನು.

5.2.9.2 ಱಿ, ಕುಳ ಕ್ಷಳಗಳ ಉಚ್ಚಾರ ಸಾಮಾನ್ಯವಾಗಿ ಮೂರ್ಧನ್ಯ ವ್ಯಂಜನದಂತಿರುತ್ತದೆ. ಕೇಶಿರಾಜನು ಱಿ ದ ಉಚ್ಚಾರ ಡ ಕಾರಾಶ್ರಿತವೆಂದು ಹೇಳಿರುವುದರಿಂದ ಪ್ರಾಯಶಃ ಱ್ ಹಾಗೂ ಡ್ ಇವೆರಡರ ಮಧ್ಯ ಱ್ ಕಾರ ಉಚ್ಚರಿತವಾಗುತ್ತಿರಬಹುದು. "ಡ ಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಿವೆಸರ ಱಿ ಕಾರಂ ಪುಟ್ಟುಗುಂ ಡ ಕಾರಂ ಮೂರ್ಧನ್ಯಂ ಱಿನದಱೊಳೇಕ ಸ್ಥಾನಿ" ಎಂದೂ ಸ್ಪಷ್ಟೀಕರಿಸಿರುವುದನ್ನಿಲ್ಲಿ ಗಮನಿಸಬೇಕು. ಇದರಂತೆ "ಲ ಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಕುಳವೆಸರ ಳ ಕಾರಂ ಪುಟ್ಟುಗುಂ ಲಕಾರಂ ದಂತ್ಯಂಕುಳನದಱೊಳೇಕ ಸ್ಥಾನಿ"[೨] ಆದ್ದರಿಂದ ಱ್‌ಕಾರವು ಡ್ ಕಾರದ ಉಚ್ಚಾರವನ್ನು (ಅಂದರೆ ಮೂರ್ಧನ್ಯ) ಳ್ ಕಾರವು ಲ್ ಕಾರದ ಉಚ್ಚಾರವನ್ನು (ಅಂದರೆ ದಂತ್ಯ)ಹೆಚ್ಚು ಹೋಲುತ್ತಿತ್ತೆಂದೂ ಇದರಿಂದ ತಿಳಿದು ಬರುತ್ತದೆ. ಇದಕ್ಕೆ ಸಮರ್ಥನೆಯನ್ನು ಒದಗಿಸುವ ಹಲವಾರು ಉದಾಹರಣೆಗಳು ಶಬ್ದಮಣಿದರ್ಪಣದಲ್ಲೇ ಅಲ್ಲಲ್ಲಿ ದೊರೆಯುತ್ತವೆ.

೧. ಶಬ್ದಮಣಿದರ್ಪಣಂ— (ಐದನೆ ಆವೃತ್ತಿ)(೧೯೭೪.) ಸಂ: ಡಿ. ಎಲ್ ಎನ್. ಪು. ೫೦.
೨. ಅದೇ.

ಡ್—ಱ್ : ಕಾಡ್ಗಿಚ್ಚು—ಕಾಱ್ಕಿಚ್ಚು ಎರಡ್ಮಾತ್ತು—ಎರಱ್ಮಾತ್ತು
ಮಾಡ್ಪ—ಮಾಱ್ಪ ನೋಡ್ಪ—ನೋಱ್ಪ
ಬೇಡ್ವ—ಬೇಱ್ವ ನಾಡ್ಕಡೆ—ನಾಱ್ಕಡೆ
ಲ್—ಳ್ : ಜಲಂ—ಜಳಂ ಫಲಂ—ಫಳಂ
ತಿಲಂ—ತಿಳಂ ಚಲಂ—ಚಳಂ

ಱಟ ಕನ್ನಡವಲ್ಲಿ ಸಹಜವಾದುವೆಂಬುದನ್ನು ಸ್ಥಾಪಿಸಲು ಒಂದರ್ಥದಿಂದ ಐದರ್ಥಗಳನ್ನು ಒಳಗೊಂಡ ಪ್ರಮಾಣ ಪುರುಷರು ಕಾವ್ಯಮಾರ್ಗದಲ್ಲಿ ಬಳಸುವ ೧೮೧ ಶಬ್ದಗಳ ಪಟ್ಟಿಯನ್ನು ಸಮರ್ಥನೆಗೆಂದು ನೀಡಿದ್ದಾನೆ. ಇಷ್ಟೆಲ್ಲ ಮಾಡಿದರೂ ಕೇಶಿರಾಜನಿಗೆ ಕೆಲವು ಸಂದೇಹಗಳು ಉಳಿದವು. ಒತ್ತಕ್ಷರದಿಂದೊಡಗೂಡಿದ ಱಟಕ್ಕೆ ಪ್ರತಿಯಾಗಿ ರ್ ಕಾರದ ಒತ್ತಕ್ಷರವನ್ನು ಪ್ರಾಸಕ್ಕೆ ಹಿರಿಯರು ಪ್ರಯೋಗಿಸಿದ್ದಾರೆಂಬುದನ್ನು "ಅಂತದು ಶುದ್ಧಂ" (ಸೂ. ೩೪) ಎಂದು ಮೆತ್ತಗೆ ಒಪ್ಪಿಕೊಳ್ಳುತ್ತಾನೆ. ಝುಳಕ, ಝುಳಪಿಸಿದ, ಜಾಂಗುಳಿ, ಮೆಂಬುಳಿ, ಅಳಮಾಳ, ಶಮಾಳ, ಏಳಿಗೆ, ಹಿಂದುಳಿ, ಜಂಗುಳಿ, ಪುತ್ತಳಿ, ಗೋಳಿ ಮುಂತಾದ ಶಬ್ದಗಳಲ್ಲಿರುವ ಱಟಕ್ಕೆ ಸಂಶಯವಿರುವುದನ್ನು ತಾನೇ ಎತ್ತಿತೋರಿ ಅವುಗಳ ಪ್ರಯೋಗ ನಿರ್ಧರಿಸಬೇಕೆನ್ನುತ್ತಾನೆ. (ಸೂ. ೩೫) ಆಮೇಲೆ ಕುಳ ಯಾವ ಯಾವ ಪದಗಳಲ್ಲಿ ಬರುತ್ತವೆಂಬುದನ್ನು ಪಟ್ಟಿಮಾಡುತ್ತಾನೆ. (ಸೂ. ೩೬, ೩೭) ಬೆರಲ್, ಒರಲ್, ಕೊರಲ್, ಸರಲ್ ಪರಲ್ ಮುಂತಾದವುಗಳನ್ನು ಬೆರಳ್, ಕೊರಳ್, ಸರಳ್ ಎಂದು ಉಚ್ಚರಿಸಬಾರದು. ಗ್ರಾಮ್ಯರು ಅರಿಯದೆ ಇಂಥವುಗಳನ್ನು ಕುಳಾಂತ ಭ್ರಮೆಯಿಂದ ಕೊರಳ್, ಬೆರಳ್ ಇತ್ಯಾದಿಯಾಗಿ ಉಚ್ಚರಿಸುತ್ತಾರೆ ಎಂದು ಹಳಿಯುತ್ತಾನೆ. (ಸೂ. ೩೮) ಸ್ಫಟಿಕ, ಪೇಟಿಕೆ, ವೀಟಿಕೆ ಮುಂತಾದ ಅನೇಕ ಶಬ್ದಗಳಲ್ಲಿ ಟ್ ಕಾರದ ಬದಲಾಗಿ ಕುಳಗಳೇ ಬರಬೇಕಾಗಿತ್ತು. (ಸೂ. ೩೨) ಸ್ಫೋಟಕ–ಹೋಳಿಗೆ ಆದದ್ದು ಲಂಪಟ–ಲಂಪಳ ಆದದ್ದು ಸಂದೇಹ ಎನ್ನುತ್ತಾನೆ. ಟ್, ತ್, ಠ್, ರ್, ಕ್ಷಳ ಗಳಿಗೆ ಅಪಭ್ರಂಶತೆಯಿಂದ ಕವಿಗಳು ಱಟ ಬಳಸುತ್ತಾರೆ. (ಸೂ.೩೧) ದಾಳಿಂಬ, ಕುಂಬಳ, ಗೌಳಿ, ಗುಳಂ, ಜಗಳಿ, ವಿಳಂಗ ಇವುಗಳಲ್ಲಿ ಡ್ > ಱ್ > ಳ್ ಬದಲಾವಣೆ ಆಗಿದೆ. ಇದು ಅಪಭ್ರಂಶ ಎನ್ನುತ್ತಾನೆ (ಸೂ.೩೦,.

ಕೇಶಿರಾಜನಿಗೇ ಈ ಸಂದೇಹಗಳಿರುವುದರಿಂದ ಅವನ ಕಾಲಕ್ಕಾಗಲೇ ಱಟ ಕುಳ, ಕ್ಷಳಗಳೆಲ್ಲವೂ ಒಂದಾಗಿದ್ದವು. ರೂಢಿಯಲ್ಲಿ ತಪ್ಪುತ್ತಿದ್ದ ಅವುಗಳನ್ನು

ಹಿಡಿದಿಡುವ ವ್ಯರ್ಥಸಾಹಸ ಮಾಡಿವನಷ್ಟೇ ಆದರೂ ಅವನ ಪ್ರಯತ್ನ ಶ್ಲಾಘನೀಯವೇ ಸರಿ. ಆಧುನಿಕ ಕನ್ನಡದಲ್ಲಿ /ಲ್/ ಮತ್ತು /ಳ್/ ಎರಡು ಮಾತ್ರ ಉಳಿದಿವೆ.

**5.2.1.0 ಶಿಥಿಲದ್ವಿತ್ವ :***

5.2.10.1 ಲ್, ಳ್ ಹಾಗೂ ರ್ ಇವು ಪದಾಂತ್ಯದಲ್ಲಿ ಇದ್ದು ಅವುಗಳ ಹಿಂದಿನ ಅಕ್ಷರಗಳು ಹ್ರಸ್ವವಾಗಿದ್ದು ಇಂತಹ ಲ್, ಳ್, ಲ್ ಗಳ ಮುಂದೆ ಗ್, ದ್, ಜ್, ವ್ ಇವುಗಳಲ್ಲಿ ಯಾವುದೆ ವ್ಯಂಜನ ಬಂದರೂ ಅವೆರಡೂ ಕೂಡಿ ಆಗುವ ಉಚ್ಚಾರ 'ಶಿಥಿಲ'ವಾಗುತ್ತದೆ.

ಉದಾ : ಅಗಲ್+ಗಳ್ > ಅಗ್ಲ್ಗಳ್ ಎಸಳ್+ಗಳ್> ಎಸಳ್ಗಳ್
ಮುಗಳ್+ಗಳ್> ಮುಗುಳ್ಗಳ್, ಅಮಳ್+ಗಳ್> ಅಮಳ್ಗಳ್
ಪೆಸರ್+ಗಳ್> ಪೆಸರ್ಗಳ್, ಬಿದಿರ್+ಗಳ್> ಬಿದಿರ್ಗಳ್

ಪೊಗಲ್+ದಂ> ಪೊಗಲ್ದಂ. ನುಸುಳ್+ದಂ> ನುಸುಳ್ದಂ.
ತೊಡರ್+ದ್ಂ> ತೊಡರ್ದಂ,
ಅಲರ್+ಜೊಂಪಂ> ಅಲರ್ಜೊಂಪಂ, ಕದಿರ್+ಜೊನ್ನಂ> ಕದಿರ್ಜೊನ್ನಂ
ನಿಮಿರ್+ವನ್ > ನಿಮಿರ್ವನ್.

5.2.10. 2 ಕೇಶಿರಾಜನು (ಸೂ. ೫೨-೫೫) 'ಶಿಥಿಲ'ಕ್ಕಿಷ್ಟು ಹೇಳಿದರೂ,
ಅಲರ್+ತೋಂಟ> ಅಲರ್ದೋಂಟ
ಬೆಳರ್+ಕೆಂಪು> ಬೆಳರ್ಗೆಂಪು

ತಾನೇ ಹೇಳಿದ ಈ ಉದಾಹರಣೆಗಳಲ್ಲಿ. ರೇಫದ ನಂತರ ಗ್, ದ್, ಜ್ ಅಥವಾ ವ್ ಇವುಗಳಲ್ಲಿ ಯಾವುದೂ ಇಲ್ಲದಿದ್ದರೂ ಶಿಥಿಲ ಉಚ್ಚಾರವಿದೆ. ಆದರೆ ಇಲ್ಲಿರುವ 'ತ್' 'ಕ್' ಅಘೋಷ ಸ್ಪರ್ಶಗಳು ಘೋಷಸ್ಪರ್ಶ (ದ್, ಗ್,) ಗಳಾಗಿ

---

* ಶಿಥಿಲದ್ವಿತ್ವದ ಬಗೆಗೆ ಕೇಶಿರಾಜನ ವಿಚಾರಗಳ ವಿವರವಾದ ವ್ಯಾಖ್ಯಾನಕ್ಕಾಗಿ ನೋಡಿ : ಬಿಳಿಗಿರಿ ಎಚ್. ಎಸ್.- ಆಲೋಕ (ಭಾಗ ೧) ಪು.೧೩೪-೧೫೧.

ಪರಿವರ್ತಿತವಾಗಿರುವುದು ಗಮನಾರ್ಹ. ಅವು ಸಂಧಿಯಲ್ಲಿ ಘೋಷಗಳಾದುದರಿಂದಲೇ ಶಿಥಿಲತ್ವ ಘಟಿಸಿದೆ. ಇದರಿಂದ ತಿಳಿದು ಬರುವ ಅಂಶವೆಂದರೆ ಶಿಥಿಲತೆ ನಿರ್ದಿಷ್ಟ ಪರಿಸರದಲ್ಲಿ ಮಾತ್ರ ನಡೆಯುತ್ತದೆಂಬುದು.

**5.2.10.3** ಈ ಶಬ್ದಗಳನ್ನು ಗಮನಿಸಿರಿ–ದಡ, ದಣಿವು, ದೋಣಿ, ದನಿ, ದಸಿ, ಇದು, ಕುದಿ, ಕದ, ತಿದಿ, ಸದೆ. ಇವುಗಳಲ್ಲಿ 'ದ್' ಉಚ್ಚಾರ ಸ್ಪಷ್ಟವಿದೆ. ಆದರೆ ಪೊಗಟ್ದಂ, ತೊಡರ್ದಂ, ನುಸುಳ್ದಂ, ಈ ಉದಾಹರಣೆಗಳಲ್ಲಿ 'ದ್' ಉಚ್ಚಾರವನ್ನು ಅವುಗಳಿಗೆ ಹೋಲಿಸಿದರೆ ದಡ ಇತ್ಯಾದಿ ಮೇಲೆ ಹೇಳಿರುವ ಶಬ್ದಗಳಲ್ಲಿರುವಷ್ಟು ಸ್ಪಷ್ಟವಾಗಿ ಉಚ್ಚರಿಸಲ್ಪಡುವುದಿಲ್ಲವೆಂಬುದು ಗಮನಕ್ಕೆ ಬರುತ್ತದೆ. ಟ್, ಳ್, ರ್. (ಮೂರ್ಧನ್ಯ) ವ್ಯಂಜನಗಳಿಂದಾಗಿ ಅವುಗಳ ಮುಂದಿನ ಗ್, ದ್, ಜ್, (ಘೋಷ) ಹಾಗೂ ವ್ (ಅರೆವ್ಯಂಜನ) ಗಳು ತಮ್ಮ ಧ್ವನಿಯ ಗಡಸುತನದ (ಕಂಪನದ) ಕೆಲ ಭಾಗವನ್ನು ಕಳೆದುಕೊಳ್ಳುತ್ತವೆಂದಾಯಿತು. ಅಂತೆಯೆ ಮೂರ್ಧನ್ಯ ವ್ಯಂಜನವಿದ್ದಾಗ ಒಂದು ಬಗೆ ಇತರ ಪರಿಸರದಲ್ಲಿ ಮತ್ತೊಂದು ಬಗೆಯ ಉಚ್ಚಾರ ಗ್, ಜ್, ದ್, ವ್ ಗಳಿಗೆ ಇದ್ದಿರಬಹುದೆಂದು ನಿರ್ಣಯಿಸಲು ಸಾಧ್ಯ. ಈ ಇಡೀ ಸಾಧ್ಯತೆ ಹ್ರಸ್ವ ಸ್ವರ ಗಳಿದ್ದಾಗ ಮಾತ್ರವೆಂಬುದನ್ನು ಗಮನಿಸಬೇಕು. ಇದನ್ನು ಕೇಶಿರಾಜನೂ 'ಶಿಥಿಲತ್ವ ಮಗುರು ಪೂರ್ವ ಸ್ಥಿತಿಯಿಂ' ಎಂದು ಸ್ಪಷ್ಟವಾಗಿ ಹೇಳಿದ್ದು ಉಚಿತವಾಗಿದೆ.

**5.2.10.4** ಆದರೆ ಈ ನಿರ್ಣಯಕ್ಕೆ ತದ್ವಿರುದ್ಧವಾದ ಉದಾಹರಣೆಗಳೂ ಕನ್ನಡ ಶಾಸನ, ಪ್ರಾಚೀನ ಗ್ರಂಥಗಳಲ್ಲಿ ದೊರೆಯುತ್ತವೆಂಬುದು ತಿಳಿದರೆ ನಮ್ಮನ್ನು ದಾರಿ ತಪ್ಪಿಸುತ್ತವೆ. ಇಕ್ಕುಳ, ಅವಗ್ಗೆ, ಪೆರ್ಚ್ಚು ಇತ್ಯಾದಿ. ಇವು ಒತ್ತಟ್ಟಿಗಿರಲಿ, ಕೆಲವು ಪದಗಳು ನಿಯತವಾಗಿ ದ್ವಿತ್ವವಾಗುತ್ತವೆಂದು ಕೇಶಿರಾಜನೇ ಸಾರಿ (ಸೂ.೪೬)— ಎಟ್ದು, ಬೞಲ್ದಂ, ಬಟ್ದು, ಬಿಟ್ದಂ, ಸುರುಳ್ದಂ ಇಂತಹ ಉದಾ ಹರಣೆಗಳನ್ನು ನೀಡಿದ್ದಾನೆ. ಅಗುೞ್ದಂ, ನೆಗಟ್ದಂ, ಮುಸುಳ್ದಂ ಮುಂತಾದ ಕೆಲವು ಶಿಥಿಲವೂ ದ್ವಿತ್ವವೂ ಆಗುತ್ತವೆನ್ನುತ್ತಾನೆ. ಇದಕ್ಕೇನೆನ್ನೋಣ ? ಕೇಶಿರಾಜನ ಕಾಲಕ್ಕಾಗಲೆ ಈ ಗೊಂದಲ ಅಂದರೆ ಉಚ್ಚಾರಕ್ಕೂ ಬರವಣಿಗೆಗೂ ನಡುವೆ ಕಂದಕ ಬಹಳ ಆಳವಾಗಿ ಬಿದ್ದಿತ್ತು ಎನಿಸುತ್ತದೆ. ಹೊಸಗನ್ನಡಲ್ಲಿ 'ಇದಕ ಬರತಾನ' 'ಅದಕ ಹೋಗತಾನ' ಇಂತಹ ಉದಾಹರಣೆಗಳಲ್ಲಿ ಕ್, ತ್ ಗಳು ದ್ವಿತ್ವವಾಗುವ ಬದಲು ಶಿಥಿಲದಂತೆ ಉಚ್ಚರಿಸಲ್ಪಡುವುದಿಲ್ಲವೆ ? ಇದರಂತೆ ಶಿಥಿಲದ್ವಿತ್ವಗಳನ್ನು

ಕೂಡ ಹೇಗೆ ನಿರ್ದಿಷ್ಟವಾಗಿ ಉಚ್ಚರಿಸುತ್ತಿದ್ದರೊ ಹಾಗೆಯೆ ಬರೆಯುತ್ತಿದ್ದರೆಂಬು ದಕ್ಕೆ ಆಧಾರವಿಲ್ಲ. ಸರೇಫ ಸಂಯುಕ್ತ ದ್ವಿತ್ವ ಮತ್ತು ಹ್ರಸ್ವಗಳ ನಡುವೆ ಅರ್ಥ ವ್ಯತ್ಯಾಸವೂ ಇತ್ತೆಂದು ವಿದ್ವಾಂಸರ ಅಭಿಪ್ರಾಯ.೧ (ಉದಾ : ಕೆಳಗಿರ್ದ್ದ, ಕೆಳಗೆ ಇದ್ದ, ಓರ್ವಳೆ ಇರ್ದ್ದ, ಒಬ್ಬಳೆ ಇರುವ) 'ಇಂತಹ ವ್ಯತ್ಯಾಸ ಬರಬರುತ್ತ ಬರಹ ಕಾರರ ಕೈಗಳ ಕೇಡಿನಿಂದ ಮರೆಯಾಗಿ ಹೋದುದಾದರೆ ನಮಗೊಂದು ನಷ್ಟವೇ ಆಯ್ತೆಂದು ಬೇರೆ ಹೇಳಬೇಕಾಗಿಲ್ಲ.'೨

5.2.10.5 "ಮುಂದೆ ರೇಫ ಕಣ್ಮರೆಯಾಯ್ತು. ಬಹುಸಂಧಿ (Multi Syllabic) ಹಾಗೂ ಆದಿ ದೀರ್ಘಪದಗಳಲ್ಲಿ- ದಂಪತಿಗಳೆಡೆಯಲ್ಲಿ ಮಗುವೊಂದು ಅಡ್ಡವಾದಂತೆ ಸ್ವರವೊಂದು ಸೇರಿ ಸಂಯುಕ್ತತೆ ಸಡಿಲಿತು. ಅವರ್ಗೆ-ಅವರಿಗೆ ಸಂಬಂಧ ನೆಲೆಸಿತು ವಿಚ್ಛೇದನವಾಗಲಿಲ್ಲ."೩ ತನ್ನ ಕಾಲಕ್ಕಿಂತ ಬಹು ಮುಂಚೆಯೆ ಶಿಥಿಲವಾಗಿದ್ದ ಈ 'ಶಿಥಿಲದ್ವಿತ್ವ'ವನ್ನು ಕನ್ನಡದ ಅಸಾಧಾರಣ ಲಕ್ಷಣದಲ್ಲಿ ಕೇಶಿರಾಜನು ಸೇರಿಸಿದ್ದು ಅಸಾಧಾರಣವೇ ಸರಿ.

## ⁂ಅನುಬಂಧ

### 5.⁂.1 ಅಕ್ಷರ-ವರ್ಣ-ಶುದ್ಧಾಕ್ಷರ :

ಕೇಶಿರಾಜನು 'ಅಕ್ಷರ', 'ವರ್ಣ' ಹಾಗೂ ಶುದ್ಧಾಕ್ಷರ ಇವುಗಳನ್ನು ಒಂದೇ ಅರ್ಥದಲ್ಲಿ ಬಳಸಿದ್ದಾನೆ.—

ಅಕ್ಕರಮುಂ ವರ್ಣಮುಮೆಂ
ದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬಳಿಕಂ
ಬೊಕ್ಕುಚ್ಚರಿಸಲ್ಬಾರದು
ವಕ್ಕರಮಲ್ತವು ಘನಸ್ವನಾದಿ ಧ್ವನಿಗಳ್ (ಸೂ.೧೨)

೧. ಕುಶಾಲಪ್ಪಗೌಡ ಕೆ. ಶಿಥಿಲದ್ವಿತ್ವ- ಪ್ರಬುದ್ಧ ಕರ್ನಾಟಕ, ಸಂ. ೪೩ (೧೯೬೧)
೨. ಅದೇ ಪು. ೩೯
೩. ಕುಶಾಲಪ್ಪಗೌಡ ಕೆ. ಶಿಥಿಲದ್ವಿತ್ವ- ಪ್ರಬುದ್ಧ ಕರ್ನಾಟಕ, ಸಂ. ೪೩, ಪು. ೩೯.

ಈ ಸೂತ್ರದಲ್ಲಿ ಬರೆಯಲು ಬರುವಂಥವು ಆದರೆ ಉಚ್ಚರಿಸಲು ಬಾರದಂಥವು ಅಕ್ಷರಗಳಲ್ಲ. ಉಚ್ಚರಿಸಲು ಬಂದು ಬರೆಯಲು ಬಾರದಂಥವೂ ಅಕ್ಷರಗಳಲ್ಲ ಎಂಬ ಅಭಿಪ್ರಾಯ ಬರುವಂತೆ ವಿವರಿಸಿದ್ದಾನೆ. ಅಂದರೆ ಅಕ್ಷರಗಳಾಗಬೇಕಾದರೆ, ಬರೆಯಲೂ ಉಚ್ಚರಿಸಲೂ ಬರಬೇಕು. ಗುಡುಗು, ಮೊಳಗು ಮುಂತಾದ ಧ್ವನಿಗಳನ್ನು ಮನುಷ್ಯನು ಉಚ್ಚರಿಸಲಾರ ಹಾಗೆಯೆ ಬರೆಯಲೂ ಬಾರದು. ಆದುದರಿಂದ ಬರೆಯಲಿಕ್ಕೂ ಉಚ್ಚರಿಸಲಿಕ್ಕೂ ಬರುವಂಥವೇ ಅಕ್ಷರವೆಂದು ಅವನ ಆಶಯ. ಅವನ ಈ ವಿಚಾರ ಸೂತ್ರದಲ್ಲಿ ಅಸ್ಪಷ್ಟವಾಗಿದೆ. ಅವನು ಯಾವುದು ಅಕ್ಷರ ಅಲ್ಲ ಎಂಬುದನ್ನು ಮಾತ್ರ ಹೇಳಿದ್ದಾನೆ. ನಿರ್ದಿಷ್ಟವಾಗಿ ಯಾವುದಕ್ಕೆ ಅಕ್ಷರ ಎನ್ನಬೇಕೆಂಬ ವ್ಯಾಖ್ಯೆ ಇಲ್ಲಿಲ್ಲ.

5.*.1.2. ಆಧುನಿಕ ಭಾಷಾವಿಜ್ಞಾನ ವಿವರಿಸುವ ಅಕ್ಷರ, ಕೇಶಿರಾಜ ಹೇಳುವ ಅಕ್ಷರ ಅಥವಾ ವರ್ಣ ಇವುಗಳನ್ನು ಒಂದೇ ಎಂದು ಪರಿಗಣಿಸುವುದು ಕಷ್ಟ. 'ಅಕ್ಷರ' ಸ್ವತಂತ್ರವಾಗಿ ಉಚ್ಚರಿಸಲು ಬರುವ ಮಹತ್ವಪೂರ್ಣವಾದ ಒಂದು ಸಂಪೂರ್ಣ ಧ್ವನಿ ಘಟಕವಾಗಿದೆ. ಅದು ಕನಿಷ್ಠತಮ ಘಟಕವಾಗಿರಬೇಕಾಗಿಲ್ಲ. ಉಚ್ಚಾರ ಪೂರ್ಣವೆನಿಸಬೇಕಾದರೆ ಶ್ರವಣ ಶಕ್ತಿಯ ನಾದಶಿಖರದ ಅವಶ್ಯಕತೆ ಇದೆ. ನಾದಶಿಖರದಿಂದ ಉಚ್ಚಾರಕ್ಕೆ ಸ್ಪಷ್ಟತೆ, ಬೆಲೆ ಬರುತ್ತದೆ. ನಾದ ಶಿಖರವನ್ನು ಒಳಗೊಂಡಿರುವ ಅತಿ ಸಣ್ಣ ಉಚ್ಚಾರವೇ ಒಂದು ಅಕ್ಷರವೆನಿಸುತ್ತದೆ. ನಾದಶಿಖರವನ್ನು ಅಕ್ಷರ ಕೇಂದ್ರವೆನ್ನಬಹುದು. ಇದನ್ನು ಇಂಗ್ಲೀಷಿನಲ್ಲಿ syllable ಎನ್ನುತ್ತಾರೆ. ದೊಡ್ಡ ಉಚ್ಚಾರದಲ್ಲಿ ಎಷ್ಟು ನಾದಶಿಖರಗಳು ಇರುತ್ತವೆಯೋ ಅಷ್ಟು ಅಕ್ಷರಗಳು ಆ ಉಚ್ಚಾರದಲ್ಲಿವೆ ಎಂದು ಖಚಿತವಾಗಿ ಹೇಳಬಹುದು. ಸ್ವರಗಳಿಗೆ ನಾದಶಕ್ತಿ ಇರುತ್ತದೆ. ವ್ಯಂಜನಗಳಿಗೆ ನಾದಶಕ್ತಿ ಇಲ್ಲ. ಸ್ವರಗಳನ್ನು ಸ್ವತಂತ್ರವಾಗಿ ಉಚ್ಚರಿಸಲು ಸಾಧ್ಯ. ವ್ಯಂಜನಗಳು ಸ್ವರದ ಸಹಾಯದಿಂದ ಮಾತ್ರ ಉಚ್ಚರಿಸಲ್ಪಡುತ್ತವೆ. ಆದುದರಿಂದ ಉಚ್ಚಾರದಲ್ಲಿಯ ನಾದಶಿಖರತೆಯು ಅದರಲ್ಲಿರುವ ಸ್ವರಗಳನ್ನು ಅವಲಂಬಿಸಿರುತ್ತದೆ. ಆದರೆ ನಾದಶಿಖರತೆಯುಳ್ಳದ್ದಾಗಿ ಕೆಲವು ವಿಶಿಷ್ಟ ಉಚ್ಚಾರಗಳಲ್ಲಿ ವ್ಯಂಜನವೂ ನಿಲ್ಲಬಲ್ಲುದೆಂದು ಕೆಲವು ವಿದ್ವಾಂಸರ ಅಭಿಪ್ರಾಯ.[೨] ವ್ಯಂಜನವನ್ನು ಪ್ರಯತ್ನ ಪೂರ್ವಕ

---

೧. ಕನ್ನಡ ಅಕ್ಷರ ಸಂಜ್ಞಾಕಾರಗಳ ಬಗೆಗೆ ನೋಡಿ–'ಅಧ್ಯಯನ' ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ವಿಭಾಗ ಟಿ. ಕೇಶವಭಟ್ಟರ ಲೇಖನ ಪು,೧ (೧೯೬೮)

೨. ನೋಡಿ : Siddheshwar Varma-Critical Studies in Phonetic observations of Indian Grammarians.

ವಾಗಿ ಒತ್ತಿ ಉಚ್ಚರಿಸಿದರೆ ಸ್ವತಂತ್ರವಾಗಿ ನಿಲ್ಲಬಹುದು. ಉಸಿರಿನ ಒತ್ತಡ ಉಚ್ಚಾರದ ಒತ್ತು ನಾದ ಶಿಖರತೆಯನ್ನು ತರಬಲ್ಲದು. ಉದಾಹರಣೆಗೆ ಸ್, ಶ್, ಕ್, ಪ್, ಜಪಾನಿ ಭಾಷೆಯಲ್ಲಿ ಅಕ್ಷರವಾಗುತ್ತವೆ.—**arimṣ** (ಇರು), **ṡka** (ಚಿಗರೆ), **kra** (ಹುಲ್ಲು), **ma** (ಕುದುರೆ), ಹಾಗೆಯೆ **tunnel** ಎಂಬ ಇಂಗ್ಲೀಷ್ ಉಚ್ಚಾರದಲ್ಲಿಂ ಅಕ್ಷರವಾಗಿವೆ. ಹಾಗೆಯೆ **n utton** ದಲ್ಲಿ **n.** ಆದುದರಿಂದ ಸ್ವರ ನಿಸ್ಸಂಕೋಚವಾಗಿ ಅಕ್ಷರವೆನಿಸಿದರೂ ವ್ಯಂಜನ ಕೆಲವು ಸಲವಾದರೂ ಅಕ್ಷರವಾಗಬಲ್ಲುದು. ಪ್ರಯತ್ನ ಪೂರ್ವಕ ಉಚ್ಚರಿಸುವುದು ಯಾವಾಗಲೂ ಸುಲಭವಲ್ಲ. ನಾದಗುಣವು ಸ್ವರಗಳನ್ನು ಸಹಜವಾಗಿಯೆ ಅಕ್ಷರಗಳನ್ನಾಗಿಸುತ್ತದೆ. ಆದರೆ ವ್ಯಂಜನ ಎಂದೂ ಅಕ್ಷರವಾಗುವುದಿಲ್ಲ ಎನ್ನುವುದನ್ನು ಮಾತ್ರ ಒಪ್ಪಲಾಗದು. syllable (ಅಕ್ಷರ) ಗಳನ್ನು ಗುರುತಿಸುವಾಗ ವ್ಯಂಜನಗಳ ಸ್ಥಾನಗಳು ಉಚ್ಚಾರದ ನಾದಶಿಖರತೆಗೆ ಅನುಗುಣವಾಗಿ ಸ್ವರಗಳೊಡನೆ ಬೇರೆ ಬೇರೆ ಕಡೆಗೆ ಹೊಂದಿ ಕೊಳ್ಳುವುದನ್ನು ಗಮನಿಸಬಹುದು. ನಾದ ಶಿಖರತೆ ಭಾಷಾ ರಚನೆಯನ್ನೂ ಅವಲಂಬಿಸಿರುತ್ತದೆ. ಉದಾಹರಣೆಗೆ- ಅಗ್ಗ ಇದು ಅಗ್-ಗ, ಸ್ಪಷ್ಟ-ಇದು ಸ್ಪಷ್-ಟ ಧ್ವ್ಯಕ್ಷರ ಶಬ್ದಗಳಾಗಿವೆ. ಭಾರದ್ವಾಜಶಿಕ್ಷಾ ದಲ್ಲಿ ಶಬ್ದ ಮಧ್ಯದ 'ಲ್' ಸ್ವರವಾಗುತ್ತದೆಂದು ಹೇಳಿದೆ (ಕ್ಲಪ್ತ) 'ಉದಾಹೃತಃ ಕ್ಲಪ್ತ ಶಬ್ದೋ ನಾ ಪದಾದ್ಯಂತಯೋಃ ಸ್ವರಃ'

ನಾದ ಶಿಖರತೆಯನ್ನು ಕೆಳಗಿನಂತೆ ಗುರುತಿಸಬಹುದು—




(ನ್) ದಿಂದ ಆರಂಭವಾದ ಉಚ್ಚಾರದಲ್ಲಿ ನಾದವು ಶಿಖರತೆಯನ್ನು ಮುಟ್ಟುವುದು (ಆ) ದಲ್ಲಿ ಹಾಗೂ ಮುಕ್ತಾಯವಾಗುವದು (ನ್) ದಲ್ಲಿ. 'ನಾನ್' ಉಚ್ಚಾರದಲ್ಲಿ ಒಂದು ನಾದ ಶಿಖರವಿರುವದರಿಂದ ಅದು ಏಕಾಕ್ಷರ ಶಬ್ದ. ಸ್ವರಗಳು ಸ್ವಯಂ ನಾದ ಶಕ್ತಿಯನ್ನು ಹೊಂದಿರುವುದರಿಂದ ಅವು ಸ್ವತಂತ್ರ ಅಕ್ಷರಗಳಾಗಬಲ್ಲವು.

---

●. ನೋಡಿ–Siddheshwar Varma-Critical Studies in Phonetic observations of Indian Grammarians.

ಉದಾ : ಆ, ಈ ಆ ಮನೆ, ಈ ಹಾಡು ಎಂಬಲ್ಲಿಯಂತೆ) ಧ್ವನಿಮಾಗಳನ್ನು ಅಥವಾ ಲಿಪಿ ಸಂಕೇತಗಳನ್ನು ಗಮನಿಸಿ ಅಕ್ಷರಗಳನ್ನು ಗುರುತಿಸದೆ ಆ ಉಚ್ಚಾರದಲ್ಲಿರುವ ನಾದ ಶಿಖರಗಳನ್ನು ಗುರುತಿಸಿ ಅಕ್ಷರಗಳನ್ನು ಎಣಿಸಬೇಕು. ಉದಾಹರಣೆಗೆ–ಸ್ತ್ರೀ ಎಂಬ ಉಚ್ಚಾರದಲ್ಲಿ ಸ್, ತ್, ರ್, ಈ ಎಂಬ ನಾಲ್ಕು ಧ್ವನಿಮಾಗಳಿವೆ. ಆದರೂ ಇದು ಒಂದೇ ಅಕ್ಷರವುಳ್ಳ ಉಚ್ಚಾರ. 'ರಶ್ಮಿ' ಎಂಬ ಉಚ್ಚಾರದಲ್ಲಿ ರ್, ಅ, ಶ್, ಮ್, ಇ ನಾಲ್ಕು ಧ್ವನಿಮಾಗಳಿವೆ : ಆದರೆ ಇದು ದ್ವಿ ಅಕ್ಷರ ಶಬ್ದ. ಅಂಬುಜ ಎಂಬ ಉಚ್ಚಾರದಲ್ಲಿ ಅ, ಮ್, ಬ್ ಉ, ಜ್, ಅ ಎಂಬ ಆರು ಧ್ವನಿಮಾಗಳಿವೆ. ಇದು ತ್ರ್ಯಕ್ಷರ ಶಬ್ದ. ಕೋಮಲಾಂಗಿ ಕ್, ಓ, ಮ್, ಅ, ಲ್, ಆ, ಜ್, ಗ್, ಇ ಉಚ್ಚಾರ ನಾಲ್ಕಕ್ಷರ ಶಬ್ದ. ಇವುಗಳ ನಾದ ಶಿಖರತೆಯನ್ನಿಲ್ಲಿ ಗಮನಿಸಬಹುದು.












ಕನ್ನಡ ಲಿಪಿ ಅಕ್ಷರಾತ್ಮಕವಾಗಿದೆ. ವ್ಯಂಜನ ಸ್ವರಗಳನ್ನು ಕೂಡಿಸಿಯೇ ಬರೆಯುವ ಸೌಕರ್ಯ ಕನ್ನಡ ಲಿಪಿಗಿದೆ,೧. ಕಮಲ ಶಬ್ದದಲ್ಲಿ ಆರು ಧ್ವನಿಮಾಗಳಿದ್ದರೂ ಮೂರು ಅಕ್ಷರಗಳು, ಅಕ್ಷರಗಳಿಗೆ ಅನುಗುಣವಾಗಿ ಲಿಪಿ ಸಂಕೇತಗಳಿವೆ. ಇದನ್ನೇ ಇಂಗ್ಲೀಷಿನಲ್ಲಿ **Kamala** ಎಂಬುದಾಗಿ ಆರೂ ಧ್ವನಿಮಾಗಳನ್ನು ಸ್ಪಷ್ಟವಾಗಿ ಬಿಡಿಸಿ ಬರೆಯಲಾಗುತ್ತದೆ. ಆದ್ದರಿಂದ ಇಂಗ್ಲೀಷಿನಲ್ಲಿ ಧ್ವನಿಮಾತ್ಮಕ ಲಿಪಿ ಇದೆ.

5.*.1.3 'ಅಕ್ಷರ' ಎಂದರೆ ನಾಶವಾಗದೆ ಇರುವುದು ಎಂದು ಭಾರತೀಯ ಪ್ರಾಚೀನ ವ್ಯಾಕರಣಕಾರರ ಅಭಿಪ್ರಾಯ. ಕಿವಿಗೆ ಕೇಳಿಸುವ ಕಣ್ಣಿಗೆ ಕಾಣುವ ಅಕ್ಷರಗಳನ್ನು ಗಮನದಲ್ಲಿರಿಸಿಕೊಂಡು ಇದನ್ನು ಹೇಳಿರಬೇಕು. ಅಕ್ಷರವು ಉಚ್ಚಾರದ ಅತಿ ಸಣ್ಣ ಮೂಲ ಘಟಕವೂ ಆಗಬಲ್ಲುದು. ಇಲ್ಲವೆ ಮೂಲ ಧ್ವನಿಘಟಕಗಳ ಸಮೂಹವೂ ಆಗಬಲ್ಲುದು. 'ಈ' ಸ್ವರವು ಮೂಲ ಘಟಕವಾಗಿದ್ದಂತೆ ಅಕ್ಷರವೂ ಆಗಿದೆ. ಸ್ತ್ರೀ ನಾಲ್ಕು ಮೂಲ ಘಟಕಗಳನ್ನೊಳಗೊಂಡ ಒಂದು ಅಕ್ಷರವಾಗಿದೆ. ವರ್ಣವು ಉಚ್ಚಾರದ ಅತಿ ಸಣ್ಣ ಮೂಲ ಘಟಕ ಮಾತ್ರ. ಸ್ವರಗಳಿಗೆ ಸಂಬಂಧಿಸಿದಂತೆ ಇದು ಅಕ್ಷರವೂ ವರ್ಣವು ಆಗಬಲ್ಲದು. ಆದರೆ ಎಲ್ಲಾ ವರ್ಣಗಳು ಅಕ್ಷರಗಳಾಗಲಾರವು. ಸ್ವರಗಳು ಅಕ್ಷರ ವರ್ಣ ಎರಡೂ ಆಗಬಲ್ಲವು. ಆದರೆ ವ್ಯಂಜನಗಳು ಮಾತ್ರ ಕೇವಲ ವರ್ಣಗಳು. ವರ್ಣವನ್ನು ಸ್ಥೂಲವಾಗಿ ಆಧುನಿಕ ಭಾಷಾವಿಜ್ಞಾನ ಹೇಳುವ ಧ್ವನಿಮಾಕ್ಕೆ ಹೋಲಿಸಬಹುದು. ಆದರೆ ಪರಂಪರಾಗತ ವೈಯಾಕರಣರು ವರ್ಣಿಸಿರುವ ಎಲ್ಲಾ ವರ್ಣಗಳೂ ಧ್ವನಿಮಾಗಳಾಗುವುದಿಲ್ಲ.

---

೧ ಆದರೆ ಇದೂ ಧ್ವನಿಮಾತ್ಮಕವೇ ಎಂದು ಎಚ್.ಎಸ್.ಬಿಳಿಗಿರಿಅವರ ಅಭಿಪ್ರಾಯವಾಗಿದೆ (ನೋಡಿ : ಆಲೋಕ ಪು. ೫೨, ಅಕ್ಷರ ವರ್ಣ ಶುದ್ಧಾಕ್ಷರ ಇವುಗಳ ವಿವರವಾದ ವಿವೇಚನೆಗಾಗಿ ನೋಡಿ : ಬಿಳಿಗಿರಿ ಎಚ್.ಎಸ್.ಆಲೋಕ ಭಾಗ ೧(೧೯೬೯)ಪುಟ ೨೬, ೩೧ ಹಾಗೂ ೪೮–೫೩

ಅಕ್ಷರ ಹಾಗೂ ವರ್ಣಗಳಲ್ಲಿರುವ ಈ ಸೂಕ್ಷ್ಮ ಭೇದವನ್ನು ಕೇಶಿರಾಜ ಗಮನಿಸಿ ದಂತಿಲ್ಲ. ಅಕ್ಷರ ಹಾಗೂ ವರ್ಣಗಳನ್ನು ಒಂದೇ ಎಂದವನು ಪರಿಗಣಿಸುತ್ತಾನೆ. ಕಿವಿಗೆ ಕೇಳಿಸುವ ಉಚ್ಚಾರಾತ್ಮಕ ಅಕ್ಷರಗಳು ಶ್ರಾವಣವೆಂದೂ ಬರವಣಿಗೆಯಲ್ಲಿ ಹಿಡಿದಿಟ್ಟಾಗ ಅವು ಚಾಕ್ಷುಷ೧ ಎಂದೂ ಅಕ್ಷರಗಳು ವ್ಯವಹರಿಸಲ್ಪಡುವ ಬಗೆ ಯನ್ನು ಕೇಶಿರಾಜ ಸೂಚಿಸಿದ್ದಾನೆ. [ಸೂ. ೧೩] ಕೆಲವೆಡೆ ಕೇಶಿರಾಜ ಅಕ್ಷರವನ್ನು Syllable ಎಂಬ ಅರ್ಥದಲ್ಲಿಯೂ ಬಳಸಿದ್ದಾನೆ, ಅಕ್ಷರ ವರ್ಣಗಳಲ್ಲದೆ ಅವನು ಬಳಸಿದ ಇನ್ನೊಂದು ಪದ—'ಶುದ್ಧಾಕ್ಷರ' ಎಂಬುದು. ಇತರೆಡೆಯಲ್ಲಿ 'ಶುದ್ಧಗೆ' ಎಂದು ಹೇಳಿದುದು ಶುದ್ಧಾಕ್ಷರಗಳನ್ನು ಗಮನದಲ್ಲಿಟ್ಟುಕೊಂಡೇ ಹೇಳಿರಬೇಕು. ಅಕ್ಷರಗಳಲ್ಲಿ ಶುದ್ಧ ಅಶುದ್ಧ ಎಂಬ ಭೇದ ಸರಿಯೇ ? ಎಂದು ಮೇಲ್ನೋಟಕ್ಕೆ ಅನಿಸಿದರೂ ಅವನು ಕನ್ನಡಕ್ಕೆ ಅವಶ್ಯವಾಗಿ ಬೇಕಾಗಿರುವ ವರ್ಣ [ತಿರುಳು] ಗಳನ್ನು 'ಶುದ್ಧ' ಎಂದು ಭಾವಿಸಿರಬಹುದು. ಕೇಶಿರಾಜನು ಶುದ್ಧಾಕ್ಷರಗಳನ್ನು ಕನ್ನಡದ ಮೂಲಭೂತ ಧ್ವನಿ ಘಟಕಗಳಿಗೆ ಅನ್ವಯಿಸಿ ಹೇಳಿರಬೇಕು. ಶುದ್ಧಕ್ಷರ ಎಂಬುದು ನಿರನುನಾಸಿಕ ಸ್ವರಗಳಿಗೆ ವಿಶೇಷಣ ರೂಪದಲ್ಲಿ ಬಳಕೆಯಾಗುತ್ತಿರ ಬೇಕೆಂಬ ಅಭಿಗ್ರಾಯವೂ ಇದೆ. ಅನ್ಯಭಾಷಾ ಅಕ್ಷರಗಳನ್ನು ಬಿಟ್ಟು ಸಹಜವಾಗಿ ಕನ್ನಡದಲಿರುವ ಎಲ್ಲ ಅಕ್ಷರಗಳನ್ನು ಸೇರಿಸಿ ಒಟ್ಟು ಕನ್ನಡದ ಶುದ್ಧಾಕ್ಷರಗಳು ೪೭ ಎಂದು ಕೇಶಿರಾಜನು ಹೇಳುತ್ತಾನೆ. (ಸೂ. ೪೩)

### 5.*.2 ಶುದ್ಧಗೆ :

ಶುದ್ಧಗೆಯಲ್ಲಿ ಕೇಶಿರಾಜನು ಕನ್ನಡಕ್ಕೆ ವರ್ಣಮಾಲೆ ೪೭ ಆಗುವುದೆಂದು ಹೇಳಿರುವ ಹಾಗೂ ಅವುಗಳನ್ನು ವಿವರಿಸಿರುವ ಬಗೆ ಕೊಂಕಣ ಸುತ್ತಿ ಮೈಲಾರಕ್ಕೆ ಬಂದಂತಾಗಿದೆ. ತಾನು ಎಷ್ಟು ಕಟ್ಟಾ ಸಂಪ್ರದಾಯಶರಣನೆಂಬುದನ್ನು ಅಪ್ಪಟ ವಾಗಿ ಇಲ್ಲಿ ತೋರಿಸಿಕೊಂಡಿದ್ದಾನೆ. ಕಡಲುಡಿಗೆಯಾದ ಧರಣಿಯಲ್ಲಿ ಸ್ವಭಾವ ದಿಂದ ಸುಪ್ರಸಿದ್ಧವಾದ 'ಅ' ಕಾರದಿಂದ 'ಳ' ಕಾರದವರೆಗೆ ವರ್ಣಗಳ ಕ್ರಮವನ್ನು [ಸೂ. ೧೪] ಹೇಳಿದ್ದಾನೆ. ಇಲ್ಲಿ ಹ್ರಸ್ವಸ್ವರ ಎ, ಒ, ಗಳನ್ನು ಬಿಟ್ಟಿರುವುದರಿಂದ

---

೧. ವಾಸ್ತವವಾಗಿ ಭಾಷೆ ಶ್ರಾವಣವಾಗಿರುವುದೇ ಹೊರತು ಚಾಕ್ಷುಷವಲ್ಲ. ವ್ಯವಹಾರದಲ್ಲಿ ಬಳಸಲ್ಪಡುವ ಭಾಷೆಯೇ ನಿಜವಾದ ಭಾಷೆ, ಆದುದರಿಂದ ಅನಂತರ ಲಿಪಿಗಿಳಿಯುತ್ತದೆ,

ಹಾಗೂ ಸಂಸ್ಕೃತದಲ್ಲಿ 'ಳ' ಕಾರ ಇಲ್ಲವಲ್ಲಾ ಎಂದು ಯಾರಾದರೂ ಆಕ್ಷೇಪಿಸಿಯಾರು ಎಂದು ಅಳುಕಿ ಮುಂದಿನ [೧೫ ನೇ] ಸೂತ್ರದಲ್ಲೇ ಅದಕ್ಕೆ ಸಮಾಧಾನ ಹೇಳಿದ್ದ ರಿಂದ ಇದು ಸಂಪೂರ್ಣವಾಗಿ ಸಂಸ್ಕೃತ ವರ್ಣಮಾಲೆಗೆ ಅನುಗುಣವಾಗಿಯೇ ಇದೆ ಎಂಬುದನ್ನು ನಾವು ಒಪ್ಪಲೇಬೇಕು.

ಕೇಶಿರಾಜನು ತಾನು ಹೇಳಿರುವ ವರ್ಣಗಳನ್ನು ಐದು ವರ್ಗಗಳಲ್ಲಿ ಈ ರೀತಿ ಯಾಗಿ ವರ್ಗೀಕರಿಸುತ್ತಾನೆ. [ಸೂ. ೪೧, ೪೨] :— ೧. ಸ್ವರಗಳು [೧೪] ೨. ವರ್ಗೀಯ ವ್ಯಂಜನಗಳು [೨೫] ೩. ಅವರ್ಗೀಯ ವ್ಯಂಜನಗಳು [೯] ೪. ಯೋಗವಾಹಗಳು [೪] ೫. ದೇಶೀಯಗಳು [೫].

ಕೇಶಿರಾಜನು ಸ್ವರಗಳಿಗೆ ಸಂಬಂಧಿಸಿದ ವಿಷಯಗಳನ್ನು ಹೇಳುವಾಗ ಸಮಾನ ಗಳು-ಅನುಲೋಮ - ವಿಲೋಮ [ಸೂ. ೧೬] ಸವರ್ಣಗಳು-ಸವರ್ಣ ವಿಧಾನ ಸಂಜ್ಞೆ [ಸೂ. ೧೭, ೧೮]; ನಾಮಿ [ಸೂ. ೧೯] ಮುಂತಾದ ಕೆಲವು ಕನ್ನಡ ಭಾಷೆಯ ದೃಷ್ಟಿಯಿಂದ ಯಾವುದಕ್ಕೂ ಪ್ರಯೋಜನ ಇಲ್ಲದಂತಹ ಸಂಜ್ಞೆಗಳನ್ನು ನಿರೂಪಿಸಿದ್ದಾನೆ.೧ ಕನ್ನಡಕ್ಕೆ ವಿಶಿಷ್ಟವಾದ ಐದು ದೇಶೀಯ ವರ್ಣಗಳ ಬಗ್ಗೆ ಕೇಶಿರಾಜನು ಕನ್ನಡ ವರ್ಣಮಾಲೆಯನ್ನು ಹೇಳುವಾಗ ಸೂಚಿಸಿರುವದನ್ನು ನೋಡಿದರೆ ಅಚ್ಚರಿಯೆನಿಸುತ್ತದೆ. ಕನ್ನಡದಲ್ಲಿ ಸಹಜವಾಗಿರುವ ಱ, ೞ, ಳ, ಎ, ಒ ವರ್ಣಗಳು ಕನ್ನಡ ವ್ಯಾಕರಣವನ್ನು ಬರೆಯಲು ಹೊರಟಿರುವ ಅವನಿಗೆ ಕನ್ನಡಕ್ಕೇ ವಿಶಿಷ್ಟವೆನಿಸುವ ದೇಶೀಯಗಳಾಗಿ ಕಂಡ ಕಾರಣವೆಂದರೆ ಅವನು ಕನ್ನಡ ವರ್ಣಮಾಲೆಯನ್ನು ಸಂಸ್ಕೃತ ವರ್ಣಮಾಲೆಯೊಂದಿಗೆ ಹೋಲಿಸುತ್ತಿರುವದರಿಂದ ಎಂಬುದು ಸ್ಪಷ್ಟ. ಸಂಸ್ಕೃತದ ವರ್ಣಮಾಲೆಯಲ್ಲಿ ದೇಶೀಯಗಳನ್ನು ಸೇರಿಸಿ ಸಂಸ್ಕೃತದ ಋ, ೠ, ಌ, ೡ, ಶ್, ಷ್, ×ಕ, ೦ ಕ್ಷ ಳ ಹಾಗೂ ವಿಸರ್ಗ [೧೦] ಇವುಗಳನ್ನು ಕಳೆದು ಒಟ್ಟು ೪೭ಕ್ಕೆ ಶುದ್ಧಗೆಯನ್ನು ತಂದಿದ್ದಾನೆ. [ನೋಡಿ : 5.2]

೧. ನೋಡಿ— ಬಿಳಿಗಿರಿ ಎಚ್. ಎಸ್ -ಆಲೋಕ-ಪು. ೩೨

## ಕೇಶಿರಾಜನ ಮೇರೆಗೆ ವರ್ಣವರ್ಗೀಕರಣ



೬

# ಆಕೃತಿಮಾಶಾಸ್ತ್ರ

6.0.1 ಅರ್ಥಪೂರ್ಣವಾದ ಶಬ್ದಗಳನ್ನು ನಿರ್ಮಿಸುವಲ್ಲಿ ವ್ಯವಸ್ಥಿತವಾಗಿ ಬಳಕೆಗೊಳ್ಳುವ ಆಕೃತಿಮಾಗಳ ಅಧ್ಯಯನವು, ಆಕೃತಿಮಾಶಾಸ್ತ್ರದಲ್ಲಿ ಒಳಗೊಳ್ಳುತ್ತದೆ. ಯಾವುದೇ ಮಹತ್ವಪೂರ್ಣ ಧ್ವನಿಘಟಕ ಅಥವಾ ಧ್ವನಿಘಟಕಗಳ ಸಮೂಹ, ಅರ್ಥವನ್ನು ನೀಡುತ್ತಿದ್ದರೆ ಅಂತಹ ಅರ್ಥಪೂರ್ಣ ಘಟಕಗಳನ್ನು ಅವುಗಳ ರೂಪ, ಅರ್ಥ, ಕ್ರಮ, ಪ್ರಕಾರ, ಇತ್ಯಾದಿಗನುಸಾರವಾಗಿ ಅವುಗಳನ್ನು ಸುಸಂಬದ್ಧ ಅಭ್ಯಾಸಕ್ಕೆ ಒಳಪಡಿಸಿಕೊಳ್ಳುವ ಶಾಸ್ತ್ರವೇ ಆಕೃತಿಮಾಶಾಸ್ತ್ರ ಎನಿಸುತ್ತದೆ. ನಾಮಪದಗಳು, ಕ್ರಿಯಾಪದಗಳು, ಲಿಂಗ, ವಚನ, ಪ್ರತ್ಯಯಗಳು, ಸಮಾಸ, ಸಂಧಿ ಇತ್ಯಾದಿ ಶಬ್ದಶಾಸ್ತ್ರದಲ್ಲಿ ಒಳಗೊಳ್ಳುವ ಎಲ್ಲವನ್ನೂ ಆಕೃತಿಮಾಶಾಸ್ತ್ರ ವಿಭಾಗವು ಒಳಗೊಂಡಿರುತ್ತದೆ. ಧ್ವನಿ ಶಾಸ್ತ್ರದಲ್ಲಿ ಭಾಷೆಯ ಕಚ್ಚಾ ಸಾಮಗ್ರಿಯ ಅಭ್ಯಾಸ ನಡೆದರೆ ಧ್ವನಿಮಾ ಶಾಸ್ತ್ರದಲ್ಲಿ ಅರ್ಥವಿಹೀನ ಮಹತ್ವದ ಮೂಲ ಘಟಕಗಳ ಅಭ್ಯಾಸ ಮುಂದುವರಿಯುತ್ತದೆ. ಅಂತಹ ಮೂಲ ಘಟಕಗಳು ಹೇಗೆ ಅರ್ಥವತ್ತಾದ ಮೂಲ ಘಟಕಗಳಾಗಿ ಭಾಷೆಯ ರಚನೆಯಲ್ಲಿ ಹೆಣೆದುಕೊಳ್ಳುತ್ತವೆ. ವಾಕ್ಯಮಟ್ಟಕ್ಕೆ ಹೇಗೆ ಸೇತುವೆಯಾಗಿ ನಿಲ್ಲುತ್ತವೆಂಬುದನ್ನು ಕುರಿತ ಸವಿವರ ಅಧ್ಯಯನವನ್ನೇ ಆಕೃತಿಮಾ ಶಾಸ್ತ್ರವು ಒಳಗೊಂಡಿರುವದರಿಂದ ವ್ಯಾಕರಣದ ದೃಷ್ಟಿಯಿಂದ ಈ ವಿಭಾಗ ಅತ್ಯಂತ ಮಹತ್ವಪೂರ್ಣ ಎನಿಸುತ್ತದೆ. ಅಂತೆಯೇ ಶಬ್ದ ಶಾಸ್ತ್ರಕ್ಕೆ ಪ್ರಾಚೀನ ವೈಯಾಕರಣರು ಹೆಚ್ಚು ಗಮನವನ್ನಿತ್ತಿರುವುದು. ಪ್ರಾಚೀನ ಯಾವ ವ್ಯಾಕರಣವನ್ನಾಯ್ದುಕೊಂಡರೂ ಧ್ವನಿ-ಧ್ವನಿಮಾ ಅಥವಾ ವಾಕ್ಯ ಶಾಸ್ತ್ರಕ್ಕಿಂತ ಶಬ್ದಶಾಸ್ತ್ರಕ್ಕೇ ಮಹತ್ವ ನೀಡಿರುವುದನ್ನು ಮನಗಾಣಬಹುದು. ಆಕೃತಿಮಾಗಳು ಭಾಷೆಯಲ್ಲಿ ವ್ಯವಹರಿಸುವದನ್ನು ವ್ಯಾಕರಣದಲ್ಲಿ ಎರಡು ಬಗೆಯಾಗಿ ವಿಭಾಗೀಕರಿಸಿ ವರ್ಣಿಸುತ್ತಾರೆ. ಒಂದು ಆಕೃತಿಮಾ ಶಾಸ್ತ್ರ. ಇನ್ನೊಂದು ವಾಕ್ಯ ಶಾಸ್ತ್ರ. ಆಂತರಿಕವಾಗಿ ಬೆಳವಣಿಗೆ ಮಾಡಲು ಸಾಧ್ಯವಾಗದ ಸಾಂದ್ರಸಂಯೋಜಿತ ಆಕೃತಿಮಾಗಳನ್ನು ಆಕೃತಿಮಾಶಾಸ್ತ್ರದಲ್ಲೂ ಬೆಳವಣಿಗೆ ಹೊಂದಲು ಅವಕಾಶ ಇರುವ ಅಸಾಂದ್ರ ಸಂಯೋಜಿತ ಅಂದರೆ ವಾಕ್ಯಮಟ್ಟದಲ್ಲಿ ಬಳಕೆಗೊಳ್ಳುವ ಬಗೆಯನ್ನು ವಾಕ್ಯಶಾಸ್ತ್ರದಲ್ಲೂ ವಿವರಿಸಲಾಗುತ್ತದೆ.

## 6.0.1 ಆಕೃತಿಮಾ :

ಒಂದು ಅಥವಾ ಒಂದಕ್ಕಿಂತ ಹೆಚ್ಚು ಧ್ವನಿಮಾಗಳ ಸಮುದಾಯವು ಅರ್ಥವನ್ನೊಳಗೊಂಡಿದ್ದರೆ 'ಆಕೃತಿ' ಎನಿಸುವುದು. ಇಲ್ಲಿ ಸಮುದಾಯ ಅಂದರೆ ಒಂದು ಧ್ವನಿಮಾದ ಅನಂತರ ಮತ್ತೊಂದು ಧ್ವನಿಮಾ ವ್ಯವಸ್ಥಿತ ರೀತಿಯಲ್ಲಿ ಬರುವುದೆಂದರ್ಥ. ಆಡು ಎಂಬ ಆಕೃತಿಮಾದಲ್ಲಿ ಆ ಡ್ ಉ ಎಂಬ ಮೂರು ಧ್ವನಿಮಾಗಳು ಇದೇ ಕ್ರಮದಲ್ಲಿ ಬರಬೇಕು. ಡ್ ಉ ಆ ಎಂದಾಗಲಿ ಉ ಡ್ ಆ ಎಂದಾಗಲಿ ಡ್ ಆ ಉ ಎಂದಾಗಲಿ ಬರಕೂಡದು ಅವಿಭಾಜ್ಯವಾದ ಹಾಗೂ ಅರ್ಥವನ್ನು ಒಳಗೊಂಡ ಧ್ವನಿಮಾಗಳ ಸಮುದಾಯವನ್ನು ಆಕೃತಿ ಎನ್ನಬಹುದು. ಅವಿಭಾಜ್ಯ ಎಂದರೆ ಮುಂದೆ ವಿಭಜಿಸಲಾಗದ ಎಂದರ್ಥ. ಉದಾಹರಣೆಗೆ ಮನೆಗಳಲ್ಲಿ ಎಂಬುದನ್ನು ಮನೆ–ಗಳು–ಅಲ್ಲಿ ಎಂಬುದಾಗಿ ಅರ್ಥಕ್ಕೆ ಬಾಧೆ ಬರದಂತೆ ವಿಭಜಿಸಬಹುದು. ಮನೆ ಇದನ್ನು ಮ+ನೆ ಎಂದು ವಿಭಜಿಸಲು ಬರುವದಿಲ್ಲ. ಆದ್ದರಿಂದ ಆಕೃತಿ ಎನ್ನುವುದು ಅತಿ ಕನಿಷ್ಟ ಅರ್ಥವತ್ತಾದ ಧ್ವನಿಸಮುದಾಯ. ಆಕೃತಿಗಳು ನೇರವಾಗಿ ಭಾಷೆಯಲ್ಲಿ ಬಳಕೆಗೊಳ್ಳುವಂತಹವು. ಅವುಗಳನ್ನು ಇಂಗ್ಲೀಷಿನಲ್ಲಿ morphs ಎಂದು ಕರೆಯುತ್ತಾರೆ. ಆಕೃತಿಗಳ ಮೂಲ ಘಟಕಗಳಿಗೆ ಆಕೃತಿಮಾ ಎನ್ನುತ್ತಾರೆ. ಒಂದು ಆಕೃತಿಮಾಕ್ಕೆ ಒಂದೇ ಆಕೃತಿಯ ಅವತಾರ ಇರಬಹುದು. ಇಲ್ಲವೆ ಬಹು ಆಕೃತಿಗಳ ಅವತಾರಗಳು ಇರಬಹುದು. ಆಕೃತಿ ಅಥವಾ ಆಕೃತಿಗಳು ಆಕೃತಿಮಾದ ಅವತಾರಗಳಾಗಿರುತ್ತವೆ. ಒಂದೇ ಆಕೃತಿಮಾದ ಅನೇಕ ಆಕೃತಿಗಳನ್ನು ಆಕೃತಿ ಪ್ರಭೇದಗಳು (allomorphs) ಎಂದು ಕರೆಯಬಹುದು. ಧ್ವನಿ–ಧ್ವನಿಮಾಕ್ಕಿದ್ದಂತಹ ಸಂಬಂಧವೇ ಆಕೃತಿ–ಆಕೃತಿಮಾಕ್ಕಿದೆ. ಆಕೃತಿ–ಆಕೃತಿಮಾ, ಆಕೃತಿ ಪ್ರಭೇದಗಳನ್ನು ಸ್ಪಷ್ಟಪಡಿಸಲು ಇಲ್ಲಿ ಒಂದು ಉದಾಹರಣೆಯನ್ನು ನೋಡೋಣ :

| | |
|---|---|
| I | ಕಲ್ಲುಗಳು, ಹುಳಗಳು, ವ್ಯಾಪಾರಿಗಳು (ಗಳು) |
| IIA | ತಂದೆಯವರು, ಮಾವನವರು, ಅತ್ತೆಯವರು (ಅವರು) |
| IIB | ಮಾವಂದಿರು, ತಂಗಿಯಂದಿರು, ತಾಯಂದಿರು (ಅಂದಿರು) |
| III | ಸಣ್ಣವರು, ಜಾಣರು, ಹುಡುಗರು, ಕಾರಕೂನರು (ಅರು/ರು) |
| IV | ಮಕ್ಕಳು (ಕಳು) |
| V | ಆನೆ ಬಂದವು (ϕ) |

ಕನ್ನಡದಲ್ಲಿ ಬಹುವಚನ ಪ್ರತ್ಯಯ ಐದು ಬಗೆಯಾಗಿ ಪ್ರಯೋಗಿಸಲ್ಪಡುತ್ತ ದೆಂಬುದು ಈ ಉದಾಹರಣೆಗಳಿಂದ ತಿಳಿದುಬರುತ್ತದೆ.

ಗಳು → ನಪುಂಸಕಲಿಂಗದ ಹಾಗೂ ಮಂತ್ರಿ, ವ್ಯಾಪಾರಿ, ಗುರು ಇಂಥ ಕೆಲವು ವಿಶಿಷ್ಟ ನಾಮಗಳಿಗೆ ಅನ್ವಯವಾಗುತ್ತದೆ.

ಅವರು/ಅಂದಿರು → ಸಂಬಂಧವಾಚಕ ನಾಮಗಳಿಗೆ ಅನ್ವಯವಾಗುತ್ತದೆ.

ಅರು/ರು → ವಿಶೇಷಣ ಹಾಗೂ ಇತರ ನಾಮಗಳಿಗೆ ಅನ್ವಯವಾಗುತ್ತದೆ.

ಕಳು → ಮಗು ಎಂಬ ನಾಮಕ್ಕೆ ಮಾತ್ರ ಅನ್ವಯವಾಗುತ್ತದೆ.

ɸ → ಪ್ರತ್ಯಯವಿಲ್ಲದೆಯೆ ಬಹುವಚನ ಬಳಕೆಗೊಳ್ಳುವುದು.

ಗಳು, ಅವರು, ಅಂದಿರು ಅರು, ರು, ಕಳು ɸ ಇವೆಲ್ಲ ಒಂದೇ ಬಹುವಚನ ಆಕೃತಿಮಾದ ಆಕೃತಿ ಪ್ರಭೇದಗಳಾಗಿವೆ, ಇವುಗಳನ್ನು ಹೀಗೆ ವಿವರಿಸಬಹುದು :

{ಅರ್} | /ಗಳು/
/ಅವರು/
/ಅಂದಿರು/
/ಅರು/ರು
/ಕಳು/
/ ɸ /

ಆಕೃತಿಮಾ ಗುರುತಿಸುವಲ್ಲಿ ಅರ್ಥಕ್ಕೆ ಹಾಗೂ ರೂಪಕ್ಕೆ ಮಹತ್ವ ನೀಡಲಾಗುತ್ತದೆ, ಭಾಷೆಯ ರಚನೆಯಲ್ಲಿರುವ ಅರ್ಥವತ್ತಾದ ಅತಿ ಸಣ್ಣ ಉಚ್ಚಾರದ ಘಟಕವೇ 'ಆಕೃತಿಮಾ'. ಎಂದು ಅದರ ವ್ಯಾಖ್ಯೆಯನ್ನು ಹೇಳಲಾಗುತ್ತದೆ. ಬ್ಲೂಮ್ ಫೀಲ್ಡ ಎಂಬ ಭಾಷಾವಿಜ್ಞಾನಿ ಹೇಳಿರುವ ವ್ಯಾಖ್ಯೆ ಬಹು ಜನ ವಿದ್ವಾಂಸರಿಗೆ ಒಪ್ಪಿಗೆಯಾಗಿದೆ. "ಯಾವ ಭಾಷಾ ವೈಜ್ಞಾನಿಕ ರೂಪವು ಯಾವುದೇ ಬಗೆಯಲ್ಲಿ ಇನ್ನೊಂದು ರೂಪದೊಡನೆ ಭಾಗಶಃ ಕೂಡ ಧ್ವನ್ಯಾತ್ಮಕವಾಗಿಯಾಗಲಿ ಅರ್ಥಾತ್ಮಕವಾಗಿಯಾಗಲಿ ಹೋಲಿಕೆಯನ್ನು ಹೊಂದಿರುವುದಿಲ್ಲವೋ ಆ ರೂಪವೇ ಆಕೃತಿಮಾ." (**"A linguistic form which bears no partial phonetic semantic resemblance to any other form is.... a morpheme"**)

ಒಂದು ರೂಪ ಎಷ್ಟು ಅರ್ಥಗಳನ್ನು ಹೊಂದಿರುತ್ತದೆಯೋ ಅಷ್ಟು ಪ್ರತ್ಯೇಕ ಆಕೃತಿಮಾ ಎನಿಸುತ್ತದೆ. ಉದಾ : 'ಆಡು' ಎಂಬ ರೂಪವು ಎರಡು ಆಕೃತಿಮಾ

ಹೊಂದಿದೆ. 'ಆಡು' ಒಂದು ಪ್ರಾಣಿ, ಆಡು-ಆಡುವ ಕ್ರಿಯೆ, ಹೀಗೆಯೆ 'ಎತ್ತು', 'ಹಂಚು' ಎರಡೆರಡು ಆಕೃತಿಮಾಗಳಾಗುತ್ತವೆ. 'ಹರಿ' ಮೂರು ಆಕೃತಿಮಾ ಆಗುತ್ತದೆ. ಒಂದೇ ಅರ್ಥ ಇದ್ದು ರೂಪದಲ್ಲಿ ಭಿನ್ನವಾಗಿದ್ದರೆ ಅದು ಎಷ್ಟು ರೂಪ ಗಳನ್ನು ಪಡೆದಿರುತ್ತದೆಯೋ ಅಷ್ಟು ಆಕೃತಿಮಾಗಳು. (ರೂಪ ಭಿನ್ನತೆಯ ಪ್ರಸಾ ರಕ್ಕೆ ಕಾರಣ ನೀಡಲು ಸಾಧ್ಯವಾಗದೆ ಹೋದಲ್ಲಿ ಮಾತ್ರ ಇದು ಸಾಧ್ಯ) ಉದಾ : ಪುಸ್ತಕ. ಗ್ರಂಥ ಇವು ಬೇರೆ ಬೇರೆ ಆಕೃತಿಮಾಗಳು ಗಜ, ಹಸ್ತಿ ಇವು ಕೂಡ ಬೇರೆ ಬೇರೆ ಆಕೃತಿಮಾಗಳು.

ಒಂದೇ ಅರ್ಥ ಹೊಂದಿದ್ದು ರೂಪದಲ್ಲಿ ಭಿನ್ನವಾಗಿದ್ದು ಆ ರೂಪ ಭಿನ್ನ ತೆಯ ಪ್ರಸಾರಕ್ಕೆ ಕಾರಣ ನೀಡಲು ಸಾಧ್ಯವಾದರೆ ಅದು ಒಂದೇ ಆಕೃತಿಮಾ. ಉದಾಹರಣೆಗೆ ಕನ್ನಡದ ಬಹುವಚನ ಪ್ರತ್ಯಯ ರೂಪಗಳು ಬೇರೆ ಬೇರೆಯಾಗಿ ದ್ದರೂ ಅರ್ಥ ಮಾತ್ರ ಒಂದೇ. ಅವುಗಳ ಪ್ರಸಾರಕ್ಕೆ ಕಾರಣ ನೀಡಬಹುದು. ಆದ್ದರಿಂದ ಅವು ಒಂದೇ ಆಕೃತಿಮಾದಲ್ಲಿ ಒಳಗೊಳ್ಳುತ್ತವೆ.

ಅರ್ಥವು ಸಂಪೂರ್ಣ ಭಿನ್ನನಾಗಿರಬೇಕು. ಸ್ವಲ್ಪಾದರೂ ಅರ್ಥ ಸಂಬಂಧ ಕಾಣಿಸಿದರೆ ಅವು ಬೇರೆ ಆಕೃತಿಮಾ ಆಗಲಾರವು.

ಉದಾ : ಓದು (ನಾಮಪದ) ಓದು (ಕ್ರಿಯಾಪದ)
ಬೆಳೆ (ನಾಮಪದ) ಬೆಳೆ (ಕ್ರಿಯಾಪದ

ಇವುಗಳಲ್ಲಿ ಅರ್ಥ ಸಾಮಿಪ್ಯವಿರುವುದರಿಂದ ಇವು ಒಂದೊಂದೇ ಆಕೃತಿಮಾ ಗಳೆನಿಸುತ್ತವೆ. ಒಟ್ಟಿನಲ್ಲಿ ಆಕೃತಿಮಾ ಸಂಖ್ಯೆಯನ್ನು ಹೀಗೆ ಗುರುತಿಸಬಹುದು;

1. ಒಂದೇ ರೂಪ ಒಂದೇ ಅರ್ಥ→ಒಂದು ಆಕೃತಿಮಾ
2. ಒಂದೇ ರೂಪ ಹೆಚ್ಚು ಅರ್ಥ→ಹೆಚ್ಚು ಆಕೃತಿಮಾ (ಅರ್ಥಗಳಿದ್ದಷ್ಟು)
3. ಹೆಚ್ಚು ರೂಪ ಒಂದೇ ಅರ್ಥ→ಹೆಚ್ಚು ಆಕೃತಿಮಾ (ರೂಪಗಳಿದ್ದಷ್ಟು)
4. ಹೆಚ್ಚು ರೂಪ ಹೆಚ್ಚು ಅರ್ಥ→ಹೆಚ್ಚು ಆಕೃತಿಮಾ

6.0.1.1 ಆಕೃತಿ ಪ್ರಭೇದಗಳು ಮೂರು ರೀತಿಯ ನಿಯಂತ್ರಣಕ್ಕೊಳಪಟ್ಟು ಬಳಕೆಗೊಳ್ಳಬಹುದು.

೧. ಧ್ವನಿ ನಿಯಂತ್ರಿತ (Phonologically conditioned)
೨. ಆಕೃತಿ ನಿಯಂತ್ರಿತ (Morphologically conditioned)
೩. ವ್ಯಾಕರಣ ನಿಯಂತ್ರಿತ (Grammatically conditioned)

ಈ ಉದಾಹರಣೆಗಳನ್ನು ಗಮನಿಸಿರಿ

ಸತ್+ಪಥ > ಸತ್+ಪಥ=ಸತ್ಪಥ
ಸತ್+ಭಕ್ತ > ಸದ್+ಭಕ್ತ=ಸದ್ಭಕ್ತ
ಸತ್+ಮಾರ್ಗ > ಸನ್+ಮಾರ್ಗ=ಸನ್ಮಾರ್ಗ
ಸತ್+ಚಾರಿತ್ರ > ಸಚ್+ಚಾರಿತ್ರ= ಸಚ್ಚಾರಿತ್ರ
ಸತ್+ಜನ > ಸಜ್+ಜನ=ಸಜ್ಜನ

ಇಲ್ಲಿ 'ಸತ್' ರೂಪವು ಅದರ ಮುಂದ ಬರುವ ಪ್, ಬ್, ಮ್. ಚ್, ಜ್, ಧ್ವನಿಗಳ ನಿಯಂತ್ರಣದಿಂದಾಗಿ ತ್, ದ್, ನ್, ಚ್, ಜ್, ಎಂಬುದಾಗಿ ಪರಿವರ್ತನೆಗೊಂಡಿದೆ. ಧ್ವನಿ ನಿಯಂತ್ರಣಕ್ಕೆ ಕನ್ನಡದ ಉದಾಹರಣೆಯೊಂದನ್ನು ನೋಡೋಣ.

ಕಣ್+ನೀರು=ಕಣ್ಣೀರು. ಕಣ್+ನೋಟ=ಕಣ್ಣೋಟ
ಕಣ್+ಆರೆ=ಕಣ್ಣಾರೆ. ಕಣ್+ಎವೆ=ಕಣ್ಣೆವೆ
ಕಣ್+ಒರೆಸು=ಕಣ್ಣೊರೆಸು. ಕಣ ಹುಬ್ಬು=ಕಣ್ಣುಬ್ಬು

ಈ ಉದಾಹರಣೆಗಳಲ್ಲಿ /ಣ್/ ದ ಮುಂದೆ /ನ್/ ಬಂದರೆ ಅಥವಾ ಸ್ವರ ಬಂದರೆ /ನ್/ ಲೋಪವಾಗಿ ಅದು /ಣ್/ ಆಗಿ ಸಮರೂಪಧಾರಣೆಗೊಳ್ಳುತ್ತದೆ. ಉತ್ತರ ಪದದಲ್ಲಿ ಸ್ವರವಿದ್ದರೆ ಯಾವ ಧ್ವನಿ ಲೋಪವಾಗದೆ /ಣ್/ ದ್ವಿತ್ವವಾಗುತ್ತದೆ. ಉಳಿದೆಡೆ ಈ ಬದಲಾವಣೆ ಇಲ್ಲ. ಇದನ್ನು ಹೀಗೆ ಸೂತ್ರಿಸಬಹುದು.

ಣ್ / ಸ್ವರ ಇಲ್ಲವೆ ನ್ ದಿಂದ
ಆರಂಭವಾಗುವ ಆಕೃತಿಮಾ> ಣ್ ಣ್ (ಸ್ವರ) ('ನ್' ಲೋಪ)

ಹೀಗೆ ಮೊದಲನೆಯ ಆಕೃತಿಮಾದ ಕೊನೆಯ /ಣ್/ವು ಅನಂತರ ಬರುವ ಆಕೃತಿಮಾದ ಮೊದಲ ಧ್ವನಿಮಾವನ್ನು ನಿಯಂತ್ರಿಸುತ್ತದೆ. ಅಂತೆಯೇ ಉತ್ತರ

ಪದಗಳು ಣ್ ದಿಂದ ಆರಂಭವಾಗುವ ಆಕೃತಿ ಪ್ರಭೇದಗಳಾಗಿ ಮಾರ್ಪಡುತ್ತವೆ. ಅವು ಪೂರಕಪ್ರಸಾರದಲ್ಲಿ ನಿಲ್ಲುತ್ತವೆ. ಇಂತಹ ರೂಪಗಳನ್ನು ವರ್ಣನಿಯಂತ್ರಿತ ಆಕೃತಿ ಪ್ರಭೇದಗಳು (Phonologically conditioned allomorphs) ಎನ್ನುತ್ತಾರೆ. ಇನ್ನೊಂದು ಉದಾಹರಣೆಯನ್ನು ಗಮನಿಸಬಹುದು :

೧. ಸಿಗು–ಸಿಕ್ಕು, ಮಿಗು–ಮಿಕ್ಕು, ನಗು–ನಕ್ಕು, ಹೊಗು-ಹೊಕ್ಕು
೨. ಕೊಡು–ಕೊಟ್ಟು, ತೊಡು ತೊಟ್ಟು, ಬಿಡು ಬಿಟ್ಟು

ಇಲ್ಲಿ ಭೂತಕಾಲವನ್ನು ಸೂಚಿಸುವ ಆಕೃತಿಮಾ ರೂಪಿಸುವಾಗ /-ಗ್/ ದಿಂದ ಕೂಡಿದ ಧಾತುಗಳಿದ್ದರೆ /ಕ್/ ಬರುತ್ತದೆ. /-ಡ್/ ದಿಂದ ಕೂಡಿದವುಗಳಿದ್ದರೆ /ಟ್/ ಬರುತ್ತದೆ ಎಂದಾಯಿತು. ಆದರೆ ಮಾಡು ಮಾಡಿ, ನೋಡು–ನೋಡಿ, ನೀಡು–ನೀಡಿ, ಕೂಡು-ಕೂಡಿ, ತೂಗು ತೂಗಿ, ಬಾಗು–ಬಾಗಿ ಇವುಗಳಲ್ಲಿ ಟ್, ಕ್ ಆಗಿಲ್ಲವೇಕೆ ಎನಿಸುತ್ತದೆ. ಅದಕ್ಕೆ ಇನ್ನೊಂದು ಪರಿಸರವೂ ಕಾರಣವಾಗಿದೆ. ಅದೆಂದರೆ ದ್ವ್ಯಕ್ಷರಧಾತುವಿನ ಪ್ರಥಮಾಕ್ಷರದಲ್ಲಿ ಹ್ರಸ್ವಸ್ವರ ಇರಬೇಕು ಎಂಬುದು. ದೀರ್ಘ ಸ್ವರವಿದ್ದರೆ ಟ್, ಕ್ ಮಾರ್ಪಡುವುದಿಲ್ಲ. ಆದ್ದರಿಂದ ಹ್ರಸ್ವಸ್ವರ ಮತ್ತು ಗ್, ಡ್ ಗಳು ಭೂತಕಾಲ ಆಕೃತಿ ಪ್ರಭೇದವನ್ನು ನಿಯಂತ್ರಿಸುತ್ತವೆ ಎಂದಂತಾಯಿತು. ಭೂತಕಾಲದ ಇತರ ಆಕೃತಿ ಪ್ರಭೇದಗಳನ್ನೂ ಹೀಗೆಯೇ ಪರಿಶೀಲಿಸಿ ಹೇಳಬೇಕು.

ಆಕೃತಿ ನಿಯಂತ್ರಿತ (morphologically conditioned) ಆಕೃತಿ ಪ್ರಭೇದಗಳನ್ನು ತಿಳಿಯಲು ಕನ್ನಡದ ಬಹುವಚನ ಪ್ರತ್ಯಯಗಳು ಉತ್ತಮ ಉದಾಹರಣೆಯಾಗಿವೆ. ಬಹುವಚನದ ಆಕೃತಿ ಪ್ರಭೇದಗಳು ಅವುಗಳ ಹಿಂದೆ ಯಾವ ಧ್ವನಿಮಾ ಬರುತ್ತದೆಂಬುದನ್ನು ಇಟ್ಟುಕೊಳ್ಳದೇ ಎಂಥ ಆಕೃತಿ (ಅಂದರೆ ನಪುಂಸಕಲಿಂಗವನ್ನು ಸೂಚಿಸುವ, ಸಂಬಂಧವಾಚಕ, ವಿಶೇಷಣ ಇತ್ಯಾದಿ) ಬರುತ್ತವೆಂಬುದನ್ನು ಅವಲಂಬಿಸಿ ಅನ್ವಯವಾಗುತ್ತವೆ. ಕಲ್ಲು ಈ ಆಕೃತಿಗೆ ರು/ ಅರು, ಅಂದಿರು, ಕಳು ಇಂಥ ಆಕೃತಿ ಪ್ರಭೇದ ಅನ್ವಯವಾಗಲಾರದು. ಅದಕ್ಕೆ 'ಗಳು' ಮಾತ್ರ ಅನ್ವಯವಾಗುತ್ತದೆ. ಹೀಗೆ ಬಹುವಚನ ಆಕೃತಿ ಪ್ರಭೇದಗಳು ಆಕೃತಿ ನಿಯಂತ್ರಿತವಾಗಿವೆ ಎನ್ನುವುದು ಸ್ಪಷ್ಟವಾಗುತ್ತದೆ.

ವ್ಯಾಕರಣ ನಿಯಂತ್ರಿತ ರೂಪಗಳಿಗೆ ಈ ಉದಾಹರಣೆ ಗಮನಿಸಿ—

ಇಂಗ್ಲಿಷ್‌ನಲ್ಲಿ **she** ಇದು **her** ಎಂಬುದಾಗಿ **he** ಇದು **his** ಆಗಿ ಷಷ್ಠಿಯಲ್ಲಿ, **her** ಹಾಗೂ **him** ಆಗಿ ಚತುರ್ಥಿಯಲ್ಲಿ ಬಳಕೆಗೊಳ್ಳುತ್ತವೆ. ಹಾಗೆಯೆ ಕನ್ನಡದ ನಾನು, ತಾನು ಈ ರೂಪಗಳು ನನ್ನ, ತನ್ನ ಎಂಬುದಾಗಿ ಷಷ್ಠಿಯಲ್ಲಿ ಬದಲಾವಣೆಗೊಳ್ಳುವುದು. ಮೇಲೆ ಹೇಳಿದಂತೆ ಧ್ವನಿ ಅಥವಾ ಆಕೃತಿ ನಿಯಂತ್ರಿತವಲ್ಲ, ಷಷ್ಠಿ ವಿಭಕ್ತಿರೂಪ ಪಡೆಯುವಿಕೆ—ಅಂದರೆ ವ್ಯಾಕರಣ ನಿಯಂತ್ರಿತ ಮೂಲಕ ಈ ಬದಲಾವಣೆಗಳು ಸಂಭವಿಸುತ್ತವೆ. ಭಾಷೆಯಲ್ಲಿ ರಚನೆಗಳು ಯಾವಾಗಲೂ ಇಂತಹ ನಿಯಂತ್ರಣಕ್ಕೊಳಪಟ್ಟು ಬಳಕೆಗೊಳ್ಳುತ್ತವೆಂದಲ್ಲ. ಆದರೆ ಕೆಲವು ಸಲ ಒಂದಕ್ಕಿಂತ ಹೆಚ್ಚು ಬಗೆಯ ನಿಯಂತ್ರಣಕ್ಕೂ ಅವು ಒಳಗಾಗಬಹುದು.

### 6.0.2. ಆಕೃತಿಮಾ ಪದ, ಶಬ್ದ :

ಆಕೃತಿಮಾ ಅರ್ಥವತ್ತಾದ ಉಚ್ಚಾರದ ಅತಿ ಸಣ್ಣ ಘಟಕ ಎನಿಸುತ್ತದೆ. ಪದ ಎಂಬುದು ಅರ್ಥವತ್ತಾದ ಅತಿ ಸಣ್ಣ ಸ್ವತಂತ್ರ ರೂಪ, ಪದದಲ್ಲಿ ಒಂದೇ ಆಕೃತಿಮಾ ಇರಬಹುದು ಅಥವಾ ಹಲವು ಆಕೃತಿಮಾಗಳು ಸೇರಿರಬಹುದು. ಆದ್ದರಿಂದ ಆಕೃತಿಮಾಗಳು ಪದಗಳಾಗಬಹುದು. ಆದರೆ ಎಲ್ಲ ಆಕೃತಿಮಾಗಳು ಪದಗಳಾಗಲಾರವು. ಹಾಗೆ ಪದ, ಕೆಲವೆಡೆ ಆಕೃತಿಮಾ ಆದೀತು ಆದರೆ ಎಲ್ಲ ಪದಗಳೂ ಆಕೃತಿಮಾ ಆಗಲಾರವು. ಧಾರವಾಡದ ಮಾವಿನ ಹಣ್ಣು ಎಂಬ ವಾಕ್ಯದಲ್ಲಿ 'ಧಾರವಾಡದ' ಎಂಬ ರೂಪವನ್ನು ಇಡಿಯಾಗಿ ತೆಗೆದುಕೊಂಡಾಗ ಅದಕ್ಕೊಂದು ಅರ್ಥವಿದೆ. ಅದನ್ನು 'ಧಾರವಾಡ' 'ದ್' 'ಅ' ಎಂಬುದಾಗಿ ಇನ್ನೂ ವಿಭಜಿಸಿದರೆ ಮೂರು ಆಕೃತಿಮಾಗಳು ಲಭಿಸುತ್ತವೆ. ಒಂದು ಸ್ವತಂತ್ರ ಹಾಗೂ ಎರಡು ಬದ್ಧ ಆಕೃತಿಮಾಗಳು ಅದರಲ್ಲಿವೆ. ಹಾಗೆಯೇ 'ಮಾವಿನ' ಎರಡು ಆಕೃತಿಮಾಗಳಿಂದ ಕೂಡಿದ ಒಂದು ಪದ. ಹಣ್ಣು ಆಕೃತಿಮಾವೂ ಹೌದು ಪದವೂ ಹೌದು. 'ಈಗಿಲ್ಲ', ಎಂಬ ರೂಪದಲ್ಲಿ 'ಈಗ' 'ಇಲ್ಲ' ಎಂಬ ಎರಡು ಸ್ವತಂತ್ರ ರೂಪಗಳಿವೆ. ಆದ್ದರಿಂದ 'ಈಗಿಲ್ಲ' ರೂಪವು ಎರಡು ಪದಗಳನ್ನು ಅಥವಾ ಎರಡು ಆಕೃತಿಮಾಗಳನ್ನು ಹೊಂದಿದೆ. ಪದವು ವಿಶಿಷ್ಟ, ಪೂರ್ಣ ಅರ್ಥವನ್ನು ನೀಡುವ ಒಂದು ಒಟ್ಟು ಘಟಕವಾಗಿರುತ್ತದೆ. 'ಧಾರವಾಡದ'—ಒಂದೇ ಪದವಾದರೆ 'ಈಗಿಲ್ಲ', ಎರಡು ಪದಗಳಿಂದ ಕೂಡಿದೆ. ಇದಕ್ಕೆ ಕಾರಣವೆಂದರೆ ಮೊದಲನೆಯದನ್ನು ಇನ್ನೂ ಸ್ವತಂತ್ರ ರೂಪ ಬರುವಂತೆ ವಿಭಜಿಸಲು ಬರುವುದಿಲ್ಲ. ಎರಡನೆಯದು 'ಈಗ' 'ಇಲ್ಲ' ಎಂಬ ಸ್ವತಂತ್ರ ರೂಪಗಳನ್ನಾಗಿ ವಿಭಜಿಸಲು

ಬರುತ್ತದೆ. ಪದಗಳನ್ನು ಗುರುತಿಸುವಾಗ ನಾವು ಇನ್ನೊಂದು ಅಂಶವನ್ನು ಗಮನದಲ್ಲಿಟ್ಟಿರಬೇಕು. ಅದೆಂದರೆ 'ಅರ್ಥಪೂರ್ಣತೆ', ಯಾವುದೇ ರೂಪವು 'ಪದ'ದ ಲಕ್ಷಣಗಳನ್ನು ಹೊಂದಿದ್ದು ಅರ್ಥವನ್ನು ಪೂರ್ಣಗೊಳಿಸದೆ ಇದ್ದರೆ ಅದು ಪದವಾಗಲಾರದು. ಉದಾಹರಣೆಗೆ 'ಓಡಿದ' 'ತಿಂದ' ಎಂಬ ಕೃದಂತ ವಿಶೇಷಣ ಗಳು ಮುಂದೆ ಇನ್ನೊಂದು ಬಂದರೆ ಮಾತ್ರ ಪೂರ್ಣಾರ್ಥ ನೀಡಬಲ್ಲವು. ಆದ್ದರಿಂದ ಇವುಗಳನ್ನು ಸ್ವತಂತ್ರ ಪದಗಳು ಎನ್ನಲು ಬಾರದು, "ತಿನ್ನುವ ಬೆಕ್ಕು' ಹಾಗೆಯೇ 'ನೋಡಿದ ನೋಟ' ಇವು ಒಂದೇ ಪದವುಳ್ಳ ರಚನೆಗಳಾಗುತ್ತವೆ. ತಿನ್ನುವ, ನೋಡಿದ ಇಂಥವುಗಳನ್ನು ಶಬ್ದ ಎಂದು ಕರೆಯಬಹುದು. ಶಬ್ದ ಎಂದರೆ ಸ್ಥೂಲ ವಾಗಿ ಒಂದು ಅಥವಾ ಹೆಚ್ಚು ಧ್ವನಿಮಾ ಸಮೂಹ ಎನ್ನಬಹುದು. ಆದರೆ ಶಬ್ದವು ಕೇವಲ ಅಷ್ಟೇ ಅಲ್ಲ. ಅದು ಏನಾದರೂ ಅರ್ಥವನ್ನು ಒಳಗೊಂಡಿರು ತ್ತದೆ. ಅರ್ಥವು ಪೂರ್ಣವಾಗೇ ಇರಬೇಕೆಂಬ ನಿಯಮವಿಲ್ಲ. 'ಮೈಸೂರಿನಿಂದ ಬಂದ ಹುಡುಗ 'ಆ ಎಂದವನೇ ಎದ್ದು ನಿಂತ,' ಈ ವಾಕ್ಯದಲ್ಲಿ ಏಳು ಶಬ್ದಗಳಿವೆ. ಐದು ಪದಗಳಿವೆ. ಮತ್ತು ಹತ್ತು ಆಕೃತಿಮಾಗಳಿವೆ. ಪದ–ಶಬ್ದ ಒಂದೇ ಅಲ್ಲ. ಶಬ್ದವನ್ನು ಸಾಧಾರಣೀಕರಣವಾಗಿ ಸಾಮಾನ್ಯವಾಗಿ ಬಳಸಲಾಗುತ್ತದೆ. ಪದ ಎಂಬುದು ವಿಶಿಷ್ಟಾರ್ಥವನ್ನು ಹೊಂದಿದ ಅವಿಭಾಜ್ಯ ಸ್ವತಂತ್ರ ರೂಪ. ಎಲ್ಲ ಪದಗಳೂ ಶಬ್ದಗಳಾಗಬಹುದು. ಆದರೆ ಎಲ್ಲ ಶಬ್ದಗಳೂ ಪದಗಳಾಗಲಾರವು. ಆಕೃತಿಮಾಗಳು ಶಬ್ದ ಇಲ್ಲವೆ ಪದ ಆಗಬಹುದು ಆದರೆ ಎಲ್ಲ ಆಕೃತಿಮಾಗಳು ಶಬ್ದ ಇಲ್ಲವೆ ಪದ ಆಗಲಾರವು.

### 6.0.3 ಸ್ವತಂತ್ರ ಹಾಗೂ ಬದ್ಧ ಆಕೃತಿಮಾಗಳು :

ಆಕೃತಿಮಾಗಳು ನಿರ್ವಹಿಸುವ ಕಾರ್ಯ, ಅರ್ಥ ಅವುಗಳ ಸ್ವರೂಪವನ್ನು ಗಮನಿಸಿ ಅವುಗಳನ್ನು ಅನೇಕ ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ. ಬದ್ಧ ಆಕೃತಿಮಾಗಳು ಬಿಡಿಯಾಗಿ ಎಂದೂ ಬಳಕೆಗೊಳ್ಳುವುದಿಲ್ಲ. ಅವು ಯಾವುದಾದ ರೊಂದು ಆಕೃತಿಮಾದೊಂದಿಗೆ ಸೇರಿಕೊಂಡೇ ಯಾವಾಗಲೂ ಪ್ರಯೋಗವಾಗು ತ್ತವೆ. ಅವುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಹೀಗಿದ್ದು ಅವು ಭಾಷೆಯ ರಚನೆ ಯಲ್ಲಿ ವಿಶಿಷ್ಟ ಪಾತ್ರವನ್ನು ವಹಿಸುವದರಿಂದ ನಿರ್ದಿಷ್ಟ ಅರ್ಥ ಒಮ್ಮೊಮ್ಮೆ ಇಲ್ಲದಿದ್ದರೂ ಅವುಗಳನ್ನು ಆಕೃತಿಮಾ ಎಂದು ಪರಿಗಣಿಸುತ್ತಾರೆ. ಯಾವ ರೂಪಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಬಳಕೆಯಾಗುವ ಆಕೃತಿಮಾಗಳಿಗೆ ಸ್ವತಂತ್ರ ಆಕೃತಿಮಾ ಎಂದೂ ಆಕೃತಿಮಾಗಳೊಂದಿಗೆ ಯಾವಾಗಲೂ ಸೇರಿಕೊಂಡು, ಬರುವಂಥವು ಬದ್ಧ ಆಕೃತಿಮಾಗಳು ಎಂದೂ ವಿವರಿಸಲಾಗುತ್ತದೆ.

ಕನ್ನಡದಲ್ಲಿ {ತಂದೆ,} {ಕಾಗದ,} {ನೀರು,} {ಮರ,} {ಕೈ} ಇಂತಹ ಅಸಂಖ್ಯಾತ ರೂಪಗಳು ಸ್ವತಂತ್ರ ಆಕೃತಿಮಾಗಳು. {ಗಳು} {ಅರು} {ಅಂದಿರು} ಮುಂತಾದ ಬಹುವಚನ ಆಕೃತಿ ಪ್ರಭೇದಗಳು ಬದ್ಧ ಆಕೃತಿಮಾಗಳು. ಬರುತ್ತಾನೆ. ಹೋಗುತ್ತಾನೆ. ಮುಂತಾದ ರೂಪಗಳಲ್ಲಿ {ಉತ್} ಎಂಬ ರೂಪ ವರ್ತಮಾನಕಾಲ ಸೂಚಕ ಬದ್ಧ ಆಕೃತಿಮಾ.

### 6.0.3.1 ಶೂನ್ಯ ಆಕೃತಿಮಾ (Zero Morpheme) :

ಭಾಷೆಯಲ್ಲಿ ಬಳಕೆಗೊಳ್ಳುವ ಹಲವು ರೂಪಗಳ ರಚನೆಯನ್ನು ಹೋಲಿಸಿ ನೋಡಿದಾಗ ಇರಬೇಕಾದ ಆಕೃತಿಮಾ ಇರದೆ ಇದ್ದರೆ ಅಲ್ಲಿ ಶೂನ್ಯ ಆಕೃತಿಮಾ ವನ್ನು ಕಲ್ಪಿಸಬೇಕಾಗುತ್ತದೆ. ಶೂನ್ಯ ಆಕೃತಿಮಾವನ್ನು ಸ್ಥಾಪಿಸುವಾಗ ರೂಪಗಳ ಹೋಲಿಕೆಯನ್ನು ಹಾಗೂ ಅರ್ಥವನ್ನು ಎಚ್ಚರಿಕೆಯಿಂದ ನಿರೀಕ್ಷಿಸಬೇಕಾಗುತ್ತದೆ. ಭಾಷೆಯಲ್ಲಿ ಎಲ್ಲಿಯೋ ಆಗಲಿ ಇಂತಹ ಶೂನ್ಯ ಸ್ಥಿತಿಯನ್ನು ಸೂಚಿಸಲು ಚಿಹ್ನೆ ಬಳಸುತ್ತಾರೆ. ಉದಾ : 'ಆನೆ' ಎಂಬ ರೂಪಕ್ಕೆ ಬಹುವಚನ ⏀ ಎಂದು ಒಮ್ಮೆಲೆ ಹೇಳಲು ಬಾರದು. ಆನೆ ಬಂದವು ಎಂಬ ರಚನೆಯಲ್ಲಿ ಇರಬೇಕಾದ ಬಹುವಚನ ಆಕೃತಿಮಾ ಶೂನ್ಯವಾಗಿರುವುದು ತಿಳಿಯುವುದು. ಅದನ್ನು ಸ್ಥಾಪಿಸಲು ಬೇರೆ ಉದಾಹರಣೆಗಳ ಹೋಲಿಕೆ ಅನಿವಾರ್ಯ. ಕುರಿಗಳು, ಜೇನೆಗಳು, ಮನೆಗಳು, ಕಲ್ಲುಗಳು ಇತ್ಯಾದಿ ರೂಪಗಳಲ್ಲಿ 'ಗಳು' ಬಹುವಚನ ಆಕೃತಿಮಾ ಇರುವಂತೆ ಆನೆ ಬಂದವು ಎನ್ನುವಲ್ಲಿಯೂ ಇರಬೇಕಾಗಿತ್ತು. ಅದು ಇಲ್ಲ. ಆದ್ದರಿಂದ ಇಲ್ಲಿ ಶೂನ್ಯ (⏀) ಆಕೃತಿಮಾವನ್ನು ಸ್ಥಾಪಿಸಬೇಕು.

### 6.0.3.2 ರಿಕ್ತ ಆಕೃತಿಮಾ (Empty Morpheme) :

ಯಾವ ಅರ್ಥವನ್ನು ಹೊಂದಿರದಿದ್ದರೂ ಮೂಲದಲ್ಲಿ ಯಾವ ಆಕೃತಿ ಇಲ್ಲ ದಿದ್ದರೂ ಭಾಷಾ ರೂಪಗಳ ರಚನೆಯಲ್ಲಿ ಮಹತ್ವಪೂರ್ಣವಾಗಿ ಕೆಲವು ರೂಪಗಳು ಬಳಕೆಗೊಳ್ಳಬಹುದು. ಅವು ಭಾಷಾರಚನೆಯಲ್ಲಿ ವಿಶಿಷ್ಟ ಕಾರ್ಯವನ್ನು ನಿರ್ವಹಿಸು ತ್ತವೆ. ಅವುಗಳನ್ನು ರಿಕ್ತ ಆಕೃತಿಮಾ ಎನ್ನುತ್ತಾರೆ. ಶೂನ್ಯ ಆಕೃತಿಮಾದಲ್ಲಿ ಭಾಷೆಯ ರಚನೆಯ ದೃಷ್ಟಿಯಿಂದ ಇರಬೇಕಾದ ಆಕೃತಿಮಾ ಶೂನ್ಯವಾಗಿತ್ತು. ಆದರೆ ಇಲ್ಲಿ ಆ ಶೂನ್ಯವನ್ನು ಯಾವುದಾದರೊಂದು ಧ್ವನಿಮಾ ಇಲ್ಲವೆ ಧ್ವನಿಮಾ ಸಮೂಹದ ಮೂಲಕ ಕಾಣಿಸಿಕೊಂಡು ಸ್ಪಷ್ಟಪಡಿಸಿರುತ್ತದೆ.

ಉದಾಹರಣೆಗೆ:—ಕೆರೆಯಲ್ಲಿ ಎಂಬ ಪದದಲ್ಲಿ ಕೆರೆ ಮತ್ತು ಅಲ್ಲಿ ಇವುಗಳನ್ನು ಕೂಡಿಸಿದಾಗ ಬರುವ 'ಯ್' ಕಾರದ ಕೆಲಸವೇನು ? ಇದು ಏಕೆ ಕಾಣಿಸಿಕೊಂಡಿದೆ ? ಪ್ರಯೋಜನವಿಲ್ಲ ಅರ್ಥವಿಲ್ಲ ಆದರೂ ಇದಿಲ್ಲದಿದ್ದರೆ ರಚನೆ ಸಾಧ್ಯವಿಲ್ಲ. ತಾನು ಕಾಣಿಸಿಕೊಂಡೂ ವಿಶಿಷ್ಟ ಪದದ ರಚನೆಗೆ ಕಾರಣೀಭೂತವಾಗುತ್ತದೆ. ಈ (ಯ್) ರಿಕ್ತ ಆಕೃತಿಮಾ. ಕಲಿಯಲಿ, ಮರದಲ್ಲಿ ಗಿಡವನ್ನು ಇತ್ಯಾದಿ ರೂಪಗಳಲ್ಲಿ ಬರುವ ಯ್, ದ್, ವ್, ಇಂಥವು ರಿಕ್ತ ಆಕೃತಿಮಾ ಆಗುತ್ತವೆ.

6.0.3.3. ಬದ್ಧಆಕೃತಿಮಾಗಳಲ್ಲಿ ಸಮುಚ್ಚಯ (additive morpheme) ವ್ಯವಕಲನ ಆಕೃತಿಮಾ (Subtractive morpheme) ಈ ಪ್ರಕಾರವಾಗಿ ಮತ್ತೆ ಪ್ರತ್ಯೇಕವಾಗಿ ಗುರುತಿಸುತ್ತಾರೆ- ಒಂದೇ ಕಾಲಕ್ಕೆ, ಒಂದೇ ಪರಿಸರದಲ್ಲಿ ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಹೊಂದಿ ಒಳಕೆಗೊಳ್ಳುವ ಆಕೃತಿಮಾಗಳನ್ನು ಅನೇಕಾರ್ಥ (portmenteau morpheme) ಆಕೃತಿಮಾ ಎಂದು ಹೆಸರಿಸುತ್ತಾರೆ. ಉದಾಹರಣೆಗೆ 'ಬರುತ್ತಾನೆ' ಎಂಬ ರೂಪದಲ್ಲಿ 'ಆನೆ' ಆಕೃತಿಮಾ ಪುಲ್ಲಿಂಗ ಪುರುಷವಾಚಕ ಹಾಗೂ ಏಕವಚನ ಎಂದೆರಡು ಅರ್ಥಗಳನ್ನು ಏಕಕಾಲಕ್ಕೆ ಹೊಂದಿದೆ ಇದು ಅನೇಕಾರ್ಥ ಆಕೃತಿಮಾ, ಭಾಷೆಯಲ್ಲಿ ತೀರ ಕ್ವಚಿತ್ತಾಗಿ ಬರುವ ಆಕೃತಿಮಾಗಳನ್ನು ವಿಶಿಷ್ಟ ಆಕೃತಿಮಾ (unique morpheme) ಎನ್ನುತ್ತಾರೆ ಅರ್ಥಸಾಮಿಪ್ಯವಿದ್ದೂ ರೂಪ ಭಿನ್ನವಾಗಿದ್ದು ಭಾಷೆಯ ವ್ಯಾಕರಣ ದೃಷ್ಟಿಯಿಂದ ಮಹತ್ವದವಾಗಿದ್ದರೆ ಅಥವಾ ಭಾಷಾ ರಚನೆಯ ಪೂರಕ ಅಂಗಗಳಾಗಿದ್ದರೆ ಅಂಥ ಆಕೃತಿಮಾಗಳನ್ನು (supplitive morpheme) ಪೂರಕ ಆಕೃತಿಮಾ ಎಂದು ಗುರುತಿಸುತ್ತಾರೆ. ಉದಾಹರಣೆಗೆ ಇಂಗ್ಲೀಷ್‌ನಲ್ಲಿ go–went, good–better, ಕನ್ನಡದ ನಾ–ನನ್ನ ಕೊಡು–ಕೊಟ್ಟು ಮುಂತಾದವು. ಇಂಥವೇ ಸಂದರ್ಭಗಳಿದ್ದು ನಿರ್ದಿಷ್ಟ ಧ್ವನಿ ಆಗಮದಿಂದ ಆಕೃತಿಮಾ ರೂಪುಗೊಳ್ಳುತ್ತಿದ್ದರೆ ಅಂಥವುಗಳನ್ನು (replacive morpheme) ಪ್ರತ್ಯಾಪನ್ನ ಆಕೃತಿಮಾ ಎಂದೂ ಸೂಚಿಸುತ್ತಾರೆ. ಉದಾಹರಣೆಗೆ ಇಂಗ್ಲೀಷ್‌ನ foot–feet, mouse–mice, ಇತ್ಯಾದಿ.

ಹೀಗೆ ಆಕೃತಿಮಾಗಳನ್ನು ಅನೇಕ ವಿಧಗಳಲ್ಲಿ ವಿಂಗಡಿಸಿ ವಿವರಿಸುತ್ತಾರೆ. ಆಕೃತಿಮಾಗಳು ಪ್ರಕ್ರಿಯೆಗೊಳ್ಳುವುದನ್ನು ಬ್ಲಾಕ್ ಮತ್ತು ಟ್ರೇಗರ್ ಅವರು ಐದು ಬಗೆಯಲ್ಲಿ ವಿಂಗಡಿಸಿದ್ದಾರೆ.

೧. ಪ್ರತ್ಯಯೀಕರಣ(Affixation)
೨. ಆಂತರಿಕ ಬದಲಾವಣೆ (Internal change)

೩. ದ್ವಿತ್ವೀಕರಣ (Reduplication)
೪. ಪೂರಕತೆ (Suppletion) ಹಾಗೂ
೫. ಶೂನ್ಯರೂಪ ವ್ಯತ್ಯಾಸ(Zero modification)

ಕನ್ನಡದಲ್ಲಿ ಪ್ರತ್ಯಯೀಕರಣ ಆಕೃತಿಮಾ ಮಧ್ಯ ಹಾಗೂ ಅಂತ್ಯದಲ್ಲಿ ಆಂತರಿಕ ಬದಲಾವಣೆಗಳ ಸಹಿತ ಅಥವಾ ಇಲ್ಲದೆಯೆ ನಡೆಯುತ್ತದೆ. ಆಕೃತಿಮಾ ಪೂರ್ವ ಸ್ಥಾನದಲ್ಲಿ ಪ್ರತ್ಯಯೀಕರಣವು ಪ್ರಕ್ರಿಯೆ [Process] ಆಗಿ ಬಳಕೆಗೊಳ್ಳುವುದಿಲ್ಲ. ಪ್ರಾತಿಪದಿಕಕ್ಕೆ ಪ್ರತ್ಯಯ ಸೇರಿ ಉಂಟಾದ ರೂಪಗಳ ಶ್ರೇಣಿಗೆ ರೂಪಾವಳಿ [paradigm] ಎಂದು ಕರೆಯುತ್ತಾರೆ.

6.0.4. ನೈಡಾ ಎಂಬ ಸುಪ್ರಸಿದ್ಧ ಭಾಷಾ ವಿಜ್ಞಾನಿ ಆಕೃತಿಮಾ ವಿಜ್ಞಾನದಲ್ಲಿ ಭಾಷೆಯ ವರ್ಣನಾತ್ಮಕ ವಿಶ್ಲೇಷಣಾ ತತ್ತ್ವಗಳನ್ನು ಸಾದ್ಯಂತವಾಗಿ ವಿವರಿಸಿದ್ದಾನೆ. ಬ್ಲೂಮ್ ಫೀಲ್ಡನ ಆಕೃತಿಮಾ ವ್ಯಾಖ್ಯೆಗೆ ಹೆಚ್ಚು ಸೂಕ್ತವೂ ಬಹುಜನ ವಿದ್ವಾಂಸರಿಂದ ಒಪ್ಪಿಕೊಳ್ಳಲ್ಪಟ್ಟದ್ದೂ ಪ್ರಾಯೋಗಿಕವೂ ಆಗಿದೆ. ಇವನ್ನು ಮನಗಾಣಿಸಲು ಆಕೃತಿಮಾಗಳನ್ನು ಗುರುತಿಸಲೋಸುಗ ಅವನು ಆರು ತತ್ತ್ವಗಳನ್ನು ಹೇಳಿದ್ದಾನೆ. ಅಷ್ಟೇ ಅಲ್ಲದೇ ಆಕೃತಿಮಾ ವಿಜ್ಞಾನದ ವಿಭಾಗದಲ್ಲಿ ಭಾಷಾ ವಿಶ್ಲೇಷಣೆಗೆ ತೊಡಗುವವರು ೪ ಅಂಶಗಳನ್ನು ತಪ್ಪದೇ ಗಮನಿಸಲು ಸೂಚಿಸಿದ್ದಾನೆ.

೧. ಜನರು ಏನನ್ನು ಹೇಳುತ್ತಾರೆ ಎಂಬುದರ ಮೇಲೆ ಭಾಷಾ ವಿಶ್ಲೇಷಣೆ ಆಧರಿಸಿರಬೇಕು.

೨. ರೂಪಗಳನ್ನು ಮುಖ್ಯವಾಗಿಟ್ಟುಕೊಂಡು ಅವು ವ್ಯಾಕರಣಾತ್ಮಕವಾಗಿ ಬಳಕೆಗೊಳ್ಳುವುದನ್ನು ವಿವರಿಸಬೇಕು.

೩. ಭಾಷೆಯ ಯಾವುದೇ ಭಾಗವನ್ನು ಸೂಕ್ತ ರೀತಿಯಲ್ಲಿ ಇನ್ನುಳಿದ ಭಾಗಗಳನ್ನು ಉಪಷ್ಟಂಭಕವಾಗಿ ಪರಿಶೀಲಿಸದೆ ವಿವರಿಸಕೂಡದು.

೪. ಭಾಷೆ ನಿರಂತರ ಬದಲಾವಣೆಯ ಪ್ರಕ್ರಿಯೆಯಲ್ಲಿರುತ್ತದೆಯೆಂಬುದನ್ನು ಮರೆಯಬಾರದು.

---

೧. A linguistic form which bears no partial phonetic semantic resemblance to any other form is...a morpheme.

# ಅನುಬಂಧ

### 6.0.0 ಶಬ್ದಮಣಿದರ್ಪಣ–ಆಕೃತಿಮಾ ಶಾಸ್ತ್ರ :

ಕೇಶಿರಾಜ ಹಾಗೂ ಇತರ ಎಲ್ಲ ಕನ್ನಡ ವೈಯಾಕರಣರು ತಮ್ಮ ವ್ಯಾಕರಣಗಳಲ್ಲಿ ಶಬ್ದಶಾಸ್ತ್ರಕ್ಕೆ ಹೆಚ್ಚು ಗಮನವಿತ್ತಿದ್ದಾರೆ. ಆಕೃತಿಮಾಕಲ್ಪನೆಯೆಡೆಗೆ ಅವರ ವಿಚಾರ ಹರಿಯಬೇಕಾಗಿರಲಿಲ್ಲ. ಯಾಕೆಂದರೆ ಸಂಸ್ಕೃತದ ಸಿದ್ಧಮಾದರಿ ವ್ಯಾಕರಣಗಳು ಅವರ ಕಣ್ಣೆದುರಿಗಿದ್ದವು. ಪರಂಪರಾಗತವಾಗಿ ಹೇಳಿರುವ ನಾಮ, ಧಾತು, ಅವ್ಯಯಗಳನ್ನು ಸ್ವತಂತ್ರ ಆಕೃತಿಮಾಗಳಲ್ಲಿ, ತದ್ಧಿತ ಆಖ್ಯಾತ ಮುಂತಾದ ಪ್ರತ್ಯಯಗಳನ್ನು ಬದ್ಧ ಆಕೃತಿಮಾಗಳಲ್ಲಿ ಸ್ಥೂಲವಾಗಿ ಪ್ರತ್ಯೇಕಿಸಬಹುದು. ನಾಮಗಳನ್ನು ಅವರು ರೂಢ, ಅನ್ವರ್ಥ, ಅಂಕಿತ, ವಸ್ತುವಾಚಕ ಸರ್ವನಾಮ, ಗುಣವಚನ, ಸಂಖ್ಯಾವಾಚಕ, ಭಾವವಾಚಕ ಎಂಬಿತ್ಯಾದಿಯಾಗಿ ವರ್ಗೀಕರಿಸಿದ್ದಾರೆ. ಧಾತುಗಳಲ್ಲಿ ಕ್ರಿಯಾಧಾತು, ನಾಮಧಾತುಗಳೆಂದು ವಿಂಗಡಿಸಿದ್ದಾರೆ. ಈ ಬಗೆಯು ಅರ್ಥಾನುಗುಣವಾದುದಾಗಿದೆ. ಕೆಲವೆಡೆ ಕೇಶಿರಾಜನು ರೂಪಾನುಗುಣವಾಗಿಯೂ ವಾಕ್ಯಮಟ್ಟದಲ್ಲೂ ನಾಮಗಳನ್ನು ವಿವರಿಸಲು ಯತ್ನಿಸಿದ್ದಾನೆ. ನಾಮಪದಗಳು ಒಂದಕ್ಷರದಿಂದ ಐದಕ್ಷರಗಳವರೆಗೆ ಇವೆಯೆಂದು ಹೇಳಿ ಅವನ್ನು ಪಿಟದ ನಾಮಗಳೆಂದು (ಪ್ರಾಯಶಃ ಪದ ಎಂದು) ಹೆಸರಿಸಿರುವನು. ಧಾತುಗಳಿಗೆ ಪರವಾಗುವ ಪ್ರತ್ಯಯಗಳನ್ನೆಲ್ಲ ವರ್ಣಿಸುತ್ತಾನೆ. (ಧಾತು ಪ್ರಕರಣ) ಹ್ರಸ್ವ ಮತ್ತು ದೀರ್ಘ ಸ್ವರಗಳಿಂದ ಕೂಡಿದ ಧಾತುಗಳನ್ನು ನೀಡಿದ್ದಾನೆ. ಪದಗಳಲ್ಲಿ ಅಚ್ಚಗನ್ನಡದವುಗಳನ್ನು ದೇಶ್ಯ ಸಮಸಂಸ್ಕೃತ ಹಾಗೂ ತತ್ಸಮ, ತದ್ಭವಗಳೆಂದು ವರ್ಗೀಕರಿಸಿದ್ದಾನೆ.

## 6.1 ಕನ್ನಡ ಸಂಧಿಗಳು*

### 6.1.0 ಸಂಧಿ :

ಎರಡು ಮುಕ್ತ ಆಕೃತಿಮಾಗಳನ್ನು ಅಥವಾ ಒಂದು ಮುಕ್ತ, ಒಂದು ಬದ್ಧ ಆಕೃತಿಮಾಗಳನ್ನು ಸಂಯುಕ್ತವಾಗಿ ಉಚ್ಚರಿಸುವುದೇ ಸಂಧಿ— ಎನ್ನಬಹುದು. ಎರಡು ಉಚ್ಚಾರಗಳನ್ನು ತೀವ್ರಗತಿಯಲ್ಲಿ ಉಚ್ಚರಿಸುವ ಸೌಲಭ್ಯವನ್ನುಂಟು ಮಾಡುವಲ್ಲಿ, ಭಾಷಾ ರಚನೆಯ ಪ್ರಕ್ರಿಯೆಯನ್ನುಳಿಸಿಕೊಂಡು ಬರುವಲ್ಲಿ ಸಂಧಿ

* ಡಾ. ವಿಲ್ಯಂ ಮಾಡ್ತ ಅವರ 'ಕನ್ನಡ ಸಂಧಿಗಳು' (ಕರ್ನಾಟಕ ಭಾರತಿ ಲೇಖನ ಹಾಗೂ 'ಕನ್ನಡ ಭಾಷೆಯ ರೂಪರೇಷಗಳು' ಗ್ರಂಥದ ಆಧಾರದಲ್ಲಿ ಪಡೆಯಲಾಗಿದೆ.

ಮಹತ್ವಪೂರ್ಣವೆನಿಸುತ್ತವೆ. ಎರಡು ಪದಗಳನ್ನು ಉಚ್ಚರಿಸುವಾಗ ಬೇಕಾಗುವ ಸಮಯ ಇಲ್ಲಿ ಗಮನಾರ್ಹವಾಗಿರುತ್ತದೆ. ಸಂಧಿಯನ್ನು ಎಲ್ಲಿ ಮಾಡಬೇಕು ಎಲ್ಲಿ ಮಾಡಕೂಡದು ಎನ್ನುವುದಕ್ಕೆ ಉಚ್ಚಾರದ ಸಮಯವೇ ಕೆಲವು ಸಲ ನಿರ್ಧಾರಕ ಅಂಶವಾಗಬಹುದು. ಸಂಧಿಕಾರ್ಯದಲ್ಲಿ ನಡೆಯುವ ಧ್ವನಿಮಾ ಬದಲಾವಣೆಯು ಸಹಜವಾಗಿರಲಿ, ಅಸಹಜವಾಗಿರಲಿ ಅಥವಾ ಅರ್ಥವತ್ತಾಗಿರಲಿ, ಅರ್ಥವತ್ತಾಗಿರದೇ ಇರಲಿ ಎಲ್ಲವನ್ನೂ ಒಳಗೊಳ್ಳುತ್ತದೆಯಾದರೂ ಭಾಷೆಯ ಒಳರಚನೆಯನ್ನು ಬಿಟ್ಟು ಸಂಧಿ ನಡೆಯುವುದಿಲ್ಲ ಹಾಗೂ ಅಸಹಜತೆ ಇಲ್ಲವೆ ಅಪಾರ್ಥ ಉಂಟಾಗುವುದನ್ನು ಹೆಚ್ಚಿನಮಟ್ಟಿಗೆ ಅದು ತಪ್ಪಿಸುತ್ತದೆ. ಆಕೃತಿಮಾಶಾಸ್ತ್ರ ಹಾಗೂ ಧ್ವನಿಮಾ ಶಾಸ್ತ್ರಗಳ ನಡುವಿನ ಸೇತುವೆಯೇ ಸಂಧಿ, ಅಂದರೆ ಆಕೃತಿಮಾ ಬದ್ಧ ರಚನೆಯಲ್ಲಿ ನಡೆಯುವ ಧ್ವನಿಮಾ ಬದಲಾವಣೆಯೇ ಸಂಧಿ.

ಸಂಧಿಗಳನ್ನು ಪದಮಧ್ಯ (Internal) ಪದಾಂತ್ಯ (External) ಎಂದು ಪ್ರಮುಖವಾಗಿ ವರ್ಗೀಕರಿಸಲಾಗುತ್ತದೆ. ಸ್ವಯಂಚಾಲಿತ, ಸ್ವಯಂಚಾಲಿತವಲ್ಲದ; ನಿಯಮಿತ, ಅನಿಯಮಿತ; ಆಕೃತಿಮಾಬದ್ಧ; ಧ್ವನಿಮಾಬದ್ಧ ; ವಿರಳ (Sporadic) ಐಚ್ಛಿಕ, —ಹೀಗೆ ಅನೇಕ ವಿಧವಾಗಿ ಸಂಧಿಗಳನ್ನು ವಿಂಗಡಿಸಲಾಗುತ್ತದೆ. ಪದಮಧ್ಯ, ಪದಾಂತ್ಯ ಸಂಧಿಗಳನ್ನು ಪುರಾತನರು ಶಬ್ದ ಘಟಕದ ಮಟ್ಟದಲ್ಲಿ ಪರಿಗಣಿಸಿ ಹೇಳಿದರೆ ಆಧುನಿಕರು ಆಕೃತಿಮಾ ಘಟಕದ ಮಟ್ಟದಲ್ಲಿ ಪರಿಗಣಿಸಿ ಹೇಳುತ್ತಾರೆ. ಒಂದು ಆಕೃತಿಮಾದ ಸೀಮೆಯ ಒಳಗೆಯೇ ಆಗುವ ಧ್ವನಿ ಬದಲಾವಣೆ ಅಂತಃ ಸಂಧಿಯೆನಿಸಿದರೆ ಒಂದು, ಆಕೃತಿಮಾದ ಸೀಮೆಯ ಹೊರಗಡೆ ನಡೆಯುವ ಧ್ವನಿ ಬದಲಾವಣೆ ಬಹಿರ್ ಸಂಧಿ ಎನಿಸುತ್ತವೆ.

### 6.1.1 ಪದಾಂತ್ಯ (ಬಹಿರ್) ಸಂಧಿ :

ಎರಡು ಸ್ವತಂತ್ರ ಆಕೃತಿಮಾಗಳನ್ನು ಇಲ್ಲವೆ ಒಂದು ಸ್ವತಂತ್ರ ಮತ್ತೊಂದು ಬದ್ಧ ಹೀಗೆ ಎರಡು ಆಕೃತಿಮಾಗಳನ್ನು ಕೂಡಿಸಿ ಉಚ್ಚರಿಸಿದಾಗ ಉಂಟಾಗುವ ಸಂಧಿಯೆ ಪದಾಂತ್ಯಸಂಧಿ ಎನಿಸುತ್ತದೆ. ಪದಮಧ್ಯಸಂಧಿಯಲ್ಲಿ ಒಂದೇ ಪದದ ಸೀಮೆಯೊಳಗಾಗುವ ಸಂಧಿ ಪ್ರಕ್ರಿಯೆಗೆ ಮಹತ್ವವಿದ್ದರೆ ಪದಾಂತ್ಯ ಸಂಧಿಯಲ್ಲಿ ಪೂರ್ವಪದದ ಸೀಮೆಯ ಹೊರಗಡೆಗೆ ಆಗುವ ಸಂಧಿ ಪ್ರಕ್ರಿಯೆ ಮುಖ್ಯವಾಗಿರುತ್ತವೆ. ಪದ್ಯಾಂತ, ಸಂಧಿಯನ್ನು (Exteranl Sandhi) ಎಂದು ಕರೆಯುತ್ತಾರೆ. ಪದಾಂತ್ಯ ಸಂಧಿಯಲ್ಲಿ ಸ್ವರದ ಮುಂದೆ ಸ್ವರ ಬಂದಾಗ ಉಂಟಾಗುವ ಸಂಧಿಯನ್ನು

ಸ್ವರಸಂಧಿಯೆಂದು ಹಾಗೂ ಉಳಿದವುಗಳನ್ನು ವ್ಯಂಜನಸಂಧಿ ಎಂಬು ಪ್ರಮುಖವಾಗಿ ಇಬ್ಬಗೆಯಲ್ಲಿ ವಿವರಿಸಲಾಗುತ್ತದೆ.

ಪದಾಂತ್ಯ ಸ್ವರಸಂಧಿಯುಲ್ಲಿ ಎರಡು ಮುಖ್ಯ ಪ್ರಕಾರಗಳು : ೧. ಪ್ರತ್ಯಯುಕ ಸಂಧಿ ೨. ಪ್ರತ್ಯಯೇತರ ಸಂಧಿ. ಪ್ರತ್ಯಯುಕ ಸಂಧಿಗಳಲ್ಲಿ ಯ್ ಕಾರಾಗವು, ವ್ ಕಾರಾಗವು, ಇನಾಗವು ಎಂದು ಮೂರು ಬಗೆ, ಇನ್ನು ಪ್ರತ್ಯಯೇತರ ಸಂಧಿಗಳಲ್ಲಿ ಲೋಪಸಂಧಿ, ಯ್ ಕಾರಾಗವು ಸಂಧಿ ಹಾಗೂ ವ್ ಕಾರಾಗವು ಸಂಧಿ ಎಂದು ಮೂರು ಬಗೆ.

### 6.1.1.1 ಪ್ರತ್ಯಯುಕ ಸಂಧಿಗಳು :

#### 6.1.1.1.1 'ಯ್' ಕಾರಾಗವು ಸಂಧಿ :

ಪೂರ್ವಸ್ವರದಿಂದ ಅಂತ್ಯವಾಗುವ ಸ್ವತಂತ್ರ ಆಕೃತಿಮಾದ ಮುಂದೆ ಸ್ವರದಿಂದ ಆರಂಭವಾಗುವ ಬದ್ಧ ಆಕೃತಿಮಾ ಪರವಾದರೆ 'ಯ್' ಕಾರಾಗವು.

ಉದಾ : ಮಡಿ+ಇಂದ–ಮಡಿಯಿಂದ, ತಲೆ+ಅಲ್ಲಿ–ತಲೆಯಲ್ಲಿ,
ಮೇ+ಇಸು–ಮೇಯಿಸು.

#### 6.1.1.1.2 'ವ್' ಕಾರಾಗವು ಸಂಧಿ :

ಪಶ್ಚ (ಉ,ಊ,ಒ,ಓ)ಅಥವಾ ಮಧ್ಯಸ್ವರ(ಅ,ಆ)ಇವು ಸ್ವತಂತ್ರ ಆಕೃತಿಮಾಗಳ ಕೊನೆಯಲ್ಲಿ ಬಂದು ಅವಕ್ಕೆ 'ಅ' ಇಲ್ಲವೆ 'ಇ' ಸ್ವರದಿಂದ ಆರಂಭವಾಗುವ ಬದ್ಧ ಆಕೃತಿಮಾ ಪರವಾದಲ್ಲಿ 'ವ್' ಕಾರಾಗವು.

ಉದಾ : ಕರು+ಅನ್ನು–ಕರುವನ್ನು ; ಶರಾ+ಅನ್ನು–ಶರಾವನ್ನು : ಬಲ+ಅನ್ನು–ಬಲವನ್ನು ; ತರು+ಅನ್ನು–ತರುವನ್ನು ; ರೇಡಿಯೋ+ಅನ್ನು–ರೇಡಿಯೋವನ್ನು ; ಹೂ+ಅನ್ನು–ಹೂವನ್ನು ; ತನು+ಇಗೆ–ತನುವಿಗೆ

ವಿಚಾರ : ಕೆಲವು ಉದಾಹರಣೆಗಳಲ್ಲಿ 'ವ್' ಆಗವುವಾಗಬೇಕಾದಲ್ಲಿ ಅದರ ಬದಲಿಗೆ –ದ್, –ವಿನ್–ಎಂಬ ರಿಕ್ತಾಕೃತಿಮಾಗಳು ಆಗವುವಾಗುತ್ತವೆ. ಕನ್ನಡ ಭಾಷಾ ರಚನೆಗನುಗುಣವಾಗಿ 'ವ್' ಕಾರವೇ ರೂಪಾಂತರ [Transformation] ಗೊಂಡು-ದ್– –ವಿನ್– ಆಗಿದೆ.

ಉದಾ : ಕುಲ+ದ್+ಇಂದ–ಕುಲದಿಂದ ; ಕರು+ವಿನ್+ಇಂದ–ಕರುವಿನಿಂದ
ಗೋಪು+ವಿನ್+ಇಂದ–ಗೋಪುವಿನಿಂದ; ಹೂ+ವಿನ್+ಇಂದ–ಹೂವಿನಿಂದ;
ತನು+ವಿನ್+ಅಲ್ಲಿ–ತನುವಿನಲ್ಲಿ

ರೂಪಾಂತರ ನಿಯಮ :

ನ್ => [ –ದ್– / –ವಿನ್– ] ಮಧ್ಯ ಅಥವಾ ಪಶ್ಚಸ್ವರದಿಂದ ಅಂತ್ಯಗೊಳ್ಳುವ ಆಕೃತಿಮಾ ಇದ್ದಾಗ ಹಾಗೂ ಅದರ ಮುಂದೆ 'ಇ', ಅಥವಾ 'ಅ' ದಿಂದ ಆರಂಭವಾಗುವ ಪ್ರತ್ಯಯ ಬಂದಾಗ

### ೬.1.1.1.3 ಇನಾಗಮ ಸಂಧಿ :

ವ್ಯಂಜನಾಂತ ಅಮಹತ್ ಆಕೃತಿಮಾಕ್ಕೆ ಸ್ವರವ್ಯಾದ 'ಅ'/'ಇ' ರೂಪದ (ಇಂದ, ಅಲ್ಲಿ) ಬದ್ಧ ಆಕೃತಿಮಾ ಪರವಾದರೆ 'ಇನ್' ಆಗಮ.

ಉದಾ : ಕಾರ್+ಇನ್+ಅಲ್ಲಿ—ಕಾರಿನಲ್ಲಿ ; ಕಾಲ್+ಇನ್+ಇಂದ–ಕಾಲಿನಿಂದ
ಮಣ್+ಇನ್+ಅಲ್ಲಿ–ಮಣ್ಣಿನಲ್ಲಿ; ಪೆನ್+ಇನ್+ಇಂದ–ಪೆನ್ನಿನಿಂದ
ಬೆನ್+ಇನ್+ಇಂದ–ಬೆನ್ನಿನಿಂದ; ತಪ್+ಇನ್+ಇಂದ–ತಪ್ಪಿನಿಂದ

ವಿಚಾರ ೧ : ಗುಂಡು ಕಂಪು ಇಂತಹ ಆಕೃತಿಮಾಗಳಲ್ಲಿ ಸ್ವರಾಂತವಿದ್ದರೂ ಇನಾಗಮ.

ಉದಾ : ಕಂಪು+ಇನ್+ಅಲ್ಲಿ–ಕಂಪಿನಲ್ಲಿ;
ಗುಂಡು+ಇನ್+ಅಲ್ಲಿ–ಗುಂಡಿನಲ್ಲಿ

ವಿಚಾರ ೨ : 'ಇನ್' ಬರಬೇಕಾದ ಸ್ಥಾನದಲ್ಲಿ 'ಇನ್' ದ ರೂಪಾಂತರಿತ ರೂಪ 'ಅರ್' ಎಂಬ ರಿಕ್ತಾಕೃತಿಮಾ ಸಂಖ್ಯಾ ಹಾಗೂ ಪ್ರಮಾಣವಾಚಕ ಆಕೃತಿಮಾಗಳಿದ್ದಾಗ ಆಗಮವಾಗುತ್ತದೆ.

ಉದಾ : ಒಂದ್+ಅರ್+ಇಂದ–ಒಂದರಿಂದ : ಅಯ್ದ್+ಅರ್+ಅಲ್ಲಿ–ಅಯ್ದರಲ್ಲಿ;
ಅಷ್ಟ್+ಅರ್+ಅಲ್ಲಿ–ಅಷ್ಟರಲ್ಲಿ; ಇಷ್ಟ್+ಅರ್+ಇಂದ–ಇಷ್ಟರಿಂದ;
ನೂರ್+ಅರ್+ಅಲ್ಲಿ–ನೂರರಲ್ಲಿ

ರೂಪಾಂತರ ನಿಯಮ :

ಇನ್ > ಅರ್ / { ಸಂಖ್ಯಾವಾಚಕಗಳು / ಪ್ರಮಾಣವಾಚಕಗಳು } ಅಲ್ಲಿ / ಇಂದ

### 6.1.1.2 ಪ್ರತ್ಯಯೇತರ ಸಂಧಿಗಳು :

### 6.1.1.2.1 ಲೋಪ ಸಂಧಿ :

ಪೂರ್ವಪದದ ಅಂತ್ಯ ಸ್ವರದ ಮುಂದೆ ಸ್ವರದಿಂದ ಆರಂಭವಾದ ಪದವು ಪರವಾದರೆ ಪೂರ್ವಪದದ ಅಂತ್ಯಸ್ವರ ಲೋಪವಾಗುತ್ತದೆ.

ಉದಾ : ಮುಂದೆ+ಇದ್ದ–ಮುಂದಿದ್ದ ; ತೋಟ+ಎಲ್ಲಿ–ತೋಟೆಲ್ಲಿ
ಹಾರು+ಆಟ–ಹಾರಾಟ; ಹಾಲು+ಊಟ–ಹಾಲೂಟ
ಕಣ್ಣು+ಇದೆ—ಕಣ್ಣಿದೆ; ಮಣ್ಣು+ಅಲ್ಲ—ಮಣ್ಣಲ್ಲ
ನಿನಗೆ+ಒಂದು—ನಿನಗೊಂದು; ಅವನ+ಓರಿಗೆಯ–ಅವನೋರಿಗೆಯ
ಸಿಕ್ಕನು+ಅವನು—ಸಿಕ್ಕನವನು; ಸಣ್ಣಗೆ+ಇದೆ—ಸಣ್ಣಗಿದೆ;
ಅತ್ತ+ಇತ್ತ—ಅತ್ತಿತ್ತ; ಸುತ್ತಿ+ಎತ್ತಿಕೊಂಡು—ಸುತ್ತೆತ್ತಿಕೊಂಡು
ಓಡಿ+ಓಡಿ—ಓಡೋಡಿ; ತೂಗಿ+ಆಡಿ—ತೂಗಾಡಿ

ವಿಚಾರ : ಕೆಲವೆಡೆ ಸಂಧಿ ಐಚ್ಛಿಕವಾಗಿದೆ. ಸಂಧಿ ನಡೆದರೂ ಅಲ್ಲಿ 'ಯ್', 'ವ್' ಆಗಮವಾಗುತ್ತವೆ—

ಉದಾ : ಹುಡುಗಿ+ಇಲ್ಲ—ಹುಡುಗಿಯಿಲ್ಲ; ನಾಳೆ+ಇದೆ—ನಾಳೆಯಿದೆ.
ಬೆಲ್ಲ+ಅದೆ—ಬೆಲ್ಲವದೆ; ಸುಣ್ಣ+ಇಲ್ಲ—ಸುಣ್ಣವಿಲ್ಲ.

### 6.1.1.2.2 'ಯ್'ಕಾರಾಗಮ ಸಂಧಿ :

ಪೂರ್ವಸ್ವರದಿಂದ ಅಂತ್ಯಗೊಳ್ಳುವ ಪದಕ್ಕೆ ಪಶ್ಚಸ್ವರದಿಂದ ಆರಂಭಗೊಳ್ಳುವ ಪದವು ಪರವಾದಾಗ 'ಯ್' ಕಾರಾಗಮವಾಗುತ್ತದೆ.

ಉದಾ : ಬೇಸಗೆ+ಒಳಗೆ– ಬೇಸಗೆಯೊಳಗೆ; ನುಡಿ+ಒಳಗೆ—ನುಡಿಯೊಳಗೆ
ಮನೆ+ಊಟ—ಮನೆಯೂಟ; ಹಸಿ+ಉಳ್ಳಿ—ಹಸಿಯುಳ್ಳಿ
ಹಿರಿ+ಊರು—ಹಿರಿಯೂರು,

**6.1.1.2.3 'ವ್' ಕಾರಾಗಮ ಸಂಧಿ :**

ಮಧ್ಯ, ಪಶ್ಚಸ್ವರಗಳಿಂದ ಅಂತ್ಯವಾಗುವ ಪದಗಳಿಗೆ ಯಾವುದೇ ಸ್ವರದಿಂದ ಆರಂಭವಾಗುವ ಪದ ಪರವಾದರೆ "ವ್" ಕಾರಾಗಮ.

ಉದಾ ; ತಿಲಕ+ಇಟ್ಟು–ತಿಲಕವಿಟ್ಟು; ಕಾರ್ಯ+ಇಲ್ಲ–ಕಾರ್ಯವಿಲ್ಲ
ಮಧು+ಇದೆ–ಮಧುವಿದೆ; ಗುಣ+ಎಲ್ಲಿ–ಗುಣವೆಲ್ಲಿ
ತರ+ಅಲ್ಲ–ತರವಲ್ಲ; ಕರು+ಓಡಿತು–ಕರುವೋಡಿತು
ಗುರು+ಅಲ್ಲ–ಗುರುವಲ್ಲ; ಬಲ+ಏರು–ಬಲವೇರು

**6.1.1.2.4 ಪ್ರತ್ಯಯೇತರ ವ್ಯಂಜನ ಸಂಧಿಗಳು :**

**6.1.1.2.4.1 ಗದಬಜ ಸಂಧಿ :**

ಉತ್ತರ ಪದಾದಿಯಲ್ಲಿಯ ಕ್, ತ್, ಪ್, ಸ್, ಧ್ವನಿಮಾಗಳು ಗ್, ದ್, ಬ್, ಜ್ ಗಳಾಗುತ್ತವೆ.–

ಉದಾ : ಹಳ+ಕನ್ನಡ-ಹಳಗನ್ನಡ; ಹುಲಿ+ತೊಗಲು–ಹುಲಿದೊಗಲು
ಹೂ+ತೋಟ–ಹೂದೋಟ; ಮೇಲ್+ತುಟಿ–ಮೇಲ್ದುಟಿ
ಮರ+ಕಾಲು–ಮರಗಾಲು;
ಕಣ್+ಪನಿ–ಕಂಬನಿ;
ಮರು+ಸಲ–ಮರ್ಜಲ;
ಇರ್+ಸಾಸಿರ–ಇರ್ಚ್ಛಾಸಿರ.

ಕೆಲವೆಡೆ ಈ ಸಂಧಿ ಕಂಡು ಬರುವುದಿಲ್ಲ—

ಉದಾ : ತಲೆಕಟ್ಟು, ಬೆಸೆಕೋಲ್, ಬೆಸ್ಸರಿ, ಕಲ್ಸರೆ, ಬಾಯ್ಸವಿ, ಕಯ್ಸೆರೆ, ಮೆಯ್ಸಿರಿ.

**6.1.1.2.4.2 ದ್ವಿತ್ವ ಸಂಧಿ :**

ಪೂರ್ವಪದದ ಅಂತ್ಯದ ರ್, ಣ್, ಲ್, ವ್ಯಂಜನಗಳು ದ್ವಿತ್ವವಾಗುತ್ತವೆ.

ಉದಾ : ಇರ್+ಕೆಲ–ಇಕ್ಕೆಲ್ಲ; ಇರ್+ಭಾಗ–ಇಭ್ಭಾಗ
ಕಣ್+ಎವೆ—ಕಣ್ಣೆವೆ; ತಣ್+ಅನೆ—ತಣ್ಣನೆ;
ಮೆಲ್+ಅನೆ ಮೆಲ್ಲನೆ.

### 6.1.1.2.4.3 ಉಭಯೋಷ್ಠ್ಯ ಅರೆವ್ಯಂಜನ ಸಂಧಿ :

ಉತ್ತರಪದದ ಆದಿಯಲ್ಲಿ ಉಭಯೋಷ್ಠ್ಯ ವ್ಯಂಜನಗಳು ಉಭಯೋಷ್ಠ್ಯ ಅರೆವ್ಯಂಜನ 'ವ್' ಆಗಿ ಪರಿವರ್ತಿತವಾಗುತ್ತವೆ. ಉದಾ : ಎಳ+ಪೆರೆ—ಎಳವೆರೆ ; ಕಡು ಬಿಸಿಲು—ಕಡುವಿಸಿಲು; ಮೇಲ್+ಮಾತು—ಮೇಲ್ವಾತು; ನಡು+ಬೀದಿ—ನಡುವೀದಿ; ಕೆನೆ+ಪಾಲು—ಕೆನೆವಾಲು; ಕೈ+ಪಿಡಿ—ಕೈವಿಡಿ; ಎಳೆ+ಬಾಳೆ—ಎಳೆವಾಳೆ.

### 6.1.2 ಪದಮಧ್ಯ ಸಂಧಿಗಳು (ಅಂತಸ್ಸಂಧಿಗಳು) :

ಒಂದು ಸ್ವತಂತ್ರ ಆಕೃತಿಮಾದಲ್ಲಿಯೆ ಆಂತರಿಕವಾಗಿ ಸಂಧಿಕ್ರಿಯೆ ನಡೆದರೆ ಅದನ್ನು ಅಂತಸ್ಸಂಧಿ ಇಲ್ಲವೆ ಪದಮಧ್ಯಸಂಧಿ ಎಂದು ಕರೆಯಲಾಗುತ್ತದೆ.

ಉದಾ : 'ನಾನು' →'ನನ್ನ' ; ನಗು→ನಕ್ಕು; ಬಸ್→ಬಸ್ಸು

### 6.1.2.1 ಸರ್ವನಾಮಗಳಿಗೆ ಸಂಬಂಧಿಸಿದ ಸಂಧಿಗಳು :

ತೃತೀಯ ಪುರುಷ ಸರ್ವನಾಮಗಳು ಈ ಸಂಧಿಗೆ ಒಳಪಡುವುದಿಲ್ಲ. ಇತರೆ ಯಾವುದೇ ಸರ್ವನಾಮದ ಮುಂದೆ ವಿಭಕ್ತಿಪ್ರತ್ಯಯ ಪರವಾದಾಗ ಸರ್ವನಾಮದ ಪ್ರಥಮಾಕ್ಷರ ಹ್ರಸ್ವವಾಗುತ್ತದೆ.

6.1.2.1.1 ಸ್ವರದಿಂದ ಆರಂಭವಾಗುವ ವಿಭಕ್ತಿಪ್ರತ್ಯಯ ಪರವಾದರೆ ಸರ್ವನಾಮದ ಅಂತ್ಯವ್ಯಂಜನ 'ನ್' ಕಾರ ದ್ವಿತ್ವವಾಗುತ್ತದೆ. ಅಂತ್ಯವ್ಯಂಜನ 'ವ್' ಕಾರವಿದ್ದರೆ 'ಮ್' ಕಾರವಾಗಿ ಪರಿವರ್ತನೆಗೊಂಡು ದ್ವಿತ್ವವಾಗುತ್ತದೆ.

ಉದಾ : ನಾನು+ಅ(ಷಷ್ಠಿ)—ನನ್ನ; ನೀನು+ಅ—ನಿನ್ನ
ತಾನು+ಅ—ತನ್ನ ; ನಾವು+ಅ—ನಮ್ಮ
ನೀವು+ಅ—ನಿಮ್ಮ ; ತಾವು+ಅ—ತಮ್ಮ

6.1.2.1.2 ಚತುರ್ಥಿ ವಿಭಕ್ತಿಪ್ರತ್ಯಯ ಸರ್ವನಾಮಗಳಿಗೆ ಪರವಾದಾಗ ಸರ್ವನಾಮದ ಅಂತ್ಯಸ್ವರ 'ಅ' ಕಾರಾಂತವಾಗುತ್ತದೆ. ಪ್ರಥಮಸ್ವರ ಹ್ರಸ್ವವಾಗುತ್ತದೆ. ಬಹುವಚನವಿದ್ದರೆ 'ವ್' ಕಾರ 'ಮ್' ಕಾರವಾಗಿ ಮಾರ್ಪಡುತ್ತದೆ.

ಉದಾ : ನಾನು+ಗೆ—ನನಗೆ; ನಾವು+ಗೆ—ನಮಗೆ
ನೀನು+ಗೆ—ನಿನಗೆ; ನೀವು+ಗೆ—ನಿಮಗೆ
ತಾನು+ಗೆ—ತನಗೆ; ತಾವು+ಗೆ—ತಮಗೆ

**6.1.2.1.3** ಏಕವಚನ ಸರ್ವನಾಮಗಳನ್ನು ಬಹುವಚನವನ್ನಾಗಿಸುವಲ್ಲಿ ಸಂಧಿ ಘಟಿಸುತ್ತದೆ—

**6.1.2.1.3.1 'ವ್' ಆದೇಶ :** ಪ್ರಥಮ ಹಾಗೂ ದ್ವಿತೀಯ ಪುರುಷ ಏಕವಚನ ಸರ್ವನಾಮವು ಬಹುವಚನವಾದಾಗ ಅಂತ್ಯ 'ನ್' ಕಾರವು 'ವ್' ಕಾರವಾಗುತ್ತದೆ. ತೃತೀಯ ಪುರುಷ ಅಮಹತ್ ವರ್ಗದ ಸರ್ವನಾಮದ ಅಂತ್ಯ 'ದ್' ಕಾರವೂ 'ವ್' ಕಾರವಾಗುತ್ತದೆ.

ನೀನು—ನೀವು, ನಾನು—ನಾವು, ತಾನು—ತಾವು
ಅದು—ಅವು, ಇದು—ಇವು

**6.1.2.1.3.2** ತೃತೀಯ ಪುರುಷ ಮಹತ್ ಸರ್ವನಾಮಗಳು ಬಹುವಚನ ಆಗುವಾಗ (ಅ)ರು ಪ್ರತ್ಯಯ ಪರವಾಗಿ ಸರ್ವನಾಮದ ಅಂತ್ಯಾಕ್ಷರ ಲೋಪವಾಗುತ್ತದೆ

ಅವನು+(ಅ)ರು—ಅವರು; ಅವಳು+(ಅ)ರು—ಅವರು
ಇವನು+(ಅ)ರು—ಇವರು; ಇವಳು+(ಅ)ರು—ಇವರು
ಈ ಬಗೆ ಪ್ರಶ್ನಾರ್ಥಕ ಸರ್ವನಾಮಗಳಲ್ಲಿಯೂ ಕಾಣುತ್ತದೆ.
ಯಾವನು+(ಅ)ರು—ಯಾರು; ಯಾವಳು+(ಅ)ರು—ಯಾರು

**6.1.2.2. ಕ್ರಿಯಾಪದಕ್ಕೆ ಸಂಬಂಧಿಸಿದ ಸಂಧಿಗಳು :**

ಕ್ರಿಯಾಧಾತುಗಳು ಕಾಲವಾಚಕ, ಪುರುಷವಾಚಕ ಪ್ರತ್ಯಯಗಳನ್ನು ಪಡೆಯುವಾಗ ಸಂಧಿಪ್ರಕ್ರಿಯೆ ನಡೆಯುತ್ತದೆ. ಆ ಸಂಧಿಗಳು ನಾಮಪದಗಳ ಸಂಧಿಗಿಂತ ಭಿನ್ನವಾಗಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ವಿವರಿಸುವುದು ಸರಿ.

**6.1.2.2.1** ಭೂತಕಾಲ ಸೂಚಕ ಪ್ರತ್ಯಯ 'ದ್' ಇದು 'ಆಗ್', 'ಹೋಗ್' ಇಂತಹ ಧಾತುಗಳ ಮುಂದೆ ಬಂದು ನಪುಂಸಕಲಿಂಗ ಪ್ರತ್ಯಯ (ಇತು) ಇದಕ್ಕೆ

ಪರವಾದಾಗ ಧಾತುವಿನಲ್ಲಿರುವ ಕೊನೆಯ ವ್ಯಂಜನ (ಗ್) ಹಾಗೂ ಭೂತಕಾಲ ಸೂಚಕ ಪ್ರತ್ಯಯ (ದ್) ಲೋಪವಾಗಿ 'ಯ್' ಕಾರಾದೇಶವಾಗುತ್ತದೆ.

ಉದಾ : ಆಗ್+ದ್+ಇತು–ಆಯಿತು, ಹೋಗ್+ದ್+ಇತು–ಹೋಯಿತು.

6.1.2.2.1.1 ಇದೇ ಪರಿಸರದಲ್ಲಿ ನಪುಂಸಕಲಿಂಗಸೂಚಕ ಪ್ರತ್ಯಯದ ಬದಲಾಗಿ ಪುರುಷವಾಚಕ ಪ್ರತ್ಯಯಗಳು ಪರವಾದರೆ 'ದ್' ಲೋಪವಾಗುವುದಿಲ್ಲ.

ಆಗ್+ದ್+ಅನು—ಆದನು; ಹೋಗ್+ದ್+ಅನು—ಹೋದನು
ಆಗ್+ದ್+ಅಳು—ಆದಳು; ಹೋಗ್+ದ್+ಅಳು—ಹೋದಳು

(ಇದರಂತೆ 'ಅರು' ಪ್ರತ್ಯಯ ಪರವಾದರೂ ಆದರು, ಹೋದರು ಎಂಬ ರೂಪಗಳು ನಿಷ್ಪನ್ನವಾಗುತ್ತವೆ).

6.1.2.2.1.2 ಬಾಗ್, ತಾಗ್, ತೂಗ್ ಇಂತಹ ಧಾತುಗಳು ಇದ್ದಾಗ ನಪುಂಸಕ ಲಿಂಗಸೂಚಕ ಪ್ರತ್ಯಯದ ಹಿಂದಿನ 'ದ್' ಲೋಪವಾಗುತ್ತದೆ.

ಇತರೆಡೆ ದ್=> ಇದ್ ರೂಪಾಂತರವಾಗುತ್ತದೆ.
ಬಾಗ್+ದ್+ಇತು> ಬಾಗಿತು; ತೂಗ್+ದ್+ಇತು> ತೂಗಿತು
ತಾಗ್+ದ್+ಇತು> ತಾಗಿತು,
ಬಾಗ್+(ಇ) ದ್+ಅನು> ಬಾಗಿದನು; ತಾಗ್+(ಇ)ದ್+ಅನು> ತಾಗಿದನು
ತೂಗ್+(ಇದ್)+ಅನು> ತೂಗಿದನು
'ಕಾಯ್' ಎಂಬ ಧಾತುವಿದ್ದಾಗ ಲೋಪವಿಲ್ಲ.
ಕಾಯ್+ದ್+ಅನು> ಕಾಯ್ದನು.

6.1.2.2.1.3 ನೋಯ್, ತರ್, ಬರ್, ಕೊಲ್ ಇಂತಹ ಧಾತುಗಳಿದ್ದಲ್ಲಿ ಪ್ರಥಮಾಕ್ಷರ ದೀರ್ಘವಿದ್ದರೆ ಹ್ರಸ್ವವಾಗುತ್ತದೆ. ಹಾಗೂ ಅಂತ್ಯವ್ಯಂಜನವು 'ನ್' ಆಗಿ ರೂಪಾಂತರವಾಗುತ್ತದೆ.

ನೋಯ್+ದ್+ಇತು> ನೊಂದಿತು;
ನೋಯ್+ದ್+ಅನು> ನೊಂದನು;
ತರ್+ದ್+ಇತು> ತಂದಿತು; ಕೊಲ್+ದ್+ಇತು> ಕೊಂದಿತು.

**6.1.2.2.1.4** ಇರ್, ಬೀಳ್, ಏಳ್, ಗೆಲ್ ಇಂತಹ ಧಾತುಗಳ ಅಂತ್ಯ ವ್ಯಂಜನವು ಮುಂದೆ ಬರುವ 'ದ್'ದ ರೂಪವನ್ನೇ ಪಡೆಯುತ್ತದೆ. ಪ್ರಥಮಾಕ್ಷರವು ದೀರ್ಘವಿದ್ದರೆ ಅದು ಹ್ರಸ್ವವಾಗುವುದು.

ಇರ್+ದ್+ಇತು> ಇದ್ದಿತು; ಗೆಲ್+ದ್+ಇತು> ಗೆದ್ದಿತು.
ಬೀಳ್+ದ್+ಇತು> ಬಿದ್ದಿತು; ಏಳ್+ದ್+ಇತು> ಎದ್ದಿತು.
(ಇದರಂತೆ....ಇದ್ದನು, ಇದ್ದಳು, ಬಿದ್ದಳು, ಬಿದ್ದನು, ಎದ್ದರು, ಗೆದ್ದರು ಇತ್ಯಾದಿ)

**6.1.2.2.1.5** ಕೊಳ್ ಧಾತುವಿಗೆ ಭೂತಕಾಲವಾಚಕ ಪ್ರತ್ಯಯ 'ದ್' ಪರವಾದಾಗ ಇದರಲ್ಲಿಯ 'ಳ್' ಕಾರವು "ಣ್" ಕಾರವಾಗಿ ಪರಿವರ್ತಿತವಾಗುತ್ತದೆ. ಹಾಗೂ ಮುಂದಿನ "ದ್" ಕಾರವನ್ನೂ ತನ್ನ ವರ್ಗದ ಮೂರ್ಧನ್ಯವಾಗಿಸುತ್ತದೆ--

ಕೊಳ್+ದ್+ಇತು> ಕೊಣ್+ಡ್+ಇತು> ಕೊಂಡಿತು.
(ಇದೇ ರೀತಿ ಕೊಂಡನು, ಕೊಂಡಳು, ಕೊಂಡರು ಇತ್ಯಾದಿ.)

**6.1.2.2.2** ಭೂತಕಾಲವಾಚಕ ಪ್ರತ್ಯಯ "ತ್" ಬರುವೆಡೆಯಲ್ಲಿ ಧಾತುವಿನ ಅಂತ್ಯ ವ್ಯಂಜನವು (i) "ನ್" ಆಗಿ ಇಲ್ಲವೆ (ii) ಲೋಪವಾಗಿ ಅಥವಾ (iii) "ತ್" ಕಾರಕ್ಕೆ ಪರಿವರ್ತನೆ ಹೊಂದುತ್ತದೆ. ಉದಾ :

**6.1.2.2.2.1** ನಿಲ್+ತ್+ಇತು> ನಿಂತಿತು.
ಕುಳ್+ತ್+ಇತು> ಕುಂತಿತು.

(ಹೀಗೆಯೆ ನಿಂತರು, ನಿಂತಳು, ಕುಂತನು, ಕುಂತರು ಇತ್ಯಾದಿ)

**6.1.2.2.2.2.** ಸೋಲ್+ತ್+ಇತು> ಸೋತಿತು;
ಜೋಲ್+ತ್+ಇತು> ಜೋತಿತು;
ಹೂಳ್+ತ್+ಇತು> ಹೂತಿತು;
ನೂಲ್+ತ್+ಇತು> ನೂತಿತು;

(ಹೀಗೆಯೆ ಸೋತನು, ಸೋತಳು, ಸೋತರು ಇತ್ಯಾದಿ)

6.1.2.2.2.3 ಅಳ್+ತ್+ಇತು> ಅತ್ತಿತು; ಪೆರ್+ತ್+ಇತು> ಪೆತ್ತಿತು;
ಕೀಳ್+ತ್+ಇತು> ಕಿತ್ತಿತ್ತು; ಸಾಯ್+ತ್+ಇತು> ಸತ್ತಿತು.

(ಹೀಗೆಯೆ ಅತ್ತರು, ಅತ್ತನು, ಸತ್ತನು ಇತ್ಯಾದಿ)

1.6.2.2.3 ಹ್ರಸ್ವಸ್ವರದಿಂದ ಕೂಡಿದ ಏಕಾಕ್ಷರ ಧಾತುವಿಗೆ ಭೂತಕಾಲ ಪ್ರತ್ಯಯ ಪರವಾದಾಗ ಧಾತುವಿನ ಅಂತ್ಯ ವ್ಯಂಜನ "ಗ್" ಹಾಗೂ "ಡ್" ಇವು ತಮ್ಮ ವರ್ಗದ ಪ್ರಥಮ ವ್ಯಂಜನದ್ವಿತ್ತ್ವವಾಗಿ ಪರಿವರ್ತಿತವಾಗುತ್ತವೆ–

ಮಿಗ್> ಮಿಕ್ಕ> ಮಿಕ್ಕನು, ಮಿಕ್ಕಳು, ಮಿಕ್ಕಿತು
ನಗ್> ನಕ್ಕ> ನಕ್ಕನು, ನಕ್ಕಳು, ನಕ್ಕಿತು
ಹೊಗ್> ಹೊಕ್ಕ> ಹೊಕ್ಕನು, ಹೊಕ್ಕಳು, ಹೊಕ್ಕಿತು
ಇಡ್> ಇಟ್> ಇಟ್ಟನು, ಇಟ್ಟಳು, ಇಟ್ಟಿತು
ಕೊಡ್> ಕೊಟ್> ಕೊಟ್ಟನು, ಕೊಟ್ಟಳು, ಕೊಟ್ಟಿತು
ಕಿಡ್> ಕೆಟ್> ಕೆಟ್ಟನು, ಕೆಟ್ಟಳು, ಕೆಟ್ಟಿತು

ಕ್ರಿಯಾಪದಕ್ಕೆ ಸಂಬಂಧಿಸಿದ ಸಂಧಿಗಳೆಲ್ಲ ಸಾಮಾನ್ಯವಾಗಿ ಪದಮಧ್ಯ ಅಥವಾ ಅಂತಸ್ಸಂದಿಗಳಲ್ಲಿ ಒಳಗೊಳ್ಳುತ್ತವೆ.

## ಅನುಬಂಧ

### 6.*.1 ಕೇಶಿರಾಜನು ಹೇಳಿರುವ ಕನ್ನಡ ಸಂಧಿಗಳು :

"ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವಂದಮದೆ ಸಂಧಿ" ೧ ಎಂದು ಕೇಶಿರಾಜನು ಸಂಧಿಯೆಂದರೇನೆಂಬುದನ್ನು ವರ್ಣಿಸಿದ್ದಾನೆ. "ಪರಃ ಸನ್ನಿಕರ್ಷಃ ಸಂಹಿತಾ" ಎಂದು ಪಾಣಿನಿ ಹೇಳಿದುದಕ್ಕೆ "ಕನಿಷ್ಟ" ಉಚ್ಚಾರಕ್ಕೆ ಬೇಕಾಗುವ ಅರ್ಧ ಮಾತ್ರಾ ಕಾಲಾವಕಾಶದಲ್ಲಿ ಉಚ್ಚರಿಸಲ್ಪಡುವುದೇ "ಸಂಧಿ" ಎಂದು ಪತಂಜಲಿ ವ್ಯಾಖ್ಯಾನಿಸಿದ್ದಾನೆ. ಸಂಧಿ ಸಂಘಟಿಸುವಲ್ಲಿ ಮಧ್ಯಗತ ವರ್ಣಗಳು ಲೋಪ

೧. ಶ. ಮ. ದ. ಸೂತ್ರ ೫೯

ವಾಗುತ್ತವೆಂದು ಕೇಶಿರಾಜನು ಹೇಳಿರುವುದನ್ನು ನೋಡಿದರೆ ಈ ಉಚ್ಚಾರದ ಕಾಲಾವಕಾಶದ ಅರಿವು ಅವನಿಗೆ ಇದ್ದಿರಬೇಕೆನಿಸುತ್ತದೆ.

ಕೇಶಿರಾಜನು ಪದಮಧ್ಯ, ಪದಾಂತ್ಯವೆಂದು ಸ್ಥೂಲವಾಗಿ ಸಂಧಿಗಳನ್ನು ಎರಡು ಬಗೆಯಲ್ಲಿ ಹಿಂಗಡಿಸಿದ್ದಾನೆ. ಪ್ರಕೃತಿ, ಪ್ರತ್ಯಯ ಸೇರಿದಾಗ ಉಂಟಾಗುವ ಸಂಧಿಗೆ ಪದಮಧ್ಯವೆಂದೂ (ಮಾತು+ಅವ್> ಮಾತಂ), ಪದ, ಪದ ಸೇರಿದಾಗ ಉಂಟಾಗುವ ಸಂಧಿಗೆ ಪದಾಂತ್ಯವೆಂದೂ (ಅವನ+ಅತ್ತನಂ> ಅವನಾತ್ತನಂ) ಎಂದು ಅವುಗಳನ್ನು ವಿವರಿಸಿದ್ದಾನೆ, ಇದಲ್ಲದೆ ಸ್ವರಸಂಧಿ, ವ್ಯಂಜನಸಂಧಿ, ಆಗವು ಸಂಧಿ, ಆದೇಶಸಂಧಿ ಎಂಬುದಾಗಿಯೂ ಅವನು ಸಂಧಿಗಳನ್ನು ಹೆಸರಿಸಿ ವಿವರಿಸಿದ್ದಾನೆ.

ನಾಮರೂಢಿಯಬಂಯದ ಪಕ್ಷದಲ್ಲಿ ಸ್ವರದ ಮುಂದೆ ಸ್ವರ ಬಂದಾಗ ಸ್ವರ ಲೋಪ (ಸೂ. ೬೨) ಆಗುತ್ತದೆಂದೂ. ಸೂ. ೬೩, ೬೪ ಇವುಗಳಲ್ಲಿ 'ಯ' ಕಾರಾಗಮ ಸಂಧಿಗಳನ್ನೂ ಹೇಳಿದ್ದಾನೆ. ಅ, ಇ, ಈ, ಓ, ಐ, ಎ, ಏ ಇವುಗಳ ಮುಂದೆ ಮತ್ತೊಂದು ಸ್ವರ ಬಂದರೆ ಅಥವಾ ಅವಧಾರಣೆಯ ಸ್ವರ ಪರವಾದರೂ 'ಯ್' ಆಗಮವಾಗುತ್ತದೆ. ಅಲ್ಲದೆ ಸಂಸ್ಕೃತ ಕನ್ನಡದ ಪ್ರಕೃತಿಗಳಿಗೆ 'ಇಸು' ಪ್ರತ್ಯಯ ಪರವಾದಾಗ 'ಯ್' ಆಗಮವೆನ್ನುತ್ತಾನೆ. ಉ, ಊ, ಋ, ೠ, ಓ, ಔ, ಇ, ಈ ಸ್ವರಗಳ ಮುಂದೆ ಸ್ವರ ಬಂದರೆ "ವ್" ಕಾರಾಗಮವೆಂದು ಹೇಳುತ್ತಾನೆ. ಆದರೆ ಅವನು ನೀಡಿರುವ ಉದಾಹರಣೆಗಳಲ್ಲಿ ಕೆಲವು ಮೂಲತಃ ಕನ್ನಡದವು ಅಲ್ಲವೇ ಅಲ್ಲ (ಉದಾ : ಋಷೇಂದ, ಗ್ಲಾನಂ, ಇತ್ಯಾದಿ). ಅನಂತರ (ಸೂ. ೬೬ ರಿಂದ ೭೪) ಸಂಧಿ ಎಲ್ಲಿ ಆಗುವುದಿಲ್ಲ ಅಥವಾ ಮಾಡಬಾರದು, ಎಲ್ಲಿ ವಿಕಲ್ಪ ಎಂಬುವನ್ನೆಲ್ಲ ವಿವರಿಸುತ್ತ ಸಾಗುತ್ತಾನೆ.

ಗಡಬಾದೇಶ. ಪ್ > ವ್, ಸ್ > ಚ್ ಬದಲಾವಣೆಗಳ ಸಂಧಿಗಳನ್ನು (ಸೂ. ೭೫ ರಿಂದ ೭೮) ವಿವರಿಸಿ ಣಯಲಗಳು ದ್ವಿತ್ವವಾಗುವ ಸಂಧಿಯೊಂದನ್ನು ಪ್ರತ್ಯೇಕವಾಗಿ ಹೇಳಿರುವನು. ಆದರೆ ವ್ಯಂಜನಾಂತ ಪದಗಳು ಸ್ವರಾಂತವಾಗುವಲ್ಲಿ ಈ ಬಗೆಯ ದ್ವಿತ್ವ ಕನ್ನಡದ ಸಹಜ ರೀತಿಯೆ ಆಗಿದೆ. ಕಣ್> ಕಣ್ಣು, ಮಣ್> ಮಣ್ಣು, ತಿನ್> ತಿನ್ನು, ಬಯ್> ಬಯ್ಯು, ಕೊಯ್> ಕೊಯ್ಯು, ಕಲ್> ಕಲ್ಲು. ಇವುಗಳನ್ನು ಗಮನಿಸಿರುವುದು ಉಚಿತವೇ ಆಗಿದೆ. ಮುಂದೆ (ಸೂ. ೮೦–೮೧) ದ್ವಿತ್ವ ಎಲ್ಲಿ ಇಲ್ಲ ಹಾಗೂ ಎಲ್ಲಿ ನಿತ್ಯ ಎಂಬುದನ್ನು ವಿವರಿಸಿದ್ದಾನೆ.

ಸಂಧಿ ಎಂಬ ಪ್ರಕರಣಪಡಿಯಲ್ಲಿ ೭೧ ಸೂತ್ರಗಳ ಸುದೀರ್ಘ ವಿವರಗಳಿದ್ದರೂ ನಿಜವಾಗಿ ಸಂಧಿ ಪ್ರಕ್ರಿಯೆಗೆ ನೇರವಾಗಿ ಸಂಬಂಧಿಸಿರುವ ಒಟ್ಟು ಸೂತ್ರಗಳೆಂದರೆ ಕೇವಲ ೨೨ ಮಾತ್ರ. ಪೀಠಿಕಾಪ್ರಕರಣ ಮುಗಿದು ಸಂಧಿಪ್ರಕರಣ ಆರಂಭವಾಗುವುದು ೧೧ ನೆಯ ಸೂತ್ರದಿಂದಾದರೂ ನಿಜವಾಗಿ ಸಂಧಿಗಳ ಬಗೆಗೆ ವಿವರಣೆಯು ೫೯ ನೆಯ ಸೂತ್ರದಿಂದ ಆರಂಭವಾಗುತ್ತದೆ. ೫೮ ರ ವರೆಗಿನ ವಿಷಯಗಳು ಸಂಜ್ಞಾವಿಭಾಗಕ್ಕೆ ಸಂಬಂಧಿಸಿದ್ದು, ಸಂಧಿ ಪ್ರಕರಣದಲ್ಲಿ ಸೇರಿಸಲಾಗಿದೆ.

ಸಂಧಿಗೆ ಸಂಬಂಧಿಸಿದ ಅನೇಕ ಅಂಶಗಳನ್ನು ನಾಮ, ಸಮಾಸ ಹಾಗೂ ಆಖ್ಯಾತ ಪ್ರಕರಣಳಗಲ್ಲಿ ಅಲ್ಲಲ್ಲಿ ವಿವರಿಸಲಾಗಿದೆ. ಉದಾಹರಣೆಗೆ–ದ್ವಿತ್ವಸಂಧಿ ವಿಚಾರ ನಾಮ ಪ್ರಕರಣದ ೧೬೯ ನೆಯ ಸೂತ್ರದಲ್ಲಿ ಬಂದಿದೆ. ವ್ಯಂಜನಲೋಪ ಹಾಗೂ ಇತರ ಸಂಧಿ ವಿಚಾರಗಳು ಸಮಾಸ ಪ್ರಕರಣದ ೧೮೮ ರಿಂದ ೧೯೫, ಆಖ್ಯಾತ ಪ್ರಕರಣದ ೨೮೩ ರಿಂದ ೨೮೫ ಸೂತ್ರಗಳಲ್ಲಿ ವಿವರಿಸಿದ್ದಾನೆ. ಧಾತು ಪ್ರಕರಣ ಬರೀ ಪಟ್ಟಿಯಾಗಿದ್ದರೆ ಅಪಭ್ರಂಶ ಪ್ರಕರಣದಲ್ಲಿ ಸಂಸ್ಕೃತ ಭಾಷಾ ಶಬ್ದಗಳು ಹೇಗೆ ಕನ್ನಡದಲ್ಲಿ ನಿಲ್ಲುತ್ತವೆ ಎಂಬುದನ್ನು ಹೇಳುವಾಗ ಆನುಷಂಗಿಕವಾಗಿ ಧ್ವನಿಮಾ ಬದಲಾವಣೆಯನ್ನು ಸೂಚಿಸಲಾಗಿದೆ.

ಕೇಶಿರಾಜನು ಪರಿಗಣಿಸಿರುವುದು ತನ್ನ ಹಾಗೂ ತನಗಿಂತ ಹಿಂದಿನ ಕಾಲದ ಶಿಷ್ಟ ಕನ್ನಡ ಭಾಷೆಯನ್ನು. ದರ್ಪಣ ರಚಿತವಾಗಿಯೇ ಏಳು ಶತಮಾನ ಗತಿಸಿವೆ. ಕಾರಣ ಅವನು ಹೇಳಿರುವ ಎಲ್ಲ ನಿಯಮಗಳು ಇಂದಿನ ಕನ್ನಡಕ್ಕೆ ಅದರಲ್ಲೂ ಆಡುನುಡಿಗಂತೂ ಸಂಪೂರ್ಣವಾಗಿ ಅನ್ವಯಿಸವುದಿಲ್ಲ.

ಒಟ್ಟನಲ್ಲಿ ಕೇಶಿರಾಜನು ಕನ್ನಡದಲ್ಲಿಯ ಸಹಜ ಸಂಧಿ ಪ್ರಕ್ರಿಯೆಗಿಂತ ಸಂಸ್ಕೃತ ಕನ್ನಡದ ಸಂಧಿ ಪ್ರಕ್ರಿಯೆಗೆ (ವರಸಂಸ್ಕೃತ ಕರ್ಣಾಟಕಮೆರಡಱೊಳಂ) ಹೆಚ್ಚಿನ ಗಮನವನ್ನು ಕೇಂದ್ರೀಕರಿಸಿದ್ದಾನೆ. ವ್ಯವಸ್ಥಿತವಾದ ರೀತಿಯಲ್ಲಿ ಅವನ್ನೆಲ್ಲ ಒಂದೆಡೆಗೆ ವಿವರಿಸಿಲ್ಲ. ಆದರೆ ಅವನು ನೀಡಿರುವ ವಿಪುಲ ಉದಾಹರಣೆಗಳು ಗ್ರಂಥಸ್ಥ ಭಾಷೆಯಲ್ಲಿದ್ದ ಅವನ ಪರಿಣತಿ ಹಾಗೂ ಕೆಲವೆಡೆ ಅವನು ತೋರಿರುವ ಸೂಕ್ಷ್ಮ ನಿರೀಕ್ಷಣಾ ಚಾಕಚಕ್ಯತಾಬುದ್ಧಿ ಮೆಚ್ಚುವಂತಹವು.

## 6.2 ಪ್ರಾತಿಪಾದಿಕ ಲಿಂಗ(Stem) :

**6.2.0** ಆಕೃತಿಮಾಗಳು ಭಾಷೆಯಲ್ಲಿ ಬಳಕೆಗೊಳ್ಳುವಾಗ ಪ್ರತ್ಯಯಗಳನ್ನು ಸೇರಿಸಿಕೊಳ್ಳುತ್ತವೆ. ಪ್ರತ್ಯಯಗಳನ್ನು ಪಡೆಯುವಾಗ ಅವು ಪ್ರಾತಿಪದಿಕಗಳಾಗಿ

ಪರಿವರ್ತಿತವಾಗುತ್ತವೆ. ಯಾವ ರೂಪವು ಪ್ರಾತಿಪದಿಕವಾಗದೆ ಪ್ರತ್ಯಯವನ್ನು ಹಚ್ಚಿಕೊಳ್ಳಲಾರದು. ಆದುದರಿಂದ ಯಾವ ರೂಪವು ಪ್ರತ್ಯಯಗಳನ್ನು ಹಚ್ಚಿಕೊಳ್ಳಲು ಸಮರ್ಥವಾಗಿರುತ್ತದೆಯೋ ಅದು ಪ್ರಾತಿಪದಿಕವೆನಿಸುತ್ತದೆ. ಇದನ್ನೇ ಆಧುನಿಕರು Stem ಎಂದು ಕರೆದಿದ್ದಾರೆ. ಒಂದು ಶಬ್ದದಲ್ಲಿ ಹತ್ತಿಕೊಂಡಿರುವ ಪ್ರತ್ಯಯಗಳನ್ನು ಬೇರ್ಪಡಿಸಿದಾಗ ಉಳಿಯುವ ರೂಪವೇ ಪ್ರಾತಿಪದಿಕ. ಪ್ರತ್ಯಯಗಳು ಇಲ್ಲದ ಭಾಷೆಯಲ್ಲಿ ಪ್ರಾತಿಪದಿಕಕ್ಕೆ ಮಹತ್ವವಿಲ್ಲ. ಉದಾಹರಣೆಗೆ ಚೀನಿ ಭಾಷೆಯಲ್ಲಿ ಪ್ರಾದಿಪದಿಕಗಳಿಲ್ಲ. ಪ್ರತ್ಯಯವನ್ನು ಉಪಯೋಗಿಸುವ ಭಾಷೆಗಳಲ್ಲೂ ಕೂಡ ಎಲ್ಲ ರೂಪಗಳಿಗೂ ಪ್ರತ್ಯಯ ಹತ್ತುವುದಿಲ್ಲ. ಉದಾಹರಣೆಗೆ ಕನ್ನಡದಲ್ಲಿ ಬೇಕು, ಬೇಡ, ಯಾವಾಗ, ಏಕೆ, ಆದರೆ ಮತ್ತು ಹೀಗೆ, ಹೇಗೆ ಇತ್ಯಾದಿ ಹಲವಾರು ಅವ್ಯಯಗಳಿಗೆ ಪ್ರತ್ಯಯಗಳನ್ನು ಹಚ್ಚಲಾಗದು. ಒಂದು ಶಬ್ದದಲ್ಲಿ ಸಾಮಾನ್ಯವಾಗಿ ಒಂದು ಪ್ರಾತಿಪದಿಕವಿರುತ್ತದೆ. ಕನ್ನಡದಲ್ಲಿ ಒಂದು ಪ್ರತ್ಯಯವನ್ನು ಒಂದು ಪ್ರಾತಿಪದಿಕಕ್ಕೆ ಮಾತ್ರ ಹಚ್ಚಲು ಸಾಧ್ಯ. ಪ್ರಾತಿಪದಿಕಗಳು ಎಲ್ಲ ಭಾಷೆಗಳಲ್ಲಿ ಒಂದೇ ಬಗೆಯಾಗಿರಬಹುದು ಅಥವಾ ಇರಲಿಕ್ಕಿಲ್ಲ. ಇಂಗ್ಲೀಷದಲ್ಲಿ boy ಎಂಬ ಪ್ರಾತಿಪದಿಕಕ್ಕೆ—'S' ಎಂಬ ಬಹುವಚನ ಪ್ರತ್ಯಯ ಹತ್ತುತ್ತದೆ. ಆದರೆ ಕನ್ನಡದಲ್ಲಿ ಹುಡುಗ ಎನ್ನುವ ಪ್ರಾತಿಪದಿಕಕ್ಕೆ ಹುಡುಗರು, ಹುಡುಗನಿಗೆ, ಹುಡುಗನಿಂದ, ಹುಡುಗನಲ್ಲಿ, ಹುಡುಗನ- ಹೀಗೆ ಅನೇಕ ಪ್ರತ್ಯಯಗಳು ಹತ್ತುತ್ತವೆ. ಪ್ರಾತಿಪದಿಕಗಳನ್ನು ಸಹಜ ಹಾಗೂ ತದ್ಧಿತ ಎಂದು ಎರಡು ಬಗೆಯಾಗಿ ವಿಂಗಡಿಸುತ್ತಾರೆ. ಹುಡುಗ, ನಾಯಿ, ಕಲ್ಲು, ಹೋಗು ಇತ್ಯಾದಿ ಸಹಜ ಪ್ರಾತಿಪದಿಕಗಳಾದರೆ ಕುಂಟಲಗಿತ್ತಿ, ಬಡಿಗತನ, ಸೂಳೆಗಾರಿಕೆ, ಲಂಗಗಳು ಇತ್ಯಾದಿ ತದ್ಧಿತ ಪ್ರಾತಿಪದಿಕವೆನಿಸುತ್ತವೆ. ತದ್ಧಿತ ಪ್ರಾತಿಪದಿಕದಲ್ಲಿ ಒಂದಕ್ಕಿಂತ ಹೆಚ್ಚು ಆಕೃತಿಮಾಗಳಿರುತ್ತವೆ.

ಯಾವುದೇ ರೂಪವು ನೇರವಾಗಿ ಪ್ರತ್ಯಯಗಳನ್ನು ಹಚ್ಚಿಕೊಂಡರೆ ಅದು ತಾನಿರುವ ರೂಪದಲ್ಲೇ ಪ್ರಾತಿಪದಿಕವೆನಿಸುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ಅದು ಬೇರೆ ಪ್ರತ್ಯಯಗಳನ್ನು ಹಚ್ಚಿಕೊಳ್ಳುವುದಕ್ಕಾಗಿಯೇ ಸ್ವಲ್ಪ ರೂಪ ಬದಲಾವಣೆಗೊಳಗಾಗುತ್ತದೆ. ಅದುವೆ ಪ್ರಾತಿಪದಿಕದ ರೂಪವೆನಿಸುತ್ತದೆ. ಕನ್ನಡದ ಕೆಲವು ಉದಾಹರಣೆಗಳಿಂದ ಇದನ್ನು ಸ್ಪಷ್ಟಪಡಿಸಬಹುದು-

ಹುಡುಗಿ ಎಂಬ ರೂಪವು- "ಗೆ" ಪ್ರತ್ಯಯ ಹಚ್ಚಿಕೊಂಡಾಗ "ಹುಡುಗಿ" ರೂಪವೇ ಪ್ರಾತಿಪದಿಕವಾಗುತ್ತದೆ. ಅದೇ ರೂಪವು "ಅನ್ನು" ಪ್ರತ್ಯಯ ಹಚ್ಚಿ

ಕೊಂಡಾಗ ಹುಡುಗಿ+ಯ್+ಅನ್ನು> ಹುಡುಗಿಯ್+ಅನ್ನು, ಇಲ್ಲಿ 'ಹುಡುಗಿಯ್' ಎಂಬುದು ಪ್ರಾತಿಪದಕವಾಗುತ್ತದೆ. ಇನ್ನೂ ಕೆಲವನ್ನು ಗಮನಿಸಬಹುದು—

ಗಿಡಕ್ಕೆ→ಗಿಡ ಪ್ರಾತಿಪದಿಕ
ಗಿಡದಲ್ಲಿ→ಗಿಡದ್ ಪ್ರಾತಿಪದಿಕ
ತನುವಿಂದ→ತನುವ್ ಪ್ರಾತಿಪದಿಕ

**6.2.1 ಪ್ರಾತಿಪದಿಕ ರಚಕಗಳು :** ಪ್ರಾತಿಪದಿಕಗಳಾಗಿ ಪರಿವರ್ತಿತವಾಗುವಾಗ ಆಯಾ ರೂಪಗಳು ಪಡೆಯುವ-ದ್,-ವ್-,-ಯ್-, ಇಂತಹ ರಿಕ್ತಾಕೃತಿಮಾಗಳು ಪ್ರಾತಿಪದಿಕವನ್ನು ರಚಿಸುವಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಇವುಗಳನ್ನು ಪ್ರಾತಿಪದಿಕ ರಚಕಗಳು (Stem formatives)ಎಂದು ಕರೆಯುತ್ತಾರೆ. ಒಂದು ಭಾಷೆಯಲ್ಲಿರುವ ಇಂತಹ ರಚಕಗಳನ್ನು ಪಟ್ಟಿಮಾಡಿ ಹೇಳಬಹುದು. ಕನ್ನಡದಲ್ಲಿ ಏಳು ಪ್ರಾತಿಪದಿಕ ರಚಕಗಳು ಮುಖ್ಯವಾಗಿ ನಾಮ ಪ್ರಕೃತಿಗಳಿಗೆ ಪ್ರಯೋಗಿಸಲ್ಪಡುತ್ತವೆ.

೧. —ದ್—ಮರದಲ್ಲಿ, ಬನದಲ್ಲಿ, ಕಂಬದಲ್ಲಿ, ಪುಸ್ತಕದಲ್ಲಿ
೨. -ಯ್-ಗುಡಿಯಲ್ಲಿ, ಹಾಳಿಯಲ್ಲಿ, ಬೀಳಿಯಲ್ಲಿ, ತುದಿಯಲ್ಲಿ
೩. -ವ್-ಗಿಡವನ್ನು, ಕಂಬವನ್ನು, ಬನವನ್ನು
೪. -ಅರ್-ಐದರಲ್ಲಿ, ನಾಲ್ಕರಿಂದ, ಅಷ್ಟರಲ್ಲಿ, ಕಿರಿದರಲ್ಲಿ, ಅದರಲ್ಲಿ, ಇದರಿಂದ
೫. -ನ್-ಕಾಮನಲ್ಲಿ, ರಾಮನಲ್ಲಿ, ಹಿರಿಯನಲ್ಲಿ
೬. -ಇನ್-ಕಣ್ಣಿನಲ್ಲಿ, ಕಲ್ಲಿನಲ್ಲಿ, ಮಣ್ಣಿನಲ್ಲಿ, ಬಿಸಿಲಿನಲ್ಲಿ
೭. -ವಿನ್-ಕರುವಿನ, ಹಸುವಿನಲ್ಲಿ, ತರುವಿನಿಂದ.

ಕ್ರಿಯಾಪ್ರಕೃತಿಗಳು ಭೂತಕಾಲಸೂಚಕ ಪ್ರತ್ಯಯಗಳನ್ನು ಹಚ್ಚಿಕೊಂಡು ಪ್ರಾತಿಪದಿಕಗಳಾಗುತ್ತವೆ (ನೋಡಿದನು, ಓಡಿದನು, ಭೋಗಿಸಿದನು). -ದ್- (ಇಳಿದಲ್ಲಿ, ಬಯ್ದಲ್ಲಿ, ಬಿದ್ದಲ್ಲಿ ಗೆದ್ದಲ್ಲಿ), -ನ್ದ್- (ನೊಂದಲ್ಲಿ, ಕೊಂದಲ್ಲಿ, ತಂದಲ್ಲಿ). -ತ್- (ಹೊತ್ತಲ್ಲಿ, ಸೀತಲ್ಲಿ, ಸೋತಲ್ಲಿ), -ಕ್- (ಹೊಕ್ಕಲ್ಲಿ, ಮಿಕ್ಕಲ್ಲಿ) ಎಂಬ ಭೂತಕಾಲಸೂಚಕ ಪ್ರತ್ಯಯಗಳು ಪ್ರಾತಿಪದಿಕ ರಚಕದಂತೆ ಇಲ್ಲಿ ಕಾರ್ಯ ನಿರ್ವಹಿಸುತ್ತವೆ.

6.2.2 'ಪ್ರಾತಿಪದಿಕ' ಎಂಬ ಪಾರಿಭಾಷಿಕ ಪದವು ಪಾಣಿನಿ ಪ್ರಯೋಗಿಸಿದ್ದು.[೧] ಇದನ್ನೇ ಕಾತಂತ್ರ ವ್ಯಾಕರಣದಲ್ಲಿ 'ಲಿಂಗ' ಎಂದು ಪ್ರಯೋಗಿಸಲಾಗಿದೆ. ಕೇಶಿರಾಜನೂ 'ಲಿಂಗ' ಪದವನ್ನೇ ಇಟ್ಟುಕೊಂಡಿದ್ದಾನೆ. 'ಲಿಂಗ' ಪದವನ್ನು ಪು, ಸ್ತ್ರೀ, ನಪುಂಸಕ ಲಿಂಗದ ಅರ್ಥದಲ್ಲಿ ಇಲ್ಲಿ ಪರಿಗಣಿಸಬಾರದು. ಕೇಶಿರಾಜನು ಶಬ್ದಮಣಿದರ್ಪಣದ ನಾಮ ಪ್ರಕರಣದ ಮೊದಲನೆಯ ಸೂತ್ರದಲ್ಲಿಯೇ

'ಕ್ರಿಯೆಯುಂ ನುಡಿಯದುದು ವಿಭ
ಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ
ನಿಯತ ಚತುರ್ಭೇದಮುದಾ
ರಯೆ ಕೃತ್ತದ್ಧಿತಸಮಾಸನಾಮಸ್ಥಿತಿಯಿಂ (ಸೂ. ೮೨)

ಎಂದು ಹೇಳಿರುವ 'ಲಿಂಗ' ವ್ಯಾಖ್ಯೆ (Stem) ಪ್ರಾತಿಪದಿಕಕ್ಕೆ ಹೋಲುತ್ತದೆ. ಅವನು ನೀಡಿರುವ ಉದಾಹರಣೆಗಳೂ ಇದನ್ನು ಪುಷ್ಟೀಕರಿಸುತ್ತವೆ. ಆದರೆ ವ್ಯಾಖ್ಯೆ ಅಷ್ಟು ಖಚಿತವಾಗಿಲ್ಲ. ಘಮ್ಮನೆ, ಟಣ್ಣನೆ, ಭೋಂಕನೆ, ತೊಟ್ಟನೆ ಇಂಥ ರೂಪಗಳಿಗೆ ಅರ್ಥವಿದೆ, ವಿಭಕ್ತಿ ಪ್ರತ್ಯಯಗಳಿಲ್ಲ. ಕ್ರಿಯಾರ್ಥವನ್ನು ಹೊಂದಿಲ್ಲ, ಆದರೆ ಇವು ಪ್ರತ್ಯಯಗಳನ್ನು ಹಚ್ಚಿಕೊಳ್ಳುವುದಿಲ್ಲವಾದ್ದರಿಂದ ಅವು ಪ್ರಾತಿಪದಿಕ ಎನಿಸಲಾರವು. ಪ್ರಾತಿಪದಿಕಗಳನ್ನೇ ನಾಮಪದವೆಂದು ನೈಡಾ ಎಂಬ ವಿದ್ವಾಂಸರು ಹೇಳುತ್ತಾರೆ. (The forms which can take suffixes are nouns). ಆದರೆ ಇದೂ ಪರಿಪೂರ್ಣವೆನಿಸುವುದಿಲ್ಲ. ಕೇಶಿರಾಜನು ಪ್ರಾಯಶಃ ನಾಮ ಪ್ರಕೃತಿಯನ್ನೇ ಲಿಂಗನೆಂದು ಕರೆದಿರಬಹುದಾದರೂ, ಪ್ರಾತಿಪದಿಕಕ್ಕೇ ಅವನ ವಿಚಾರಗಳು ಕೇಂದ್ರೀಕೃತವಾಗಿವೆ. ವರ್ಣನಾತ್ಮಕ ವ್ಯಾಕರಣಕಾರನ ದೃಷ್ಟಿಕೋನ ಇಲ್ಲಿ ಸ್ಪಷ್ಟವಾಗಿರುವುದು ಸರಿ ಆದರೆ ಇದು ಮೂಲತಃ ಅವನದೇ ಸ್ವಂತ ವಿಚಾರವೇನೂ ಅಲ್ಲ. "ಧಾತು ವಿಭಕ್ತಿ ವರ್ಜಿತಮ್ ಅರ್ಥೋಪೇತಂ ಲಿಂಗಂ" ಎಂಬ ಕಾತಂತ್ರ ವ್ಯಾಕರಣದ ಹೇಳಿಕೆಯನ್ನೇ ಅವನು ಅನುಸರಿಸಿದ್ದಾನೆ. ಅದನ್ನು ಕನ್ನಡಕ್ಕೆ ಅನ್ವಯಿಸಿದ್ದಾನೆ. ಸಂಸ್ಕೃತದಿಂದ ಕನ್ನಡಕ್ಕೆ ಬಂದ ರೂಪಗಳು ಕನ್ನಡ ದಲ್ಲಿ 'ಲಿಂಗ'ಗಳಾಗುವ ಬಗೆಗೆ ಅವನು ಹೇಳಿರುವ ವಿಚಾರಗಳು ತುಂಬ ಮಹತ್ವದ ವಾಗಿವೆ. ಲಿಂಗದ ವ್ಯಾಖ್ಯೆ 'ಅರ್ಥವುಳ್ಳ ಯಾವುದೇ ರೂಪ' ಎಂದಾಗುವುದರಿಂದ ಅದು ಸ್ಥೂಲವಾಗಿದೆ.

---

೧. ಅರ್ಥವದಧಾತುರಪ್ರತ್ಯಯಃ : ಪ್ರಾತಿಪದಿಕಂ (೧-೨-೪೫)

6.2.3 ಲಿಂಗವನ್ನು ಕೃತ್, ತದ್ಧಿತ, ಸಮಾಸ, ನಾಮ ಎಂದು ನಾಲ್ಕು ಪ್ರಕಾರಗಳಾಗಿ ವಿಂಗಡಿಸುತ್ತಾನೆ.

ಕೃಲ್ಲಿಂಗ—ಮಾಡಿದ, ಬೇಡಿದ, ಕೂಡಿದ
ತದ್ಧಿತಲಿಂಗ—ಮಡಿವಳ್ಳ, ಸಜ್ಜೆವಳ್ಳ, ಅಡಪವಳ್ಳ
ಸಮಾಸಲಿಂಗ– ತೆಂಗಾಳಿ, ಇಮ್ಮಾವು, ಈರಯ್ದು, ಮರಗಿಡಬಳ್ಳಿ, ಪುರವನ
ನಾಮಲಿಂಗ—ಅರಸ, ಇಂದ್ರ, ವರಾಹ, ಮೂಷಕ.

ಕೇಶಿರಾಜನ ಈ ನಾಲ್ಕು ಬಗೆಯನ್ನು ಆಧುನಿಕರು ತದ್ಧಿತ ಹಾಗೂ ಪ್ರತಿಪಾದಿಕ ಈ ಎರಡೂ ಬಗೆಗಳಲ್ಲಿ ಸೇರಿಸಬಹುದು. ಸಮಾಸಲಿಂಗವನ್ನು ತದ್ಧಿತದಲ್ಲೂ ಕೃಲ್ಲಿಂಗ ಹಾಗೂ ನಾಮಲಿಂಗಗಳನ್ನು ಸಹಜ ಪ್ರಾತಿಪದಿಕಗಳಲ್ಲೂ ಸೇರಿಸಬಹುದು.

ಭೂತಕಾಲ ಹಾಗೂ ಭವಿಷತ್ಕಾಲ ಕ್ರಿಯೆಗಳು ತಮ್ಮ ತಮ್ಮ ಅಂತರ್ಗತದಲ್ಲಿರುವ ಆಗಮಗಳನ್ನು ಇಟ್ಟು ವಿಭಕ್ತಿಯನ್ನು ಮಾತ್ರ ಕಳೆದರೆ ಅವು ಕೃಲ್ಲಿಂಗಗಳಾಗುತ್ತವೆಂದು (ಸೂ. ೮೩) ಹೇಳಿದ್ದು ಯಥಾವತ್ತಾಗಿದೆ. ಉಳಿದಾವ ಕ್ರಿಯೆಯೂ ಕೃಲ್ಲಿಂಗವಾಗುವುದಿಲ್ಲವೆಂದಿರುವುದು ತೀರ ಸ್ಪಷ್ಟವಾಗಿದೆ. 'ಇಸು ಪ್ರತ್ಯಯ ಹಚ್ಚಿಕೊಂಡ ಕೆಲವು ಪ್ರೇರಣಾರ್ಥಕ ರೂಪಗಳು ಕೃಲ್ಲಿಂಗವಾಗುವುದು ಸಹಜವಾಗಿದೆ (ಆದರೆ ಕೇಶಿರಾಜ, ಕೇವಲ ಸಂಸ್ಕೃತದ ಭಾವವಾಚಕಗಳಿಗೆ ಸೀಮಿತಗೊಳಿಸಿರುವುದೇಕೋ ಅರ್ಥವಾಗುವುದಿಲ್ಲ).

ಕನ್ನಡದಲ್ಲಿ ಲಿಂಗವನ್ನು ರಚಿಸಿಕೊಳ್ಳುವ ಬಗೆಯನ್ನು ವಿವರಿಸುತ್ತ ಕೇಶಿರಾಜನು ಬಹಳಷ್ಟು ಸೂತ್ರಗಳಲ್ಲಿ ಸಂಸ್ಕೃತ ರೂಪಗಳು ಕನ್ನಡ ಪ್ರಾತಿಪದಿಕಗಳಾಗಿ ಹೇಗೆ ಪರಿವರ್ತನೆಗೊಳ್ಳುತ್ತವೆ ಎಂಬುದನ್ನೇ ಒಳಪಡಿಸಿದ್ದಾನೆ. ಸಂಸ್ಕೃತದ ಏಕ, ದ್ವಿ, ತ್ರಿ, ಚತುರ್........ಇತ್ಯಾದಿ ಕನ್ನಡದಲ್ಲಿ ಸಹಜವಾಗಿ ಲಿಂಗಗಳಾಗವು. ಸಮಾಸ, ಪ್ರತ್ಯಯಾಂತವಾದಾಗ ಲಿಂಗಗಳಾಗುತ್ತವೆ. (ಉದಾ : ಏಕಾಂಗ, ದ್ವಿಮುಖ, ತ್ರಿಲೋಕ' ಚತುರ್ವೇದ). ಅವ್ಯಯ ಮುಂತಾದವುಗಳೂ ಸಮಾಸವಾಗದೆ ಲಿಂಗಗಳಾಗವು (ಅಂತರ್, ಬಹಿರ್, ಪುನರ್ — ಇವು ಅಂತರ್ಮುಖ, ಬಹಿರಂಗ, ಪುನರ್ಮಿಲನ ಆದಾಗ ಲಿಂಗಗಳಾಗುತ್ತವೆ). ಸಂಸ್ಕೃತ ವ್ಯಂಜನಾಂತ ನಾಮಪ್ರಕೃತಿಗಳು ಕನ್ನಡದಲ್ಲಿ ಸ್ವರಾಂತಗಳಾಗಿ ಲಿಂಗಗಳಾಗುತ್ತವೆ. (ರಾಜನ್–ರಾಜನು, ವಾಕ್-ವಾಕ್ಕು). ಕೆಲವಡೆ ಆ ವ್ಯಂಜನ ಲೋಪವಾಗುತ್ತವೆ. ರಾಜನ್–ರಾಜ, ಸೀಮನ್–ಸೀಮೆ). ಸಂಸ್ಕೃತದ ವಿಸರ್ಗ ಕನ್ನಡದಲ್ಲಿ ಲೋಪವಾಗುತ್ತವೆ. (ವಿದ್ವಾಂಸಃ – ವಿದ್ವಾಂಸ, ಶ್ರೀಮಂತಃ – ಶ್ರೀಮಂತ). ಹೀಗೆ

ಸಂಸ್ಕೃತದ ರೂಪಗಳು ಕನ್ನಡದಲ್ಲಿ ಲಿಂಗವಾಗುವ ರೀತಿಯನ್ನೇ ಕೇಶಿರಾಜ ಸುದೀರ್ಘವಾಗಿ ಹೇಳಿದ್ದಾನೆ. ಆದರೆ ಅಪಭ್ರಂಶ ಪ್ರಕರಣದಲ್ಲೇ ಇವನ್ನು ಸೇರಿಸಿದ್ದರೆ ಸಾಕಾಗಿತ್ತು. ಒಮ್ಮೆ ಅವು ಕನ್ನಡದವು ಆದುವೆಂದರೆ ಉಳಿದೆಲ್ಲ ಕಡೆಗೂ ಅವು ಇತರ ಪದಗಳಂತೆಯೇ ಬಳಕೆಗೊಳ್ಳುತ್ತವೆ. ಅವುಗಳಿಗಾಗಿಯೇ ಹೊಸ ನಿಯಮ ವಿವರಣೆ ಬೇಕಾಗಿಲ್ಲ. ಕೇಶಿರಾಜನ ದೃಷ್ಟಿ ಪ್ರಾಯಶಃ ಕನ್ನಡದ ವಾಕ್ಯರಚನಾ ಮಟ್ಟದಲ್ಲಿ ಲಿಂಗಗಳು ಬಳಕೆಗೊಳ್ಳುವ ಕಡೆಗೆ ಹೆಚ್ಚಾಗಿದ್ದಿರಬೇಕು.

## 6.3 ಕನ್ನಡದಲ್ಲಿ ಲಿಂಗ ವ್ಯವಸ್ಥೆ :

6.3.0 ಶಬ್ದಾರ್ಥ ಇಲ್ಲವೆ ವ್ಯಾಕರಣವನ್ನು ಹೊಂದಿಕೊಂಡು ಲಿಂಗವಿವಕ್ಷೆ ಕನ್ನಡದಲ್ಲಿ ಬರುತ್ತದೆ. ನಾಮಪದವು ಗಂಡು, ಹೆಣ್ಣು, ನಪುಂಸಕ ಇವುಗಳಲ್ಲಿ (ವಿಶಿಷ್ಟ ಸನ್ನಿವೇಶಗಳನ್ನು ಹೊರತುಪಡಿಸಿ) ಸಹಜವಾಗಿ ಯಾವ ಅರ್ಥವನ್ನು ಹೊಂದಿರುತ್ತದೆಯೋ ಆ ಲಿಂಗವನ್ನು ಸೂಚಿಸಬಹುದಾಗಿದೆ. ಸಾಮಾನ್ಯವಾಗಿ ಮಾನವ, ಮಾನವೇತರ ಎಂಬ ವಿಂಗಡಣೆ ಇದ್ದು ಮಾನವ ವರ್ಗದಲ್ಲಿ ಮಾತ್ರ ಪುಲ್ಲಿಂಗ, ಸ್ತ್ರೀಲಿಂಗ ಭೇದವನ್ನು ಸ್ಪಷ್ಟವಾಗಿ ಮಾಡಲಾಗುತ್ತದೆ. (ಪುಲ್ಲಿಂಗ- ಅವನು, ಮಗನು, ಹುಡುಗ, ಸ್ತ್ರೀಲಿಂಗ— ಅವಳು, ಮಗಳು, ಹುಡುಗಿ) ಮಾನವೇತರ ವರ್ಗದಲ್ಲಿ ಸಜೀವ, ನಿರ್ಜೀವ ಭೇದವಿದ್ದು ಸಜೀವದಲ್ಲಿ ಪು, ಸ್ತ್ರೀ ಲಿಂಗಗಳನ್ನು ಪ್ರತ್ಯೇಕವಾಗಿ ಸೂಚಿಸುವ ಸಾಮಾನ್ಯ ಪ್ರತ್ಯಯ ಅಥವಾ ಇನ್ನಾವುದೇ ವ್ಯವಸ್ಥೆ ಇಲ್ಲ (ಉದಾ : ಗುಬ್ಬಿ, ಮೀನು, ಹಾವು, ನಾಯಿ, ಹದ್ದು). ಎದ್ದು ತೋರುವ ಕೆಲವು ನಾಮಗಳಿಗೆ ಲಿಂಗದ ಅರ್ಥ ನೀಡುವ ಪ್ರತ್ಯೇಕ ಪದಗಳೇ ಇವೆ. ಉದಾ : ಬಾವುಗ (ಗಂಡುಬೆಕ್ಕು), ಹೋರಿ, ಕೋಣ, ಹೋತ, ಸಲಗ, ಪಿಡಿ, ಹುಂಜ, ಕೋಳಿ, ಇನ್ನುಳಿದವುಗಳಿಗೆ ಲಿಂಗಾರ್ಥವನ್ನು ಸೂಚಿಸಬೇಕಾದ ಸಂದರ್ಭವಿದ್ದರೆ ಅವುಗಳ ಪೂರ್ವ ಸ್ಥಾನದಲ್ಲಿ ಗಂಡು, ಹೆಣ್ಣು, ಎಂಬ ರೂಪಗಳನ್ನು ಜೋಡಿಸಿ ಬಳಸಲಾಗುತ್ತದೆ. (ಉದಾ : ಗಂಡು ನಾಯಿ, ಹೆಣ್ಣು ನರಿ, ಗಂಡು ಗುಬ್ಬಿ, ಹೆಣ್ಣು ಪಾರಿವಾಳ). ಇನ್ನು ಕೆಲವು ರೂಪಗಳನ್ನು ಪ್ರತ್ಯೇಕವಾಗಿ ಎತ್ತಿಕೊಂಡು ಲಿಂಗನಿರ್ಣಯ ಮಾಡಲು ಆಗುವುದಿಲ್ಲವಾದುದರಿಂದ ವಾಕ್ಯಮಟ್ಟದಲ್ಲಿ ಮಾತ್ರ ಅಂಥವುಗಳ ಲಿಂಗವನ್ನು ಗುರುತಿಸಬಹುದು. (ಉದಾ : ವಸಂತ ಬರುತ್ತಾನೆ, ವಸಂತ ಬರುತ್ತಾಳೆ, ವಸಂತ ಬರುತ್ತದೆ). ಸಂಸ್ಕೃತಜನ್ಯ ಆರ್ಯ ಭಾಷೆಗಳಲ್ಲಿ ನಾಮಪದದ ಲಿಂಗವನ್ನು ಅದರ ಹಿಂದಿನ ನಾಮಪದವೂ ಅನುಸರಿಸುತ್ತದೆಂಬುದನ್ನು ಅದಕ್ಕನುಗುಣವಾಗಿ ರೂಪ ಬದಲಾಯಿಸಿಕೊಳ್ಳುವ ನಾಮಪದವೇ

ಸಾರಿ ಹೇಳುತ್ತದೆ. (ಉದಾ : ಉಸಕೀ ಬೇಟಿ, ಉಸಕಾ ಬೇಟಾ) ಸಂಸ್ಕೃತದಲ್ಲಿ ಸುಂದರಮ್ ಪುಸ್ತಕಂ, ಸುಂದರೀ ವನಿತಾ, ಸುಂದರಃ ಪುರುಷಃ, ಕನ್ನಡದಲ್ಲಿ ಈ ರೀತಿ ಪದಗಳ ರೂಪಾನುಗುಣವಾದ ಲಿಂಗವ್ಯವಸ್ಥೆ ಇಲ್ಲ. ಆದರೆ ಕ್ರಿಯಾ ಪ್ರಾತಿ ಪದಿಕಗಳಿಗೆ ಅನ್ವಯುವಾಗುವ ಆಖ್ಯಾತ ಪ್ರತ್ಯಯಗಳ ರೂಪಗಳು ಲಿಂಗವನ್ನು ಸೂಚಿಸುತ್ತವೆ. "ಬರುತ್ತಾನೆ." "ಬರುತ್ತಾಳೆ" ಬರುತ್ತದೆ. ಇವುಗಳಲ್ಲಿ "ಆನೆ" "ಆಳೆ" "ಅದೆ" ಪ್ರತ್ಯಯಗಳು ಲಿಂಗವನ್ನು ವಚನವನ್ನು ಸೂಚಿಸುತ್ತವೆ. ಮಾನವ ವರ್ಗಕ್ಕೆ ಸಂಬಂಧಿಸಿದ ನಾಮಗಳು ಅದರಲ್ಲೂ ಜಾತ್ಯೇಕವಚನದ ನಾಮಗಳು ಲಿಂಗವನ್ನು ಸಂದರ್ಭಕ್ಕನುಗುಣವಾಗಿಯೇ ಅರ್ಥೈಸಬೇಕಾಗುತ್ತದೆ. ಕೆಲವೆಡೆ ಗಳಲ್ಲಂತೂ ಸಂದರ್ಭವೂ ಲಿಂಗವನ್ನು ನಿರ್ಣಯಿಸುವಲ್ಲಿ ಸಹಾಯಕಾರಿಯಾಗದು. ಸೂರ್ಯ ಮುಳುಗುತ್ತಾನೆ, ನಕ್ಷತ್ರ ಮಿನುಗುತ್ತದೆ. ಇಂಥ ಉದಾಹರಣೆಗಳಲ್ಲಿ ಸೂರ್ಯ ಪುಲ್ಲಿಂಗ ನಕ್ಷತ್ರ ನಪುಂಸಕ ಲಿಂಗವಾಗುತ್ತದೆ. ಇಂಥಲ್ಲಿ ಸೂರ್ಯ-ಚಂದ್ರ, ವಾಯು, ಅಗ್ನಿ ಮುಂತಾದ ಕೆಲವು ಭಾರತೀಯ ಸಂಸ್ಕೃತಿಯಲ್ಲಿ ದೇವತೆ ಗಳೆಂಬ ಕಲ್ಪನೆ ಇರುವುದರಿಂದ ಈ ಬಗೆಯ ರೂಢಿ ಬೆಳೆದಿದೆ.

ಕನ್ನಡದಲ್ಲಿ ಸ್ತ್ರೀಲಿಂಗಕ್ಕೆ ಅಳ್ (ಉ), ಇ ಹಾಗೂ ಎ ಮೂರು ಲಿಂಗಸೂಚಕ ಪ್ರತ್ಯಯಗಳಾಗಿ ಬಳಕೆಗೊಳ್ಳುತ್ತವೆ. (ಕರಿಯಳು, ಹುಡುಗಿ, ಕಮಲೆ ಇತ್ಯಾದಿ) ಇದೇ ರೀತಿ ಅಕ್ಕ, ಗಿತ್ತಿ, ಅಮ್ಮ, ಅವ್ವ, ತಾಯಿ ಮುಂತಾದ ರೂಪಗಳು ನಾಮ ಗಳಿಗೆ ಅನ್ವಯುವಾಗಿ ಸ್ತ್ರೀಲಿಂಗ ರೂಪಗಳನ್ನು ರೂಪಿಸುತ್ತವೆ. (ಉದಾ : ಸಾವಕ್ಕ. ಕರಿಯಮ್ಮ, ಕಮಲಮ್ಮ, ಗೋದೂತಾಯಿ), ಪುಲ್ಲಿಂಗಕ್ಕೆ ಅನ್ (ಉ), ಅ ಎಂಬವು ಅನ್ವಯುವಾಗುತ್ತವೆ. (ಕರಿಯನು, ಕರಿಯ) ಇದಲ್ಲದೆ ಅಣ್ಣ, ಅಪ್ಪ, ಅಜ್ಜ, ಮುಂತಾದವು ಪುಲ್ಲಿಂಗ ನಾಮಗಳನ್ನು ರೂಪಿಸುತ್ತವೆ. (ಉದಾ : ಮಲ್ಲಣ್ಣ, ಮಲ್ಲಪ್ಪ, ಮಲ್ಲಜ್ಜ).

ದ್ರಾವಿಡ ಭಾಷೆಗಳಲ್ಲಿ ಲಿಂಗಭೇದವನ್ನು ಮುಖ್ಯವಾಗಿ ಬುದ್ಧಿ ಶಕ್ತಿಯನ್ನು ಗಮನಿಸಿ ಮಾಡಲಾಗುತ್ತದೆ. ಕೂಸು ಅಳುತ್ತದೆ. ಆ ಪೆಣ್ ಬಂದುದು ಈ ಕನ್ನಿಕೆ ಪೊಲ್ಲದು- ಇಂತಹ ಉದಾಹಣೆಗಳಲ್ಲಿ ಬುದ್ಧಿ ಶಕ್ತಿಯನ್ನೇ ಆಧರಿಸಿ ನಪುಂಸಕ ಲಿಂಗ ಮಾಡಲಾಗಿರುವುದು ಸ್ಪಷ್ಟವಾಗಿದೆ. ಪುರುಷರು ಮಹತ್ ಲಿಂಗದಲ್ಲಿಯೂ ಉಳಿದವುವೆಲ್ಲ ಅಮಹತ್ ಲಿಂಗದಲ್ಲಿಯೂ ಮೂಲತಃ ಪರಿಗಣಿತವಾಗುತ್ತಿದವು. ವಾಸ್ತವವಾಗಿ ಸ್ತ್ರೀ ಲಿಂಗಕ್ಕೆ ಪ್ರತ್ಯೇಕ ಸ್ಥಾನ ಮೊದಲು ಇರಲಿಲ್ಲ.೧

೧. ವಿವರಗಳಿಗೆ ನೋಡಿ- ಸನದತ್ತಿಮಠ ಸಂಗಮೇಶ- ದ್ರಾವಿಡ ಭಾಷಾವ್ಯಾಸಂಗ ೭.೧.೪ ದ್ವಿತೀಯ ಮುದ್ರಣ.

ಕನ್ನಡ ಲಿಂಗವ್ಯವಸ್ಥೆಯನ್ನು ಈ ರೀತಿ ರೇಖಿಸಬಹುದು.




6.3.* ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪ
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸವುಳಿದ ಲಿಂಗಮೊಳವಾಗಿರ್ದುಂ (೧೦೭)

ಎಂದು ಕೇಶಿರಾಜನು ನಿರ್ಧಾರಕ್ಕೆ ಬರುವಮುನ್ನ ಸಂಸ್ಕೃತದಲ್ಲಿಯಂತೆ ಕನ್ನಡದಲ್ಲೂ ಲಿಂಗಮೊಂಬತ್ತುತೆರಂ ಎಂದು ವಿವರಿಸಲು ಹೆಣಗಿದನು. ಒಂಬತ್ತು ತೆರನಾದ ಲಿಂಗ (ಸೂ. ೯೦) ಗಳಿಗೆ ನೀಡಿರುವ ಉದಾಹರಣೆಗಳಲ್ಲಿ ಮೊದಲು ಮೂರು (ಪು, ಸ್ತ್ರೀ, ನಪುಂಸಕ) ಲಿಂಗಗಳ ಉದಾಹರಣೆಗಳು ಮಾತ್ರ ಸರಿಯಾಗಿವೆ. ಉಳಿದವು ಸಂದರ್ಭಕ್ಕನುಗುಣವಾಗಿ ಹಾಗೂ ಮುಂಬರುವ ಪದವನ್ನು ನೋಡಿ

ಗುರುತಿಸಿಕೊಳ್ಳಬೇಕಾದಂಥವು. ಅಂದರೆ ವಾಕ್ಯಮಟ್ಟದಲ್ಲಿ ಮಾತ್ರ ಲಿಂಗವನ್ನು ಗುರುತಿಸಲು ಸಾಧ್ಯವಾಗಿರುವಂಥವುಗಳು. ಲಿಂಗಸೂಚಕ ಪ್ರತ್ಯಯಗಳು ಎಲ್ಲ ಪದಗಳಲ್ಲಿ ಅನ್ವಯವಾಗಿಯೇತೀರುತ್ತವೆನ್ನಲೂ ಬಾರದು. ಆದ್ದರಿಂದ ವಾಕ್ಯ ಮಟ್ಟದಲ್ಲೂ ಲಿಂಗವಿವರಣೆ ತಪ್ಪಾಗಲಾರದು. ಪು, ಸ್ತ್ರೀ ಲಿಂಗಕ್ಕೆ, ತ್ರಿಲಿಂಗಕ್ಕೆ, ವಾಚ್ಯಲಿಂಗಕ್ಕೆ, ಅವ್ಯಯಲಿಂಗಕ್ಕೆ ಅವನು ಕೊಟ್ಟಿರುವ ಉದಾಹರಣೆಗಳಲ್ಲಿ ಹುರುಳಿಲ್ಲವೆನಿಸುತ್ತದೆ. ಅನ್, ಅಳ್ ಹಾಗೂ ಅದು ಯಾವ ನಾಮಗಳಿಗೆ ಅನ್ವಯವಾಗುತ್ತವೆಯೋ ಆ ನಾಮಗಳು ಅದಕ್ಕನುಗುಣವಾಗಿ ಲಿಂಗಾರ್ಥವನ್ನು ಪಡೆಯುತ್ತವೆ. (ಬಂದನ್, ಬಂದಳ್, ಬಂದುದು, ನೇರಿದನ್, ನೇರಿತಿದು ಇತ್ಯಾದಿ) ವಾಚ್ಯಲಿಂಗ ಇಲ್ಲವೆ ವಿಶೇಷ್ಯಾಧೀನಲಿಂಗವೆಂದು ಅವನು ವಿಶೇಷವಾಗಿ ಹೇಳಿರುವುದರಲ್ಲಿ ಅರ್ಥವಿಲ್ಲ. ಸಹಜವಾಗಿ ಲಿಂಗಾರ್ಥವನ್ನು ತನ್ನಲ್ಲೇ ಒಳಗೊಂಡು ಬಳಕೆಗೊಳ್ಳುವಂಥ ನಾಮಗಳು ಇಲ್ಲಿ ಪರಿಶೀಲನೆಗೆ ಒಳಪಡುತ್ತವೆ. ಸಹಜವಾಗಿ ಲಿಂಗಾರ್ಥವನ್ನು ಹೊಂದಿರುವ ನಾಮಗಳಿಗೇ ಇಲ್ಲಿ ಹೆಚ್ಚು ಮಹತ್ವ. ಅವುಗಳ ಹಿಂದೆ ಬರುವ ಯಾವ ನಾಮವೇ ಇರಲಿ ಅದು ತನ್ನ ಮುಂದೆ ಇರುವ ನಾಮದ ಲಿಂಗಾರ್ಥವನ್ನು ನೀಡುತ್ತದೆ. ವಾಸ್ತವವಾಗಿ ವಿಶೇಷ್ಯಾಧೀನ, ಅವ್ಯಯ ಮುಂತಾದವು ಲಿಂಗಗಳೆನಿಸುವುದೇ ಇಲ್ಲ. 'ಅಂತೆಯೆ ಅವ್ಯಯಲಿಂಗಗಳನ್ನು ಅವನು ವ್ಯವಹರಿಸಿದ ರೀತಿ ಅವನಿಗೆ ಶ್ಲಾಘನೆಯನ್ನು ತರುವುದಿಲ್ಲ' ಎಂದು ಕುಶಾಲಪ್ಪಗೌಡ ಅವರು ಅಭಿಪ್ರಾಯ ಪಟ್ಟಿದ್ದಾರೆ. ೧ ಆದರೂ ಅವರು ಕೇಶಿರಾಜನ ಲಿಂಗವಿಂಗಡನೆಯಲ್ಲಿರುವ ಕೆಲವು ಅಂಶಗಳು ಒಪ್ಪಿತವಾಗುತ್ತವೆಂಬುದನ್ನೂ ಸಮರ್ಥಿಸಿದ್ದಾರೆ. ಕೇಶಿರಾಜನಿಗೆ ಈ ಬಗೆಗೆ ಸಂದೇಹವಿದ್ದುದರಿಂದಲೇ ಒಂಬತ್ತು ಬಗೆಯ ಲಿಂಗಗಳೆಂದು ಹೇಳಿದರೂ ಕೊನೆಗೆ ಪು, ಸ್ತ್ರೀ ನಪುಂಸಕಲಿಂಗವೆಂದು ಮೂರೇ ಬಗೆ ಎಂಬ ನಿರ್ಧಾರಕ್ಕೆ ಬಂದಿದ್ದಾನೆ. ಸಂಸ್ಕೃತದ ಕೆಲವು ಶಬ್ದಗಳು ಕನ್ನಡದಲ್ಲಿ ನಪುಂಸಕವಾಗಿಯೇ ಬಳಕೆಗೊಳ್ಳುತ್ತವೆಯೆಂದು ಮತ್ತೊಂದೆಡೆಗೆ (ಸೂ. ೧೬೬) ಹೇಳಿದ್ದಾನೆ. ಸಂಸ್ಕೃತದಲ್ಲಿ ವೃಕ್ಷ, ವಾಯು ಪುಲ್ಲಿಂಗಗಳು, ಪ್ರೀತಿ, ನದಿ, ಧರೆ–ಸ್ತ್ರೀಲಿಂಗಗಳು, ಕುಲ–ನಪುಂಸಕಲಿಂಗ, ಇವೆಲ್ಲ ಕನ್ನಡಕ್ಕೆ ಬಂದಾಗ ನಪುಂಸಕಲಿಂಗವೇ ಆಗುತ್ತವೆ. ಅಂದರೆ ಕನ್ನಡದಲ್ಲಿ ಲಿಂಗವಿವೇಚನೆ ಶಬ್ದಗಳ ಅರ್ಥವನ್ನು ಅನುಸರಿತ್ತದೆ ಎಂಬುದನ್ನು ಅವನು ಹೇಳಿದಂತಾಗಿದೆ.

---

೧. ಲಿಂಗವೊಂಬತ್ತುತೆರಂ ?–ಶ್ರೀಕಂಠತೀರ್ಥ (೧೯೭೬) ಪು. ೫೮೬.

## 6.4. ವಚನ

ನಾಮ ಹಾಗೂ ಕ್ರಿಯಾ ಪ್ರಾತಿಪದಿಕಗಳಿಗೆ, ಬಹುವಚನ ಪ್ರತ್ಯಯಗಳು ಅನ್ವಯವಾಗುತ್ತವೆ. ಹಳಗನ್ನಡ ನಡುಗನ್ನಡ ಹಾಗೂ ಹೊಸಗನ್ನಡ ಅವಸ್ಥೆಗಳಲ್ಲಿ ಇರುವ ಬಹುವಚನ ಪ್ರತ್ಯಯಗಳು ಒಟ್ಟು ಇಷ್ಟು—ಅರ್, ವಿರ್, ದಿರ್, ಇರ್, ಅವು/ವು, ಕಳ್/ಗಳ್, ಅರ್ಕಳ್, ವಿರ್ಕಳ್, ಅಂದಿರು.

—ಕಳ್ ಪ್ರತ್ಯಯವು ಕೆಲವು ವಿಶಿಷ್ಟ ಶಬ್ದಗಳಿಗೆ (ಆಕೃತಿಬದ್ಧ ರೂಪಗಳಿಗೆ) ಅನ್ವಯವಾಗುತ್ತದೆ. ಉದಾ : ಮಕ್ಕಳ್, ಕೊಟ್ಟಳ್, ನಾಟ್ಕಳ್.

—ಗಳ್ ಸಾಮಾನ್ಯವಾಗಿ ಮಾನವೇತರ ಹಾಗೂ ಕೆಲವು ವಿಶಿಷ್ಟ ಮಾನವ ನಾಮಗಳಿಗೆ ಅನ್ವಯವಾಗುತ್ತದೆ. ಗಿಡಗಳ್, ಕೋಳಿಗಳ್, ಗುರುಗಳ್, ಅತ್ತಿಗಳ್, ಪಣ್‌ಗಳ್....ಇತ್ಯಾದಿ. —ಗಳ್ ಪ್ರತ್ಯಯದ ಹಿಂದೆ "ಙ್" ಅನುನಾಸಿಕ ಕೆಲಪೆಡೆ ಬಳಕೆಗೊಳ್ಳುತ್ತದೆ. ಉದಾ : ಭಾವಂಗಳ್, ಅಯ್ಯಂಗಳ್, ಮಾವಂಗಳ್.

6.4.3 ಹೊಸಗನ್ನಡದಲ್ಲಿ "—ವಿರ್" ಪ್ರತ್ಯಯ ಬಳಕೆಯಲ್ಲಿಲ್ಲ, "-ಅಂದಿರು" ಎಂಬ ಪ್ರತ್ಯಯ, ಸಂಬಂಧವಾಚಿನಾಮಗಳಿಗೆ ಬಳಕೆಯಾಗುತ್ತಿದೆ. ಅಣ್ಣಂದಿರು, ಹೆಂಡಂದಿರು, ಅಳಿಯಂದಿರು, ಸೊಸೆಯಂದಿರು, ತಮ್ಮಂದಿರು. ಕೇಶಿರಾಜನು ಈ ಪ್ರತ್ಯಯವನ್ನು—ದಿರ್ ಪ್ರತ್ಯಯದಲ್ಲಿ ಸೇರಿಸಿರುವುದೇ ಸರಿಯೆನಿಸುತ್ತದೆ. 'ಗಳ್'ದ ಹಿಂದೆ ಅನುನಾಸಿಕ ಬರುವಂತೆ -ದಿರ್ ದ ಹಿಂದೆಯೂ ಅನುನಾಸಿಕ ಬಂದು -ಅಂದಿರ್ ಆಗಿರಬೇಕು.

ಬಹುವಚನದ ಎಲ್ಲ ಪ್ರತ್ಯಯಗಳನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು :

/ಅರ್/ ಮಹತ್‌ನಾಮಪ್ರಕೃತಿಗಳಿಗೆ (ಸಂಬಂಧವಾಚಿಗಳನ್ನು ಬಿಟ್ಟು)
{ಅರ್} /ವಿರ್/ ವಿಶಿಷ್ಟ ಸಂಬಂಧವಾಚಿ ನಾಮಪ್ರಕೃತಿಗಳಿಗೆ
/ದಿರ್/ ಇತರ ಸಂಬಂಧವಾಚಿ ನಾಮಪ್ರಕೃತಿಗಳಿಗೆ
/ಇರ್/ ವಿಶಿಷ್ಟ ಸ್ತ್ರೀಲಿಂಗ ಸಂಬಂಧವಾಚಿ ನಾಮಪ್ರಕೃತಿಗಳಿಗೆ

ಇರ್> ದಿರ್—ದ್+ಇರ್
ವಿರ್—ವ್+ಇರ್

ಈ ರೀತಿಯಾಗಿ ಬೆಳವಣಿಗೆಯಾಗಿರಬೇಕು. ೧

---

೧. ಇಲ್ಲಿ ದ್, ವ್ inflectional increment ಆಗುತ್ತದೆ.

/ಕಳ್/ ವಿಶಿಷ್ಟ ನಾಮಪ್ರಕೃತಿಗಳಿಗೆ
[–ಗಳ್] /ಗಳ್/ ಅಮಹತ್ ಹಾಗೂ ಕೆಲವು ವಿಶಿಷ್ಟ ನಾಮಪ್ರಕೃತಿಗಳಿಗೆ
/ವು/ ಇತರೆಡೆ (ಕರಿಯುವು, ಬಿಳಿಯುವು ಎಂಬಲ್ಲಿ)

ಹೊಸಗನ್ನಡದಲ್ಲಿ -ವಿರ್, ಡಿರ್, ಅರ್ಕಳ್ ಪ್ರತ್ಯಯಗಳ ಬಳಕೆ ನಿಂತು ಹೋಗಿದೆ. ಉಳಿದ ಪ್ರತ್ಯಯಗಳು ಸ್ವರಾಂತಗೊಂಡು ಬಳಕೆಯಾಗುತ್ತವೆ.

6.4.※ ಏಕದ್ವಿತ್ವಬಹುತ್ವವಂ
ನೇಕದ್ವಿಬಹುತ್ವವಸ್ತುಗಳೊಳಾಚರಿಪರ್
ಸ್ವೀಕಾರಂ ಕನ್ನಡದೊಳ
ಗೇಕಬಹುತ್ವಂ ದ್ವಿವಚನಮುಚಿತದೆ ಬರ್ಕುಂ (೧೦೪)

ಎಂಬುದಾಗಿ ಕೇಶಿರಾಜನೆನು ಸ್ಪಷ್ಟವಾಗಿಯೇ ಹೇಳಿದ್ದರೂ ಕನ್ನಡದಲ್ಲಿ ದ್ವಿವಚನೆ 'ಉಚಿತದೆ ಬರ್ಕುಂ' ಎಂದು ಸೂಚಿಸುವದು ಮಾತ್ರ ಆಕ್ಷೇಪಣೆಗೆ ಎಡೆಮಾಡಿ ಕೊಟ್ಟಿದೆ. ಇಲ್ಲಿಯೂ ಸಂಸ್ಕೃತಾನುಸರಣೆ ಎದ್ದುಕಾಣುತ್ತದೆ. ಕೇಶಿರಾಜನಿಗೂ ಈ ಸಂಶಯವಿದ್ದುದರಿಂದಲೇ ಉಚಿತ ವಚನದ ಪ್ರಸಿದ್ಧಿಯಿಂದ ಮಾತ್ರ ದ್ವಿವಚನವನ್ನು ಅರಿಯಬೇಕು ಎಂದು ಹೇಳುತ್ತಾನೆ. ರಾಮಲಕ್ಷ್ಮಣರ್ ಎನ್ನುವ ಬದಲು ರಾಮಲಕ್ಷ್ಮಣಸೀತೆಯರ್ ಅಂದರೆ ತ್ರಿವಚನವೆಂದು ಹೊಸ ವಚನ ಪ್ರಕಾರವೊಂದನ್ನು ಹೇಳಬಹುದೇ ? 'ಬ್ರಹ್ಮವಿಷ್ಣುಮಹೇಶ್ವರ' ಪ್ರಸಿದ್ಧಿ ಪಡೆದ ಈ ಪದಸಮೂಹವನ್ನು ತ್ರಿವಚನ ಎನ್ನಬಹುದೇ ? ಎಂಬುದಕ್ಕೆ ಉತ್ತರ, ಕನ್ನಡದ ಮಟ್ಟಿಗಂತೂ ಇಲ್ಲವೆಂದೇ ಹೇಳಬೇಕು. 'ಕಣ್ಗಳ್' ಮುಂತಾದ ಉದಾಹರಣೆಗಳಲ್ಲಿ ಎರಡೇ ಕಣ್ಣುಗಳೆಂದೂ ಅರ್ಥ ಮಾಡಲಿಕ್ಕಾಗುವದಿಲ್ಲ, ಈ ಸಭೆಯಲ್ಲಿ ನೆರೆದ ಜನರ ಎಲ್ಲ ಕಣ್ಣುಗಳು ನನ್ನ ಕಡೆಗೆ ನೋಡುತ್ತಿವೆ' ಈ ವಾಕ್ಯದಲ್ಲಿರುವ ಕಣ್ಣುಗಳು— ಬಹುವಚನವನ್ನು ಸೂಚಿಸುವುದಿಲ್ಲವೇ ? ಆದ್ದರಿಂದ ಕನ್ನಡದಲ್ಲಿ ಏಕ ಹಾಗೂ ಬಹು ಎಂಬೆರಡೇ ವಚನಗಳು.

6. 4.1. ※ ಕೇಶಿರಾಜನ ಮೇರೆಗೆ ಸಾಮಾನ್ಯವಾಗಿ ಗಳ್/ ಕಳ್ ಬಹುವಚನ ಪ್ರತ್ಯಯ ಕೇವಲ ಮಾನವೇತರ ನಾಮಗಳಿಗೆ ಅನ್ವಯವಾಗುತ್ತದೆ. ಆದರೆ ಪೆಣ್ಗಳ್, ಅತ್ತೆಗಳ್, ಗುರುಗಳ್ ಕಲಿಗಳ್, ಗಂಡುಗಳ್ ಇಂತಹ ಉದಾಹರಣೆಗಳಲ್ಲಿ ಮಾನವ ವರ್ಗದ ನಾಮಗಳಿಗೂ ಈ ಪ್ರತ್ಯಯ ಅನ್ವಯವಾಗುವುದನ್ನು ನೋಡಿದರೆ ಮೊದಮೊದಲು ಅಮಹತ್ ವರ್ಗದ ನಾಮಗಳಿಗೆ ಮಾತ್ರ ಅನ್ವಯ

ವಾಗುತ್ತಿದ್ದ ಈ ಪ್ರತ್ಯಯ ಬರಬರುತ್ತ ಮಹತ್ ವರ್ಗದ ನಾಮಗಳಿಗೂ ಹತ್ತಲು ಆರಂಭವಾಗಿರಬೇಕು ಎನಿಸುತ್ತದೆ, ಅಕ್ಕಂದಿರ್/ಅಕ್ಕಂಗಳ್, ಅಣ್ಣಂದಿರ್/ಅಣ್ಣಂಗಳ್ ಇತ್ಯಾದಿ ಉದಾಹರಣೆಗಳನ್ನು ಗಮನಿಸಬೇಕು. 'ಕಳ್' ಪ್ರತ್ಯಯವು ಕೆಲವು ನಾಮಗಳಿಗೆ ದ್ವಿತೀಯ ಪ್ರತ್ಯಯವಾಗಿ ಹಳಗನ್ನಡದಲ್ಲಿ ಬಳಕೆಯಲ್ಲಿತ್ತು. (ಬುಧರ್ಕಳ್, ತಾಯ್ವಿರ್ಕಳ್, ಅವರ್ಗಳ್, ಇವರ್ಗಳ್....ಇತ್ಯಾದಿ). ಅರ್+ಕಳ್ ವಿರ್+ಕಳ್ ಎಂಬುದಾಗಿ ಎರಡೆರಡು ಪ್ರತ್ಯಯಗಳು ಕೂಡಿ ಒಂದು ಪ್ರತ್ಯಯವಾಗಿ ರೂಪಿತಗೊಂಡಂತೆ ತೋರುತ್ತದೆ. ಇವು ಹೆಚ್ಚಾಗಿ ಮಾನವ ವರ್ಗದ ನಾಮಗಳಿಗೆ ಅನ್ವಯವಾಗುವುದರಿಂದ ಪ್ರಾಯಶಃ ಗೌರವ ಸೂಚಿಸುವುದಕ್ಕಾಗಿ ಈ ಬಗೆ ಬಳಕೆಗೊಳ್ಳುತ್ತಿರಬಹುದಾಗಿದೆ.

ಕೇಶಿರಾಜನು ಹೇಳಿರುವ ಒಟ್ಟು ಬಹುವಚನ ಪ್ರತ್ಯಯಗಳಿಷ್ಟು— ಅರ್, ವಿರ್, ದಿರ್, ಇರ್, ಅವು/ವು, ಕಳ್/ಗಳ್ (ಅರ್+ಕಳ್, ವಿರ್+ಕಳ್) ಇವುಗಳನ್ನು ಹೀಗೆ ವಿವರಿಸಬಹುದು :

–ಅರ್, –ವಿರ್, –ದಿರ್ ಹಾಗೂ ಇರ್ ಈ ನಾಲ್ಕು ಪ್ರತ್ಯಯಗಳನ್ನು ಮಾನವ ವರ್ಗದ ನಾಮಗಳಿಗೆ ಅನ್ವಯವಾಗುವ ಗುಂಪಿನಲ್ಲಿಯೂ—ಅವು/ವು ಕಳ್/ಗಳ್ ಇವೆರಡು ಪ್ರತ್ಯಯಗಳನ್ನು ಮಾನವೇತರ ವರ್ಗದ ನಾಮಗಳಿಗೆ ಅನ್ವಯವಾಗುವ ಗುಂಪಿನಲ್ಲಿಯೂ ಸೇರಿಸಬಹುದು. –ಅರ್ ಪ್ರತ್ಯಯವು ಸಂಬಂಧವಾಚಿನಾಮಗಳನ್ನು ಬಿಟ್ಟು ಇತರ ಯಾವುದೇ ಮಹತ್ ವರ್ಗದ ನಾಮಗಳಿಗೆ ಅನ್ವಯವಾಗುತ್ತದೆ ಉದಾ : ನಲ್ಲರ್, ದೇವರ್, ಪುರುಷರ್, ಸ್ತ್ರೀಯರ್ ಇತ್ಯಾದಿ. –ವಿರ್ ಪ್ರತ್ಯಯವು ಸಂಬಂಧವಾಚಿನಾಮಗಳಿಗೆ ಅನ್ವಯವಾಗುತ್ತದೆ. –ತಾಯ್ವಿರ್, ಸೊಸೆವಿರ್, ಅತ್ತೆವಿರ್ ಇತ್ಯಾದಿ ಕೆಲವು ವಿಶಿಷ್ಟ ನಾಮಗಳಿಗೆ ಮಾತ್ರ ಇದು ಸೀಮಿತವಾಗಿದೆ. ಇತರ ಸಂಬಂಧವಾಚಿನಾಮಗಳಿಗೆ –ದಿರ್/ಅಂದಿರ್ ಹಾಗೂ ಇರ್ ಇವುಗಳಲ್ಲೊಂದು ಅನ್ವಯವಾಗುತ್ತದೆ. –ಇರ್ ಪ್ರತ್ಯಯವು ವಿಶಿಷ್ಟ ಸ್ತ್ರೀಲಿಂಗ ಸಂಬಂಧಸೂಚಿನಾಮಗಳಿಗೆ ಅನ್ವಯವಾಗುತ್ತದೆ. ಉದಾ : ತೊಳ್ತಿರ್. ಪೆಂಡಿರ್, ದಿರ್/ಅಂದಿರ್ ಪ್ರತ್ಯಯಗಳಿಗೆ ಉದಾಹರಣೆಗಳು : ಇವಳ್ದಿರ್, ಅಣ್ಣಂದಿರ್, ಅಕ್ಕಂದಿರ್. ಮಾವಂದಿರ್.

**6. 5 ವಚನ ಪಲ್ಲಟ :**

6. 5. 0 ಬಹುವಚನದ ಅರ್ಥವನ್ನು ಸೂಚಿಸುವಲ್ಲಿ ಏಕವಚನವನ್ನು ಕೆಲವೆಡೆ ಬಳಸುವುದನ್ನು ಕೇಶಿರಾಜನು "ಜಾತಿಯೊಳೇಕವಚನಮಿರ್ದುಂ ಬಹುವಚನಮಂ

ಪೇೞ್ವುದು, ಜಾತಿಯಲ್ಲದಲ್ಲಿಯುಂ ಬಹುವಚನಕ್ಕೆ ಏಕವಚನಂ ವಿಶೇಷಣವಾಗಿ ಪೊಕ್ಕು ಬಹುವಚನಮಂ ಪೇೞ್ವುದು" (ಸೂ. ೧೪೮) ಎಂದು ವಿವರಿಸುವುದರಿಂದ ಆನೆ ನೂಂಕಿದವು ಎನ್ನುವುದಕ್ಕಿಂತ ಆನೆಗಳ್ ನೂಂಕಿದವು, ಕುದುರೆ ಯೇಱಿದುವು ಎನ್ನುವುದಕ್ಕಿಂತ ಕುದುರೆಗಳೇಱಿದುವು ಎನ್ನುವುದು ಹೆಚ್ಚು ಉಚಿತವೆಂದು ಭಾವಿಸಿದ್ದಾನೆ. ಹಾಗೆಯೇ ಜಾತಿಯಲ್ಲದಲ್ಲಿಯೂ-ಮನಂ ಸಂಚಲ ಮಾದುವು ಎನ್ನುವುದಕ್ಕಿಂತ ಮನಂಗಳ್ ಸಂಚಲಂಗಳಾದವು ಹೆಚ್ಚು ಸಾಧು ಎನ್ನುತ್ತಾನೆ. ಎರಡನೆಯದಾಗಿ (ಸೂ. ೧೪೯) ಇದಕ್ಕೆ ತದ್ವಿರುದ್ಧವಾದ-ಇಂತು ಟಾನೆ, ನಡೆದುದು ಹಂಸೆ, ಪಾಡಿದುದು ತುಂಬಿ ಇಂತಹ ಉದಾಹರಣೆಗಳಲ್ಲಿ ಆನೆ, ಹಂಸೆ, ತುಂಬಿ ಏಕವಚನದಲ್ಲಿರುವುದೇ ಉಚಿತ ಎಂದು ಅಭಿಪ್ರಾಯಿಸಿದ್ದಾನೆ. ಮತ್ತೊಂಡೆಡೆ (ಸೂ. ೧೫೦) ಸಂಖ್ಯೇಯ, ಸಂಖ್ಯೆ, ಭಾವ ಇವುಗಳಲ್ಲಿ ಬಹುವಚನವೇ ಉಚಿತವೆನ್ನುತ್ತಾನೆ— ಮೂರು ಲೋಕ, ಪತ್ತು ದೆಸೆ; ನಾಲ್ಕು ಯುಗ ಇವುಗಳಿಗಿಂತ ಮೂರು ಲೋಕಂಗಳ್, ಪತ್ತು ದೆಸೆಗಳ್, ನಾಲ್ಕು ಯುಗಂಗಳ್ ಎಂಬುದಾಗಿಯೂ ಒಂದುನಾಲ್ಕು, ಎರಡಯ್ದು, ಇವುಗಳಿಗಿಂತ ಒಂದುನಾಲ್ಕುಗಳ್, ಎರಡಯ್ದುಗಳ್ ಎಂಬುದಾಗಿಯೂ ಕಣ್ಗಳ ಕೂರ್ಪು, ಪೂಗಳ ಬೆಳ್ಪು ಇವುಗಳಿಗಿಂತ ಕಣ್ಗಳ ಕೂರ್ಪುಗಳ್, ಪೂಗಳ ಬೆಳ್ಪುಗಳ್ ಎಂಬುದಾಗಿ ಬಳಸುವುದೇ ಹೆಚ್ಚು ಯೋಗ್ಯವೆಂದು ಅವನ ಅಭಿಪ್ರಾಯ. ಆದರೆ ಇದಕ್ಕೆ ವಿರುದ್ಧವಾಗಿ ವಿಶೇಷಣ ಬಹುವಚನವಿದ್ದರೂ ವಿಶೇಷ್ಯ ಮಾತ್ರ ಏಕವಚನವಾಗಿರಬೇಕು ಎಂದು ಹೇಳಿ ನೇರಿದವು ಬೆರಲ್‌ಗಳ್, ಒಟ್ಟಿದುವು ಮೊಲೆಗಳ್ ಎನ್ನುವುದಕ್ಕಿಂತ ನೇರಿದುವು ಬೆರಲ್, ಒಟ್ಟಿದುವು ಮೊಲೆ ಎನ್ನುವುದೇ ಯೋಗ್ಯವೆನ್ನುತ್ತಾನೆ.

6.5.1 ಕೇಶಿರಾಜನು ರೂಢಿಯ ಬಗೆಯನ್ನು, ಕಾವ್ಯ ಪ್ರಯೋಗಗಳನ್ನು ಗಮನಿಸಿ ಅವುಗಳನ್ನು ವಿವರಿಸುತ್ತ ಸಾಗಿದ್ದಾನಷ್ಟೇ. ಈ ವಿಷಯದಲ್ಲಿ ನಾವು ಗಮನಿಸಬೇಕಾದುದು ಕನ್ನಡ ಭಾಷೆಯ ರಚನೆಯ ವೈಶಿಷ್ಟ್ಯವನ್ನು, ಮೊದಲನೆಯದಾಗಿ ಕನ್ನಡದಲ್ಲಿ ಸಹಜವಾಗಿ ಬಹುವಚನ ಅರ್ಥವನ್ನೊಳಗೊಂಡ ಕೆಲವು ರೂಪಗಳೂ ಇವೆ. ಉದಾ : ಹಾಲು, ಮಂದಿ, ರಾಶಿ....ಇತ್ಯಾದಿ. (ಹಾಗೆಯ ಏಕವಚನವನ್ನೇ ಸಹಜವಾಗಿ ಉಳ್ಳ ರೂಪಗಳೂ ಇವೆ. ಉದಾ : ಮಳೆ, ನೆಲ, ನೀರು.... ಇತ್ಯಾದಿ.) ಸಹಜವಾಗಿ ಬಹುವಚನ ಅರ್ಥವನ್ನು ಹೊಂದಿರುವ ಶಬ್ದಗಳು ವಾಕ್ಯದಲ್ಲಿ ಬಳಕೆಗೊಂಡಾಗ ಬಹುವಚನ ಪ್ರತ್ಯಯಗಳನ್ನು ಹೆಚ್ಚಿಕೊಳ್ಳುವದಿಲ್ಲ ಕೆಲವು ಸಲ ಏಕವಚನದಲ್ಲೂ ಅವುಗಳನ್ನು ಬಳಸಬಹುದು.

ಉದಾ : ಹಾಲು ಕೆಟ್ಟವೆ, ಮಂದಿ ಹೋಗುತ್ತಾರೆ, ರಾಶಿ ಬಿದ್ದಿವೆ, ಜ್ವರ ಬಂದಿವೆ,
ಹಾಲು ಕೆಟ್ಟಿತು, ಮಂದಿ ಬಂತು, ರಾಶಿ ಬಿತ್ತು, ಜ್ವರ ಬಂದಿದೆ.

ಎರಡನೆಯದಾಗಿ ಆನೆ ನೂಂಕಿದವು ಇಂತಹ ಉದಾಹರಣೆಗಳಲ್ಲಿ 'ಗಳು' ಬಹುವಚನ ಪ್ರತ್ಯಯು ಶೂನ್ಯಸ್ಥಿತಿಯಲ್ಲಿದೆ. (ಆದ್ದರಿಂದ ಶೂನ್ಯ ಆಕೃತಿಮಾ ф ವನ್ನು ಅಲ್ಲಿ ನಾವು ಕಲ್ಪಿಸಬೇಕಾಗುತ್ತದೆ. ಅಲ್ಲಿ ಬಹುವಚನ ಪ್ರತ್ಯಯು ಕಣ್ಣಿಗೆ ಗೋಚರವಾಗಬೇಕಾಗಿಲ್ಲ. ಪಾಡಿದುದು ತುಂಬಿ ಎಂಬುದರ ಬಗ್ಗೆ ಹೇಳಿದ್ದರಲ್ಲಿ ವಿಶೇಷವೇನೂ ಇಲ್ಲ. ಇಂಥಲ್ಲಿ ತುಂಬಿ, ಆನೆ, ಹಂಸೆ ಜಾತ್ಯಾರ್ಥದಲ್ಲಿ ಬಳಸಲ್ಪಟ್ಟಿಲ್ಲ. ಬಹುವಚನದಲ್ಲಿ ಇವು-ಪಾಡಿದವು ತುಂಬಿ ф, ನಡೆದುವು ಹಂಸೆ ф ಎಂದಿಟ್ಟುಕೊಳ್ಳಬಹುದಾಗಿದೆ. ಸಂಖ್ಯೇಯ, ಸಂಖ್ಯೆ ಭಾವ ಇವುಗಳಲ್ಲಿ ಬಹುವಚನ ಪ್ರತ್ಯಯು ಸೂಚಿಸಲೇಬೇಕೆಂಬ ನಿಯಮವಿಲ್ಲ, ಇಲ್ಲಿಯೂ ಅದು ಐಚ್ಛಿಕವಾಗಿದೆ. ಬಿಟ್ಟರೂ ಅದು ಶೂನ್ಯಸ್ಥಿತಿಯಲ್ಲಿದ್ದೇ ಇರುತ್ತದೆ. ನೇರಿದುವು ಬೆರಲ್ ಮುಂತಾದ ಉದಾಹರಣೆಗಳಲ್ಲಿ ವಿಶೇಷ್ಯ ಏಕವಚನವೇ ಇರಬೇಕೆಂದು ಹೇಳಿರುವುದಕ್ಕೂ ಇದನ್ನೆ (ф ಆಕೃತಿಮಾ) ಅನ್ವಯಿಸಬೇಕು. ಅಲ್ಲಿ ಬಹುವಚನ ಬರಕೂಡದು ಎನ್ನುವುದು ಮಾತ್ರ ದೋಷವಾಗುತ್ತದೆ. ಇಷ್ಟೆಲ್ಲ ಗೊಂದಲಕ್ಕೆ ಕಾರಣವೆಂದರೆ ಕನ್ನಡದಲ್ಲಿ ಕೆಲವು ರೂಪಗಳು ಬಹುವಚನ ಪ್ರತ್ಯಯವನ್ನು (ಅದರಲ್ಲೂ ಅಮಹತ್ ವರ್ಗತ ನಾಮ ಪ್ರಕೃತಿಗಳು) ಐಚ್ಛಿಕವಾಗಿ ಪಡೆಯುತ್ತವೆ ಎಂಬುದರ ಕಲ್ಪನೆ ಇಲ್ಲದಿರುವುದೇ ಆಗಿದೆ. ಪ್ರತ್ಯಯುವು ಪ್ರತ್ಯಕ್ಷವಾಗಿ ಗೋಚರಿಸದಿದ್ದರೂ ಅದು ಶೂನ್ಯ ಸ್ಥಿತಿಯಲ್ಲಿದ್ದು ಬಹುವಚನಾರ್ಥವನ್ನೂ ನೀಡುತ್ತದೆಂಬುದನ್ನು ಮನಗಂಡರೆ ಈ ತೊಡಕು ಸಹಜವಾಗಿ ದೂರಾಗುತ್ತದೆ. ೧೪೯ ನೆಯ ಸೂತ್ರದಲ್ಲಿ 'ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುತ್ವಮಿಲ್ಲ' ಎನ್ನುವ ಕೇಶಿರಾಜನ ಹೇಳಿಕೆ ಅಗತ್ಯವಿಲ್ಲ.

ಬಹುವಚನ ಪ್ರತ್ಯಯುವು ಕ್ರಿಯಾಪದಕ್ಕೆ ಹತ್ತುವಾಗ ಕ್ರಿಯಾಪದದ ಹಿಂದಿನ ಲಿಂಗವನ್ನು ಅನುಸರಿಸಿ ಬರುತ್ತದೆಂದು (ಸೂ. ೧೫೨) ಹೇಳಿದ್ದು ಸರಿಯಾಗಿದೆ. ಉದಾ : ಸೇನೆಯುಮರಸಿಯುಮರಸನುಂ ಬಂದರ್; ಅರಸನು ಅರಸಿಯುಂ ಚತುರಂಗಬಲಮುಂ ಬಂದವು. ಕೇಶಿರಾಜನ ಇನ್ನಿತರ ವಿಚಾರಗಳಿಗೂ ಈ ಮೇಲಿನ ವಿವರಣೆ ಸಾಕಾಗುತ್ತದೆ.[೧]

---

೧. ವಚನ ಪಲ್ಲಟದ ಹೆಚ್ಚಿನ ವಿವರಗಳಿಗೆ ನೋಡಿ : ಮುಗಳಿ ರಂ. ಶ್ರೀ. ವಚನ ಪಲ್ಲಟ ಶ್ರೀಕಂಠತೀರ್ಥ (೧೯೭೬) ಪು. ೫೩೪ ೫೪೪.

## 6.6 ವಿಶೇಷಣಗಳು* :

6.6 ತನ್ನ ಮುಂದಿರುವ ನಾಮಪದವನ್ನು ವರ್ಣಿಸುವ ಹಾಗೂ ಲಿಂಗ ವಚನ ಪ್ರತ್ಯಯಗಳನ್ನು ಹಚ್ಚಿಕೊಳ್ಳದೆ ಬಳಕೆಗೊಳ್ಳುವ ರೂಪನೇ ವಿಶೇಷಣ ವೆನಿಸುತ್ತದೆ. ಆದರೆ ಆ ರೂಪವೇ ನಾಮಪದದಂತೆ ಬೇರೆಡೆ ಬಳಕೆಗೊಳ್ಳುತ್ತಿದ್ದರೆ ಅದನ್ನು ಶುದ್ಧ ವಿಶೇಷಣವೆಂದು ಪರಿಗಣಿಸಲಾಗದು. ಉದಾ : ಬಿರುಗಾಳಿ, ಬಿರುನುಡಿ, ಬಿರುಬಿಸಿಲು ಈ ಶಬ್ದಗಳಲ್ಲಿ 'ಬಿರು' ಶುದ್ಧ ವಿಶೇಷಣವೆನಿಸುತ್ತದೆ. ಅದಕ್ಕೆ ಆದರ ಮುಂದಿರುವ ನಾಮಗಳಿಗೆ ಹತ್ತುವಂತೆ ಯಾವ ಪ್ರತ್ಯಯಗಳೂ ಹತ್ತುವುದಿಲ್ಲ ಹಾಗೂ ಇತರೆಡೆಗೆ ಅದು ನಾಮದಂತೆ ವರ್ತಿಸುವುದೂ ಇಲ್ಲ. 'ಬಿರು' ಇದು ತೀವ್ರ ಎಂಬ ಅರ್ಥವನ್ನು ಕೊಟ್ಟರೂ ಮುಂದಿರುವ ನಾಮಕ್ಕೆ ಆ ವಿಶೇಷಣಾರ್ಥ ಆಧೀನವಾಗಿರುತ್ತದೆ. ತಾನು ನಾಮಪದವನ್ನು ಅನುಸರಿಸುವುದ ರಿಂದ ಅದು ಎಂತಹದು ಎಂಬ ವಿಶೇಷ ಅರ್ಥ, ವರ್ಣನೆಯನ್ನು ಮಾಡುತ್ತದೆ. ಇಂತಹ ಹಲವಾರು ಶುದ್ಧ, ವಿಶೇಷಣಗಳನ್ನು ಕನ್ನಡದಲ್ಲಿ ಪಟ್ಟಿ ಮಾಡಬಹುದು– ಮೆಲ್, ತೆಳ್, ಬಿಸಿ, ಬಿಳಿ, ಕರಿ, ತೋರ್, ನುಣ್, ಕೆನ್, ಪಸಿ, ಅಸಿ, ನಲ್, ಬಲ್, ತಣ್, ಬಿಣ್, ನೇರ್, ಕೂರ್, ಕಡು, ನಿಡು, ಇನ್, ಪೆರ್, ಕಿಡು, ಪೊರ, ಒಳ, ಕಿರಿ, ಕುಡು, ಪಳ, ಪೊಸ, ಎಳ, ದೊಡ್ಡ, ಪುಟ್ಟ, ಚಿಕ್ಕ, ಸಣ್ಣ ಇತ್ಯಾದಿ. ಇವುಗಳ ಅಂತ್ಯದಲ್ಲಿ -'ತು' ಅಥವಾ –'ದು' ಹಚ್ಚುವುದರಿಂದ ನಾಮವಾಗುತ್ತವೆಂಬುದನ್ನು ಕೇಶಿರಾಜ ಹೇಳಿದ್ದಾನೆ (ಸೂ.೮೭). –'ತು' ಕೆಲವೆಡೆ--'ತ್ತು' ಕೂಡ ಆಗುತ್ತದೆನ್ನುತ್ತಾನೆ. ಒಳ್ಳಿತು, ಕೆಳ್ಳಿತು, ಬಟ್ಟಿತು/ ಬಟ್ಟಿತ್ತು, ನೇರಿತು, ಕರಿದು, ಬಿಳಿದು, ಅಸಿದು ಇತ್ಯಾದಿ.

6.6.1 ಮೆಲ್, ತೆಳ್, ಕೆನ್ ಇತ್ಯಾದಿ ತು, ದು ಪ್ರತ್ಯಯರಹಿತವಾದ ರೂಪ ಗಳನ್ನು ಶುದ್ಧ ವಿಶೇಷಣಗಳೆಂದು ಕೆಲವು ವಿದ್ವಾಂಸರು ಒಪ್ಪುವುದಿಲ್ಲ೧ ಇವು

---

* ಸಾಮಾನ್ಯವಾಗಿ ಗುಣವಾಚಕಗಳಿಗೆ ೧. ವಿಶೇಷಣರೂಪ ೨. ನಾಮಕರೂಪ ಎಂಬ ಎರಡು ರೂಪಗಳು. ಆದರೆ ನಾನಿಲ್ಲಿ ಈ ಎಲ್ಲಕ್ಕೂ ವಿಶೇಷಣ ಎಂಬ ಪದವನ್ನು ಮಾತ್ರ ಇಲ್ಲಿ ಬಳಸಿದೆ.

೧. ನೋಡಿ–Madtha William–proceedings of third All India conference of Dravidian linguists–Ed. R. C. Hiremath & J. S. Kulli (1976,146-158)

ಪೂರಕ ಪ್ರಸಾರದಲ್ಲಿವೆ. ಇವು ಬದ್ಧ ರೂಪಗಳು, ಇವನ್ನು ಸ್ವತಂತ್ರನಾಮ ವರ್ಗದಲ್ಲಿ ಸೇರಿಸಲಾಗದು. ಇವು ವಾಕ್ಯದಲ್ಲಿ ಯಾವ ವರ್ಗಕ್ಕೂ ಸೇರುವುದಿಲ್ಲ ವಾದ್ದರಿಂದ ಇವನ್ನು ವಿಶೇಷಣವೆಂದು ಪರಿಗಣಿಸಲಾಗದು ಎಂದು ಅಭಿಪ್ರಾಯ ಪಡಲಾಗಿದೆ.

ಇನ್+ಪು> ಇಂಪು, ತಣ್+ಪು> ತಂಪು, ಕೆನ್+ಪು> ಕೆಂಪು, ಇವುಗಳಲ್ಲಿ ಬದ್ಧರೂಪ ಯಾವುದು? 'ಪು' ಬದ್ಧರೂಪವಾದರೆ ಇನ್, ತಣ್, ಕೆನ್ ಇವೆಲ್ಲ ನಮ್ಮ ಅಭಿಪ್ರಾಯದಂತೆ- ಪ್ರಾಯಶಃ ಮೂಲರೂಪ (root) ಗಳಾಗಿವೆ. ಇಂಪು, ತಂಪು, ಕೆಂಪು ನಾಮಗಳಾಗಿ ಸಿದ್ಧಿಸಿವೆ. ಅವು ಬೇರೆ ನಾಮಗಳ ಹಿಂದೆ ಬಂದಾಗ ವಿಶೇಷಣದ ಕಾರ್ಯ ನಿರ್ವಹಿಸುತ್ತವೆ—ಇಂಪು ಸಂಗೀತ, ತಂಪು ಗಾಳಿ, ಕೆಂಪು ಬಣ್ಣ. ಆದ್ದರಿಂದ ವಿಶೇಷಣಗಳಲ್ಲಿ ಶುದ್ಧ ಹಾಗೂ ಸಾಧಿತ ಎಂದು ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದು.

6.6.2 ಕೆಲವು ನಾಮಗಳು ಅವು ಬಳಕೆಗೊಳ್ಳುವ ಸ್ಥಾನಬಲದಿಂದಲೆ ವಿಶೇಷಣ ಗಳೆನಿಸುತ್ತವೆ. ಉದಾ: ಹುಡುಗಬುದ್ಧಿ, ಮಂಗನಮನಸ್ಸು, ಟೊಪಗಿಮಾಸ್ತರ, ಮೂರು ತಿಂಗಳು, ರೇಡಿಯೋ ಗೀತೆಗಳು ಇತ್ಯಾದಿ. ಅನೇಕ ರೂಪಗಳು ವಿಶೇಷಣಗಳಾಗಿ ಬಳಕೆಗೊಳ್ಳುವ ಸಾಮರ್ಥ್ಯ ಪಡೆದಿವೆ. ಇವನ್ನು ಪಟ್ಟಿ ಮಾಡುವುದು ದುರಸ್ತವೇ ಸರಿ. ಇವು ತಮ್ಮ ಅಂತರಾಳದಲ್ಲಿ ಸಹಜವಾಗಿ ವಿಶೇಷಣ ಅರ್ಥವನ್ನು ಹೊಂದಿರುವುದಿಲ್ಲ. ಆದರೆ ಕೆಲವು ವಿಶೇಷಣಗಳು ಅಂಥ ಅರ್ಥಶಕ್ತಿ ಪಡೆದಿವೆ. ಉದಾ: ಒಳ್ಳೆಯ, ದೊಡ್ಡ, ಹಿರಿ, ಕಿರಿ, ಒಣ, ಭಾರಿ, ಸಣ್ಣ, ಬಿಸಿ ಇತ್ಯಾದಿ.

6.6.3 ಸಾಧಿತ ವಿಶೇಷಣಗಳಲ್ಲಿ ನಾಮವಿಶೇಷಣ, ಕ್ರಿಯಾವಿಶೇಷಣ ಎಂದು ಮುಖ್ಯವಾಗಿ ಎರಡು ಪ್ರಕಾರ ಮಾಡಬಹುದು. ಷಷ್ಠಿಪ್ರತ್ಯಯ 'ಅ' ಹಚ್ಚಿ ವಿಶೇಷಣಗಳನ್ನು ರೂಪಿಸಲಾಗುತ್ತದೆ. ಕ್ರಿಯಾವಿಶೇಷಣಗಳೂ ನಾಮಪದ ಗಳನ್ನು ವರ್ಣಿಸಬಹುದು. ಉದಾ; ಕುಡಿಯುವ ನೀರು, ಆಡಿದ ಆಟ, ಓಡುವ ಎರಳೆ, ಮಲಗುವ ಕೋಣೆ, ಹಾಡುವ ಹುಡುಗಿ. ಆಡುನುಡಿಯಲ್ಲಿ 'ಊ' ಅಥವಾ ಓ ಸ್ವರದ ಬಳಕೆ ಇದೆ- ಆಡೂ/ಆಡೋ ಆಟ, ಬಿಸೋ ಹುಣ್ವಿ.
ಆಗೆ, ಅನ್ನ,ಆನೆ (ಯ)ಪ್ರತ್ಯಯಗಳನ್ನು ಹಚ್ಚಿ ವಿಶೇಷಣ ರೂಪಿಸುವುದೂ ಉಂಟು.

ಉದಾ : ತಣ್ಣನೆ ಗಾಳಿ, ತಣ್ಣನ್ನ ನೀರು, ಬೆಳ್ಳನೆ ಮುಗಿಲು
ಬೆಚ್ಚನ ಮನೆ, ದುಂಡನ್ನ ಚೆಂಡು, ನೂರನೆಯ ಚಿತ್ರ
ಮೂರನೆಯ ಮನೆ, ಸಣ್ಣನ್ನ ಬಾಯಿ, ಬೆಳ್ಳಗೆ, ಕರ್‍ರಗೆ, ತಣ್ಣಗೆ

ಹಳಗನ್ನಡದಲ್ಲಿ ಉಳ್ಳ, ಇಲ್ಲದ, ಅಪ್ಪ (ಅಹ), ಆದ ಪ್ರತ್ಯಯಗಳನ್ನು ಹಚ್ಚಿ ವಿಶೇಷಣಗಳನ್ನು ರೂಪಿಸಲಾಗುತ್ತಿತ್ತು.೧

ವಿಶೇಷಣಗಳನ್ನು ರೂಪಿಸುವಾಗ 'ಆಗು' ಕ್ರಿಯಾಪದದ ಭೂತಕೃದ್ವಾಚಿ 'ಆದ' ಎಂಬ ರೂಪವನ್ನು ಅನ್ವಯಿಸುವ ವಾಡಿಕೆಯೂ ಇದೆ. ಉದಾ—ಕೆಂಪಾದ ಚೆಲುವಾದ, ಬೇಕಾದ, ಹುಳಿಯಾದ.

6.6.3 ಕನ್ನಡ ವಿಶೇಷಣಗಳನ್ನು ಒಟ್ಟು ಹತ್ತು ಪ್ರಕಾರಗಳಲ್ಲಿ ವಿಂಗಡಿಸಬಹುದು.

6.6.3.1 ಗುಣವಾಚಕ ವಿಶೇಷಣಗಳು—ಹಳೆಯ, ಹೊಸ, ಮೆತ್ತಗೆ, ಬಿಸಿ, ಬಿರುಸು, ತುಂಟ, ಹುಂಬ, ಜಾಣ.

6.6.3.2 ವರ್ಣವಾಚಕ ವಿಶೇಷಣಗಳು—ನೀಲಿ, ಕಂದು, ಬಿಳಿ, ಹಳದಿ, ಕರಿ

6.6.3.3 ಪ್ರಮಾಣವಾಚಕ ವಿಶೇಷಣಗಳು—ಬಹಳ, ಸ್ವಲ್ಪ, ನೂರರಷ್ಟು, ಹತ್ತರಷ್ಟು

6.6.3.4 ಸಂಖ್ಯಾವಾಚಕ ವಿಶೇಷಣಗಳು—ಒಂದನೆಯ, ನೂರನೆಯ, ಇಪ್ಪತ್ತೆರಡನೆಯ

6.6.3.5 ರುಚಿ ಸೂಚಕ ವಿಶೇಷಣಗಳು—ಹುಳಿ, ಸಿಹಿ, ಕಹಿ, ಒಗರು

6 6.3.6 ಆಕಾರಸೂಚಕ ವಿಶೇಷಣಗಳು :

ದೊಡ್ಡ, ಸಣ್ಣ, ಚಿಕ್ಕ, ಪುಟ್ಟ, ಗಿಡ್ಡ
ಉದ್ದ, ಅಗಲ, ತೆಳ್ಳನೆಯ, ದಪ್ಪನೆಯ

6.6.3.7 ನಿರ್ದೇಶನಾ ಸೂಚಕ ವಿಶೇಷಣಗಳು–ಆ, ಈ, ಅಲ್ಲಿಯ, ಇಲ್ಲಿಯ

6.6.3.8 ನಾಮವಾಚಕ ವಿಶೇಷಣಗಳು-. **ಹುಡುಗ**ಬುದ್ಧಿ, **ಮನೆಯ** ಬಾಗಿಲು, **ಮಣ್ಣಿನ** ಗೊಂಬೆ, **ಕಡ್ಡಿ**ಪೆಟ್ಟಿಗೆ, **ಧಾರವಾಡ** ಕನ್ನಡ

6.6.3.9. ಅಂತರಸೂಚಕ ವಿಶೇಷಣಗಳು–ದೂರ, ಸನಿಹ, ಮಧ್ಯ

---

೧. ನೋಡಿ–ಕನ್ನಡ ಕೈಪಿಡಿ (೧೯೬೯) ಪು.೩೭೦

6.6.3.10 ಕ್ರಿಯಾವಾಚಕ ವಿಶೇಷಣಗಳು–**ಹರಿದ**ಅಂಗಿ **ಮಾತಾಡುವ**ಗಿಳಿ,
**ಓದುವ** ಹುಡುಗ

6.6.4 ಕೇಶಿರಾಜನು ಹೇಳಿರುವ ಗುಣವಾಚಿಗಳೆಲ್ಲ ನಾಮಗಳೇ ಆಗಿವೆ. ಕೆಲ ನಾದರೂ ವಿಶೇಷಣಗಳು ನಾಮಪ್ರಕೃತಿಗಳಂತೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿ ಕೊಳ್ಳುವುದರಿಂದಲೂ ಕನ್ನಡ ಭಾಷೆಯ ಮೇಲುರಚನೆಯಮಟ್ಟ (surface structure) ದಲ್ಲಿ ಮಾತ್ರ ಅವು ವಿಶೇಷಣಗಳಂತೆ ಬಳಕೆಗೊಳ್ಳುವುದರಿಂದಲೂ ಆಳರಚನೆಯ ಮಟ್ಟದಲ್ಲಿ (deep structure level) ಅವುಗಳನ್ನು ನಾಮವರ್ಗದಲ್ಲಿ ಪ್ರತ್ಯೇಕವಾಗಿ ಪರಿಗಣಿಸುವುದು ಸರಿಯಲ್ಲ೧ ಎಂಬ ಅಭಿಪ್ರಾಯ ಸರಿಯೆನಿಸಿದರೂ ಶುದ್ಧ ವಿಶೇಷಣಗಳಿಗೆ ನಾಮಗಳಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನ ಕಲ್ಪಿಸುವುದು ಸಮಂಜಸವೆನಿಸುತ್ತದೆ. ಕನ್ನಡದಲ್ಲಿ ತರತಮಭಾವವನ್ನು ಹೇಳುವ ವಿಶೇಷಣ ಗಳಿಲ್ಲ. ಆದರೆ ವಿಶೇಷಣಗಳ ಹಿಂದಿನ ನಾಮಕ್ಕೆ ಕಿಂತ/ಗಿಂತ, ಒಳಗೆ, ಅಲ್ಲಿ ಈ ಪ್ರತ್ಯಯಗಳನ್ನು ಅನ್ವಯಿಸುವುದರಿಂದ ತರತಮ ಭಾವವನ್ನು, ತುಲನೆಯನ್ನು ಸೂಚಿಸಲಾಗುತ್ತದೆ—

ಉದಾ : ಅವಳಿಗಿಂತ ಸಣ್ಣವನು. ಆ ಕಾರಿನಕಿಂತ ಹಳೆಯದು, ಅವರಲ್ಲಿ ಹಿರಿಯನು.

6.7. **ಕನ್ನಡ ವಿಭಕ್ತಿ ಪ್ರತ್ಯಯಗಳು :**

6.7.0 ವಿಭಕ್ತಿ ಪ್ರತ್ಯಯಗಳ ಬಹುಮುಖ್ಯ ಕಾರ್ಯವೆಂದರೆ 'ಅವು ಹಚ್ಚಿ ಕೊಂಡಿರುವ ನಾಮಪುಂಜ (Noun phrase) ಹಾಗೂ ವಾಕ್ಯದಲ್ಲಿಯ ಕ್ರಿಯಾಪದ ಇವುಗಳ ನಡುವಿನ ಸಂಬಂಧವನ್ನು ಸಂಕೇತಿಸುವುದಾಗಿದೆ.' ಆದರೆ ಷಷ್ಠೀ ವಿಭಕ್ತಿ ಪ್ರತ್ಯಯ ಮಾತ್ರ ನೇರವಾಗಿ ನಾಮಪದ ಹಾಗೂ ಕ್ರಿಯಾಪದದ ನಡುವಿನ ಸಂಬಂಧ ವನ್ನು ವ್ಯಕ್ತಪಡಿಸದೆಯೆ ಎರಡು ನಾಮಪದಗಳ ನಡುವಿನ ಸಂಬಂಧವನ್ನು ಬಾಹ್ಯ ರಚನಾ ಮಟ್ಟದಲ್ಲಿ ವ್ಯಕ್ತಪಡಿಸುವುದು ಅದರ ವೈಶಿಷ್ಟ್ಯ೨ ನಾಮಪದ ಕ್ರಿಯಾ ಪದಗಳ ನಡುವಿನ ಸಂಬಂಧವನ್ನು ಕಾರಕ ಎನ್ನುತ್ತಾರೆ. ಕಾರಕ ಸಂಬಂಧ ಎಂತಹು

---

೧. Madtha William [1976] Adjective in Kannada-Proceedings of the Third A.I.C. of Dr. Linguists [1976] P. 156.

೨. Subrahmanyam P S.—Dravidian case system P. 201.

ದೆಂಬುವನ್ನು ವಿಭಕ್ತಿಪ್ರತ್ಯಯುಗಳ ಅವತಾರಗಳಿಂದ ತಿಳಿಯಬಹುದು. ಒಂದೊಂದು ವಿಭಕ್ತಿಯೂ ಒಂದೊಂದು ಕಾರಕಾರ್ಥವನ್ನು ಹೊಂದಿರುವುದು. ಅದಕ್ಕನುಗುಣ ವಾಗಿ ಆ ವಿಭಕ್ತಿಯ ಪ್ರತ್ಯಯಗಳು ಬಳಕೆಯಾಗುತ್ತವೆ.

'ರೂಪಾ ಮನೆಗೆ ಬರುತ್ತಾಳೆ.' ಈ ವಾಕ್ಯದಲ್ಲಿ ಬರುವ ಕ್ರಿಯೆ ರೂಪಾಳಿಂದ ನಡೆಯುತ್ತದೆಂಬುದು ಸ್ಪಷ್ಟ. ಇಲ್ಲಿ ಕರ್ತೃಕಾರಕವಿದೆ. ಪ್ರಥಮಾ ಇದನ್ನು ಸಾಮಾನ್ಯವಾಗಿ ಸೂಚಿಸುತ್ತದೆ. (ಕರ್ಮಣಿ ಪ್ರಯೋಗದ ವಾಕ್ಯದಲ್ಲಿ 'ಇಂದ' ಪ್ರತ್ಯಯ ಅದನ್ನು ಸೂಚಿಸುತ್ತದೆ). ಕರ್ಮಕಾರಕನನ್ನು ದ್ವಿತೀಯಾ ವಿಭಕ್ತಿ ಪ್ರತ್ಯಯ ಕಾಣಿಸುತ್ತದೆ. ಕ್ರಿಯೆಯಿಂದ ಯಾವ ವಸ್ತುವಿನ ಮೇಲೆ ಪರಿಣಾಮ ವಾಗಿದೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ. ರಾಜೇಶನು ಹೆಂಡತಿಯನ್ನು ಹೊಡೆಯುತ್ತಾನೆ. ಈ ವಾಕ್ಯದಲ್ಲಿ ಹೊಡೆಯುವ ಕ್ರಿಯೆ ಯಾರ ಮೇಲೆ ನಡೆಯುತ್ತದೆ. ಅಥವಾ ಹೊಡೆಯುವ ಕ್ರಿಯೆಗೆ ಯಾರು ಒಳಗಾಗಿದ್ದಾರೆನ್ನುವು ದನ್ನು 'ಅನ್ನು' ಪ್ರತ್ಯಯ ಸೂಚಿಸುತ್ತದೆ. ತೃತೀಯಾ ವಿಭಕ್ತಿಯು ಕರಣ ಸಂಬಂಧವನ್ನು ಒಳಗೊಂಡಿರುತ್ತದೆ. ಯಾವುದರ ಕಾರಣವಾಗಿ ಕರ್ತೃವು ಕಾರ್ಯ ವನ್ನು ನಿರ್ವಹಿಸುತ್ತಾನೆ ಎಂಬುವನ್ನು ತೃತೀಯಾ ಸೂಚಿಸುವುದು.

ಕರಗಸದಿಂದ ಕಟ್ಟಿಗೆಯನ್ನು ಕೊಯ್ಯುತ್ತಾನೆ. ಇಲ್ಲಿ ಕೊಯ್ಯುವ ಕ್ರಿಯೆ ವಸ್ತುವಿನಿಂದ ನಡೆಯುವುದೆಂಬುದನ್ನು 'ಇಂದ' ಪ್ರತ್ಯಯ ಸೂಚಿಸುತ್ತದೆ. ಸಂಪ್ರದಾನ ಸಂಬಂಧನನ್ನು ತೋರಿಸುವ ಚತುರ್ಥಿಯಲ್ಲಿ ಕ್ರಿಯೆಯ ಕಾರ್ಯವನ್ನು ಸ್ವೀಕರಿಸುವವನ ನಿರ್ದೇಶನ ಹೊಂದಿರುತ್ತದೆ. ಉದಾ : ಶಕುಂತಲೆಯು ತನ್ನ ಸರ್ವಸ್ವವನ್ನೆಲ್ಲ ದುಷ್ಯಂತನಿಗೆ ಅರ್ಪಿಸಿದಳು ಪಂಚಮಿ ವಿಭಕ್ತಿಯಲ್ಲಿ ಅಪಾದಾನ ಸಂಬಂಧವಿರುತ್ತದೆ. ಒಂದು ಸ್ಥಳದಿಂದ ಮತ್ತೊಂದಕ್ಕೆ ಸಾಗುವ ಚಲನೆಯ ಅರ್ಥವನ್ನು ಅದು ನೀಡುತ್ತದೆ. ಉದಾ : ಬಸವರಾಜನ ಮನೆಯಿಂದ ನಾನು ಬಂದೆನು. ಷಷ್ಠಿಯಲ್ಲಿ ನೇರವಾಗಿ ಕ್ರಿಯಾಪದಕ್ಕೆ ಕಾರಕ ಸಂಬಂಧನ್ನು ನಾವು ಪಡೆದು ಉಂಟು ಮಾಡುವುದಿಲ್ಲ, ಆದರೂ ವಿಭಕ್ತಿಯ ಕಾರ್ಯವನ್ನದು ನಿರ್ವಹಿಸು ತ್ತದೆ. ನಮ್ಮ ಅಳಿಯ ಜಾಣನಾಗಿದ್ದಾನೆ. ಅವಳ ಮುಖದ ಬಣ್ಣವೇ ಬದಲಾಗಿದೆ. ಈ ವಾಕ್ಯಗಳಲ್ಲಿ ಮೊದಲನೆಯದರಲ್ಲಿ ಅಳಿಯನು ನಮ್ಮವನು ಎನ್ನುವ ಸಂಬಂಧ, ಎರಡನೆಯದರಲ್ಲಿ ಬಣ್ಣವು ಮುಖದ್ದು ಆ ಮುಖ ಅವಳದು ಎನ್ನುವ ಸಂಬಂಧ ವನ್ನು ಸೂಚಿಸುತ್ತದೆ. ಕ್ರಿಯಾಪದದೊಡನೆ ಕಾರಕ ಸಂಬಂಧ ಅವುಗಳಿಗಿಲ್ಲ. ಆದ್ದರಿಂದ ಬಾಹ್ಯ ರಚನೆಯ ದೃಷ್ಟಿಯಲ್ಲಿ ಷಷ್ಠಿ ವಿಭಕ್ತಿಯೆನಿಸಲಾರದು.

ಷಷ್ಠಿಯನ್ನೊಳಗೊಂಡ ರೂಪವು ತನಗೆ ನೇರವಾಗಿ ಸಂಬಂಧಿಸಿದ ನಾಮದ ಮೂಲಕ ಕ್ರಿಯಾಪದಕ್ಕೆ ಸಂಬಂಧ ಹೊಂದಿರುತ್ತದೆಯೆ ವಿನಃ ನೇರವಾಗಿ ಅಲ್ಲ ಅಂತೆಯೆ ಕೆಲವು ವಿದ್ವಾಂಸರು ಷಷ್ಠಿಗೂ (Deep Structure Level)ನಲ್ಲಿ ಕಾರಕ ಸಂಬಂಧ ಪರೋಕ್ಷವಾಗಿ ಉಂಟು ಎಂದು ಅಭಿಪ್ರಾಯಪಡುತ್ತಾರೆ.೧ ಸಪ್ತಮಿಯಲ್ಲಿ ಅಧಿಕರಣ ಕಾರಕ ಸಂಬಂಧ (ಕ್ರಿಯೆಯ ಕಾಲ, ಸ್ಥಳಗಳನ್ನು) ಸೂಚಿಸಲಾಗುತ್ತದೆ. ಉದಾ : ಅವರ ಮನೆಯಲ್ಲಿ ನಾಯಿ ಇದೆ. ಒಂದು ಗಂಟೆಯಲ್ಲಿ ಬರುತ್ತಾನೆ.

### 6.7.1 ಪ್ರಥಮಾ :

ಹಳಗನ್ನಡದಲ್ಲಿ 'ಮ್', ಹಾಗೂ ಹೊಸಗನ್ನಡದಲ್ಲಿ 'ಉ' ನ್ ಇವುಗಳನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಹೇಳಲಾಗುತ್ತಿದ್ದರೂ ನಾಮಪ್ರಕೃತಿ ತನ್ನ ಸಹಜ ಸ್ಥಿತಿಯಲ್ಲಿ ಇಲ್ಲವೆ ಸ್ವರಾಂತಗೊಂಡು ಬಳಕೆಗೊಳ್ಳುವುದರಿಂದ ಪ್ರಥಮಾ ವಿಭಕ್ತಿಗೆ ಪ್ರತ್ಯೇಕ ಪ್ರತ್ಯಯ ಸೂಚನೆ ಇಲ್ಲವೆನಿಸುತ್ತದೆ.೨ ಉದಾಹರಣೆಗೆ-- ಭಾರತಿ ಓಡುತ್ತ ಬಂದಳು, ರವೀಂದ್ರ ನಡೆಯುತ್ತ ಹೋದನು. ಕಲ್ಲು ಬೀಳುತ್ತವೆ, ರಾಜಕಾರಣಿ ಒದರುತ್ತಾನೆ. ಪ್ರಮೀಳೆ ಸುಂದರಿಯಾಗಿದ್ದಾಳೆ.

---

೧. ಸಂಬಂಧ ಅಥವಾ ಷಷ್ಠೀ ಕಾರಕವಲ್ಲವೆಂದು ಹಿಂದಿನ ವೈಯಾಕರಣರೇ ಈಗಿನವರಂತೆ ಅಭಿಪ್ರಾಯ ವ್ಯಕ್ತ ಮಾಡಿದ್ದಾರಾದರೂ ಬಹಿಸ್ತರದ ರೂಪ, ಅದು ಅಂತಃಸ್ತರದಲ್ಲಿ ಹೊಂದಿರುವ ಭಿನ್ನರೂಪ ಹಾಗೂ ಇವುಗಳ ಮೇಲೆ ನಡೆದಿರುವ ಪರಿವರ್ತನಾಪ್ರಕ್ರಿಯೆ ಇತ್ಯಾದಿಗಳನ್ನು ಗಮನಿಸಿದರೆ ಪರೋಕ್ಷ ರೀತಿಯಿಂದಲಾದರೂ ಷಷ್ಠಿಗೆ (ಸಂಬಂಧಕ್ಕೆ) ಕಾರಕ ಸಂಬಂಧವನ್ನಾರೋಪಿಸಬೇಕೆಂದು ಕಾಣುತ್ತದೆ. ಕೇಶಿರಾಜ ೧೦೩ನೇ ವೃತ್ತಿಯಲ್ಲಿ ಆರೇ ಕಾರಕಗಳನ್ನು ಷಷ್ಠಿಯನ್ನು ಬಿಟ್ಟು ಹೇಳಿದ್ದರೂ ಮತ್ತೆ ವಿಭಕ್ತಿಗಳ ಸಾಲಿನಲ್ಲಿ ಇದಕ್ಕೆ ಸಹಪಂಕ್ತಿಯನ್ನೂ ಹಾಕಿದ್ದಾನೆ.- ಕೆ. ಕುಶಾಲಪ್ಪಗೌಡ, ಷಷ್ಠೀ ವಿಭಕ್ತಿ- ಪ್ರಬುದ್ಧ ಕರ್ನಾಟಕ 6-4-1975.

೨. ಕೈಪಿಡಿಕಾರರು ಈಕುರಿತು ೧೯೩೬ರಷ್ಟು ಹಿಂದಯೇ ಚರ್ಚಿಸಿದ್ದರೂ ಅವರ ಅಭಿಪ್ರಾಯ ಸ್ಪಷ್ಟವಾಗಿಲ್ಲ. ಸ್ವತಂತ್ರ ಅಕಾರಾಂತ ನಾಮಗಳ ಅಂತ್ಯದಲ್ಲಿ ಬಿಂದುವನ್ನು ಸಂಸ್ಕೃತದ ಪ್ರಭಾವದಿಂದ ಪ್ರಾಚೀನ ಕನ್ನಡದಲ್ಲಿ ಬರೆಯುವ ರೂಢಿ ಬೆಳೆದು ಬಂದಿತು, ಫಲಂ. ದಿವಾಕರಂ, ಗಗನಂ ಇವು ಕನ್ನಡಕ್ಕೆ ಬಂದಾಗ ಫಲ. ದಿವಾಕರ. ಗಗನ ಆಗುವುದೊತ್ತಟ್ಟಿಗಿರಲಿ ಆಟಂ, ನೆಲಂ ಎಂಬುದಾಗಿ ಸಂಸ್ಕೃತದ ಮಾದರಿಯಲ್ಲಿ ಬರೆಯುವ ರೂಢಿ ಬೆಳೆದು ಬಂದಂತೆ ತೋರುತ್ತದೆ. ಈ ಸ್ಥಾನದಲ್ಲಿ ಬಿಂದುವಿನ ಉಚ್ಚಾರ ಮ್ ಆಗಿದ್ದು ಆ ಮ್ ವನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ತಪ್ಪಾಗಿ ಭಾವಿಸಲಾಯಿತು.

ಮುಂತಾದ ಅನೇಕ ವಾಕ್ಯಗಳಲ್ಲಿ ಭಾರತಿ, ರವೀಂದ್ರ, ಕಲ್ಲು, ರಾಜಕಾರಣಿ, ಪ್ರಮೀಳೆ ಇವುಗಳಿಗೆ ಯಾವ ವಿಭಕ್ತಿ ಪ್ರತ್ಯಯ ಹತ್ತಿವೆ ? ಆದರೆ ಆ ಕರ್ತೃಗಳ ಕಾರಕ ಸಂಬಂಧ ಸ್ಪಷ್ಟವಿದೆ. ಆದುದರಿಂದ ಇಲ್ಲಿ ಆಳ ರಚನಾಮಟ್ಟ (Deep Structure Level)ದಲ್ಲಿ ವಿಭಕ್ತಿ ಇವೆ. ಆದರೆ ಹೊರಗೆ ಪ್ರತ್ಯಯ ಕಾಣುವುದಿಲ್ಲ. ಪ್ರತ್ಯಯ ಶೂನ್ಯ ಸ್ಥಿತಿಯಲ್ಲಿದ್ದು ಭಾಷೆಯ ರಚನೆಯ ಕಾರ್ಯವನ್ನು ನಿರ್ವಹಿಸುತ್ತದೆ.

### ೬.7.2 ದ್ವಿತೀಯಾ :

ಹೊಸಗನ್ನಡದಲ್ಲಿ— 'ಅನ್ನು' ಪ್ರತ್ಯಯ ದ್ವಿತೀಯಾ ವಿಭಕ್ತಿಯನ್ನು ಸೂಚಿಸುತ್ತದೆ. ಉದಾ : ರಾಮನನ್ನು, ಕೊಡಲಿಯನ್ನು, ಆಕಾಶವನ್ನು ಇತ್ಯಾದಿ. ಮಾನವೇತರ ನಾಮಗಳಿಗೆ ಪ್ರತ್ಯಯವು ಕೆಲವೆಡೆ ಐಚ್ಛಿಕವಾಗಿದೆ. ಆಡು ನುಡಿಯಲ್ಲಿದನ್ನು ಹೆಚ್ಚಾಗಿ ಗುರುತಿಸಬಹುದು. ಉದಾ : ಪುಸ್ತಕ ತಂದೆನು, ತತ್ತಿ ತಿನ್ನಬೇಡ, ಬಸ್ಸು ಓಡಿಸುತ್ತಿದ್ದಾನೆ, ಬ್ಯಾಂಕ ದರೋಡೆ ಮಾಡಿದರು, ಹೆಣ್ಣು ನೋಡಲು ಬರುವವರಿದ್ದಾರೆ. ಇಂತಹ ಪ್ರಯೋಗಗಳಲ್ಲಿ ದ್ವಿತೀಯಾ ವಿಭಕ್ತಿ ಶೂನ್ಯ ಸ್ಥಿತಿಯಲ್ಲಿರುತ್ತದೆ. ಅಪ್ಪ, ಅಮ್ಮ, ಅಣ್ಣ, ತಂಗಿ, ತಮ್ಮ ಇಂತಹ ಸಂಬಂಧವಾಚಿನಾಮಗಳಿಗೆ ಆಡುನುಡಿಯಲ್ಲಿ ಅನ್ನು ಪ್ರತ್ಯಯದ ಸಂಕ್ಷೇಪ ರೂಪ 'ನ್ನ' ಬಳಕೆಗೊಳ್ಳುತ್ತದೆ. ಉದಾ : ಅಪ್ಪನ್ನ ಮನಿಗಿ ಕಳಸು, ಅಮ್ಮನ್ನ ಮನ್ಯಾಗ ಇಟಕೊ, ಅಣ್ಣಾನ್ನ ಕರಿ, ತಂಗಿನ್ನ ಛಲೊ ವರಗ ಕೊಡು, ತಮ್ಮನ್ನ ಪರೀಕ್ಷಾಕ ಕುಂಡರ್ಸು. ಹಳಗನ್ನಡದಲ್ಲಿ 'ಅಂ' ಪ್ರತ್ಯಯವನ್ನು ದ್ವಿತಿಯೆಗೆ ಹೇಳಿದೆ ಆದರೆ ಅದು 'ಅನ್' ಎಂದು ಗುರುತಿಸುವುದು ಸೂಕ್ತವೆನಿಸುತ್ತದೆ.

### 6.7.3 ತೃತೀಯಾ ವಿಭಕ್ತಿ :

ಹಳಗನ್ನಡದಲ್ಲಿ "ಇಂ", "ಇಂದಂ", "ಇಂದ" ಹಾಗೂ ಹೊಸಗನ್ನಡದಲ್ಲಿ ತೃತೀಯಾವಿಭಕ್ತಿ "ಇಂದ" ಎಂಬ ಪ್ರತ್ಯಯದಿಂದ ಸೂಚಿಸಲ್ಪಡುತ್ತದೆ. ಕಲ್ಲಿನಿಂದ ಹೊಡೆದು ಕೊಂದನು. ರಾಮಪ್ಪನಿಂದ ಈ ಮನೆ ಕಟ್ಟಲ್ಪಟ್ಟಿದೆ. ಮಗಳಿಂದ ಅವನಿಗೆ ಕೀರ್ತಿ ಲಭಿಸಿತು. ಪೆನ್ನಿನಿಂದ ಗೀಚಿದ್ದಾನೆ. ಅವನಿಂದ ಕೆಲಸವಾಗ ಬಹುದು.

ಮೂಲ ದ್ರಾವಿಡ ಭಾಷೆಯಲ್ಲಿದ್ದ ಇನ್ನೊಂದು ಪ್ರತ್ಯಯ "ಆಲ್"ದ ಛಾಯೆ (ಅಲ್ > ಅಲಿ) ಯನ್ನು ಮೈಸೂರು ಭಾಗದ ಕನ್ನಡದ ಆಡುನುಡಿಯಲ್ಲಿ ಕಾಣು ತ್ತೇವೆ. ಉದಾ : ಪೆನ್ನಲಿ ಬರೆದನು, ಕಾಲಿಲಿ ಒದ್ದ, ಅವನ ಕೈಲಿ ಕೆಲಸ ಆಗಬ್ಹೋದು.

ಆದರೆ ಇದು ಮಾನವೇತರ ನಾಮಗಳಿದ್ದಾಗ ಅದೂ ಕೆಲವು ವಿಶಿಷ್ಟ ನಾಮಗಳಲ್ಲಿ ಮಾತ್ರ ಬಳಕೆಯಲ್ಲಿದ್ದಂತೆ ತೋರುತ್ತದೆ. ತೃತೀಯಾ ವಿಭಕ್ತಿ ಪ್ರತ್ಯಯ ಇಲ್ಲವೆ ಪದೋತ್ತರ ರೂಪದಿಂದ ಆ ಅರ್ಥವನ್ನು ವ್ಯಕ್ತಪಡಿಸುವ ಪ್ರಯೋಗಗಳೂ ಇವೆ. ಉದಾ : ಚಾಕು ತಕ್ಕೊಂಡು ಹೊಡೆದನು [ತಕ್ಕೊಂಡು]

### 6.7.4 ಚತುರ್ಥೀ ವಿಭಕ್ತಿ :

'ಕೆ', 'ಕ್ಕೆ', 'ಗೆ' ಹಳಗನ್ನಡ ಹಾಗೂ ಹೊಸಗನ್ನಡ ಎರಡರಲ್ಲೂ ಇವೆ. ಚತುರ್ಥಿ ವಿಭಕ್ತಿ ಪ್ರತ್ಯಯ 'ಕ್ಕೆ' ಇದು ನಪುಂಸಕ ಏಕವಚನ ನಾಮಗಳಿಗೆ ["ಅ" ಸ್ವರಾಂತಗಳಿದ್ದಾಗ ಮಾತ್ರ] ಹಾಗೂ [ಕೋಟಿ ಪದವನ್ನುಳಿದು] ಸಂಖ್ಯಾವಾಚಕಗಳಿಗೆ ಹತ್ತುತ್ತದೆ. ಉಳಿದೆಡೆ— "ಗೆ" ಪ್ರತ್ಯಯ ಹತ್ತುತ್ತದೆ. 'ಕ್ಕೆ' ಇದಕ್ಕೆ ಕೆ, ಕ ಹಾಗೂ 'ಗೆ' ಇದಕ್ಕೆ —ಇಗೆ, ಗ್ ಮುಂತಾದ ಉಪ ಆಕೃತಿಮಾಗಳು ಇವೆ. ಅವು ಪರಸ್ಪರ ಪೂರಕ ಪ್ರಸಾರದಲ್ಲಿರುತ್ತವೆ. ಬಹುವಚನ ಪ್ರತ್ಯಯದ ನಂತರ 'ಗೆ' ಪ್ರತ್ಯಯವೇ ಬಳಕೆಯಾಗುತ್ತದೆ. ಉದಾ : ಮರಕ್ಕೆ, ಹತ್ತಕ್ಕೆ, ಸಾವಿರಕ್ಕೆ [ಕ್ಕೆ] ಕೋಟಿಗೆ, ತೆರೆಗೆ, [ಗೆ] ಹೆಣ್ಣಿಗೆ [ಇಗೆ] ಉತ್ತರ ಕರ್ನಾಟಕದ ಆಡುನುಡಿಯಲ್ಲಿ ಕ್ಕ, ಗ್ಗ/ಗಿ ಎಂಬ ಪ್ರತ್ಯಯಗಳು ಬಳಕೆಯಾಗುತ್ತವೆ, ಗಿಡಕ್ಕ, ಹುಡುಗ್ಗ, ಅವ್ನಿಗಿ.

ಚತುರ್ಥಿ ವಿಭಕ್ತಿ ಸಾಮಾನ್ಯವಾಗಿ ನಿರ್ದೇಶನಾರ್ಥವನ್ನು ಹೊಂದಿದ್ದರೂ ಉದ್ದೇಶ, ಹೋಲಿಕೆ ಇವುಗಳ ಅರ್ಥವನ್ನೂ ಕೆಲವೆಡೆ ವ್ಯಕ್ತಪಡಿಸುತ್ತದೆ. ಸ್ಥಳ, ಸಂಬಂಧವಾಚಕ, ಕಾಲಸೂಚಕ ನಾಮಗಳೊಡನೆ ಬಂದಾಗ ಕೆಲವು ಸಲ ಷಷ್ಠೀ ಅರ್ಥವನ್ನು ಹೊಂದಿರುತ್ತದೆ. ಕೆಲವೆಡೆ ತೃತೀಯಾ ವಿಭಕ್ತ್ಯರ್ಥವನ್ನೂ ಹೊರಗೆಡಹುತ್ತದೆ. ಉದಾ ಮನೆಗೆ ಹೋಗು [ದರ್ಶಕ] ; ತಿನ್ನಲಿಕ್ಕೆ ಕುಳಿತಿದ್ದಾನೆ [ಉದ್ದೇಶ], ಅವಳಿಗೆ ಗಿಡ್ಡನಾಗುತ್ತಾನೆ [ಹೋಲಿಕೆ]; ಹೆಂಡತಿಗೆ ಗಂಡನು ದೇವರು [ತುಲನೆ], ಹೆಂಗಸರಿಗೆ ಜವಾಬ್ದಾರಿ ಹೆಚ್ಚು [ಷಷ್ಠಿ], ಅವಳಿಗೆ ಸಮಾಧಾನ ಗುಣವಿಲ್ಲ [ಸಪ್ತಮಿ].

### 6·7.5 ಪಂಚಮಿ ವಿಭಕ್ತಿ :

**6.7.5.1** ಕನ್ನಡದಲ್ಲಿ 'ಇಂದ' ಪ್ರತ್ಯಯ, ಪಂಚಮಿ ವಿಭಕ್ತಿಯ ಅವತಾರವಾಗಿದೆ. ಇದೇ ಪ್ರತ್ಯಯ ತೃತೀಯೆಗೂ ಉಪಯೋಗಿಸಲ್ಪಡುವುದರಿಂದ

ಪಂಚಮೀ ವಿಭಕ್ತಿ ಇಲ್ಲವೆಂದು ಕೆಲವರು ಅಭಿಪ್ರಾಯಿಸುತ್ತಾರೆ. ೧ ಕಾಲ್ಡ್‌ವೆಲ್ಲರು ದ್ರಾವಿಡ ಭಾಷೆಗಳಲ್ಲಿ ಪಂಚಮೀ ವಿಭಕ್ತಿ ಇಲ್ಲವೆಂದೂ ಸಪ್ತಮೀ ಹಾಗೂ ತೃತೀಯಾ ವಿಭಕ್ತಿ ಪ್ರತ್ಯಯಗಳೇ ಪಂಚಮಿಯ ಕಾರ್ಯವನ್ನು ನಿರ್ವಹಿಸುತ್ತವೆ ಯೆಂದೂ ನಿರ್ಣಯಿಸಿದ್ದಾರೆ. ಪಂಚಮೀ ಅರ್ಥವನ್ನು ಬೇರೆ ಬೇರೆ ಪ್ರತ್ಯಯ ಗಳೂ ನಿರ್ವಹಿಸುತ್ತವೆ.

ಗಿಡದಿಂದ ಬಿದ್ದು ಕಾಲು ಮುರಿದುಕೊಂಡನು (-ಇಂದ)
ಗಿಡವನ್ನಿಳಿದು ಬಂದನು (-ಅನ್ನು)

ಪಂಚಮೀ ವಿಭಕ್ತಿಗೆ ತನ್ನದೇ ಆದ ಪ್ರತ್ಯೇಕ ರೂಪವುಳ್ಳ ಪ್ರತ್ಯಯವಿಲ್ಲ ಅಷ್ಟೇ. ಆದರೆ ಪಂಚಮೀ ವಿಭಕ್ತಿಯೇ ಇಲ್ಲ ಎನ್ನಲು ಸಾಧ್ಯವಿಲ್ಲ. ಸಪ್ತಮೀ ವಿಭಕ್ತಿ ಪತ್ಯಯ 'ಅಲ್ಲಿ' ಎಂಬುದೂ ಕೆಲವಡೆ ಪಂಚಮೀ ವಿಭಕ್ತಿಯನ್ನು ಸೂಚಿಸುತ್ತದೆಂದು ಭಾಸವಾಗುತ್ತದೆ. ಉದಾ : ೧. ಬಾವಿ ನೀರಿನಲ್ಲಿ ಹೆಣ ಎದ್ದಿತು. ೨. ಬಾವಿ ನೀರಿನಿಂದ ಹೆಣ ಎದ್ದಿತು. ೩. ಕಣ್ಣಲ್ಲಿ ನೀರು ಸುರಿಯಿತು. ೪. ಕಣ್ಣಿಂದ ನೀರು ಸುರಿಯಿತು. ೫. ಬಸ್ಸಿನಲ್ಲಿ ಜನರು ಬಂದರು. ೬. ಬಸ್ಸಿನಿಂದ ಜನರು ಬಂದರು.

ಇಂಥಲ್ಲಿ ವಿಭಕ್ತಿಯನ್ನು ನಿರ್ಧರಿಸುವ ಅಂಶಗಳು ಪ್ರತ್ಯಯಗಳಿಗಿಂತ ಸಂದರ್ಭ ಹಾಗೂ ಕಾರಕ ಸಂಬಂಧ ಮುಖ್ಯವಾಗುತ್ತವೆ. ಆದುದರಿಂದ ಪಂಚಮಿಯಲ್ಲಿ ಆಳ ರಚನಾಮಟ್ಟವನ್ನು ಪರಿಗಣಿಸುವುದೇ ಹೆಚ್ಚು ಸೂಕ್ತ.

6.7.5.2 ಪ್ರಾಚೀನ ಕನ್ನಡ ವೈಯಾಕರಣಿಗಳು 'ಅತ್ತಣಿಂ' ಎಂಬ ಪ್ರತ್ಯಯವನ್ನು ಪಂಚಮಿಗೆ ನೀಡಿದ್ದಾರೆ. ಆದರೆ ಅತ್ತಣ ಎಂಬುದು, ಪ್ರತ್ಯಯವಾಗದೆ ಪ್ರಾತಿಪದಿಕರಚಕವಾಗಿ ಕಾರ್ಯನಿರ್ವಹಿಸುತ್ತದೆ. ಇದು ರಿಕ್ತಾಕೃತಿಮಾ ಆಗುತ್ತದೆ. ಇಲ್ಲಿ 'ಇಂ' ಎಂಬುದೇ ಪಂಚಮಿ ಪ್ರತ್ಯಯ.

ಉದಾ : ನಂಟರ್+ಅತ್ತಣ+ಇಂ=ನಂಟರತ್ತಣ+ಇಂ
ಕೆಳಗೆ+ಅತ್ತಣ+ಇಂ=ಕೆಳಗೆಯತ್ತಣ+ಇಂ

೧. ಪಂಚಮೀ ವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲ...ಕನ್ನಡ ಕೈಪಿಡಿ ೧೯೭೧ ಪುಟ ೩೫೪.

ಇಲ್ಲಿ 'ಅತ್ತಣ' ರೂಪವನ್ನು ಕೇಶಿರಾಜನು 'ಅತ್' ಎಂದು ತಪ್ಪಾಗಿ ವಿವರಿಸಿದ್ದಾನೆ. (ಸೂ. ೧೨೬) ಆಡುನುಡಿಯಲ್ಲಿ 'ಅತ್ತಣ' ಕ್ಕೆ ಸಮವಾಗಿ 'ಕಡೆ' ಎಂಬುದು ಬಳಕೆಯಾಗುವುದುಂಟು— ಬೀಗರಕಡೆಂದ/ಬೀಗರಕಡಿಂದ. 'ದೆಸೆ' ಎಂಬ ರೂಪವನ್ನು ಕೆಲವರು ಬಳಸಿದರೂ ಅದು ಪಂಚಮಿಗಿಂತ ಕಾರಣಿತ ವಿಭಕ್ತಿ(Causative)ಗೆ ಸರಿ ಹೊಂದುತ್ತವೆ.— ಅಪ್ಪನದಸಿಂದ (ಅಪ್ಪನ ದೆಸೆಯಿಂದ) ಹೊಲದ್ದಸಿಂದ (ಹೊಲದ ದೆಸೆಯಿಂದ)

ಒಟ್ಟಿನಲ್ಲಿ ನಾವು ನಿರ್ಧರಿಸುವುದಿಷ್ಟು—ಪಂಚಮೀ ವಿಭಕ್ತಿ ಕನ್ನಡದಲ್ಲಿದೆ. ಅದರ ಪ್ರತ್ಯಯ ಹಳಗನ್ನಡದಲ್ಲಿ 'ಇಂ' ಹೊಸಗನ್ನಡದಲ್ಲಿ 'ಇಂದ'. ಹಳಗನ್ನಡದ 'ಅತ್ತಣ' ಹೊಸಗನ್ನಡದ 'ದೆಸೆ' ವಿಭಕ್ತಿ ಪ್ರತ್ಯಯಗಳಲ್ಲ (ನೋಡಿ 6.7.*.5)

### 6.7.6 ಷಷ್ಠಿ ವಿಭಕ್ತಿ :

ಷಷ್ಠೀ ವಿಭಕ್ತಿ ಪ್ರತ್ಯಯ 'ಅ'. ಷಷ್ಠಿಗೆ ಕಾರಕಸಂಬಂಧವಿಲ್ಲ. ಆದ್ದರಿಂದ ಕ್ರಿಯಾಪದಕ್ಕೂ ನಾಮಪದಕ್ಕೂ ನೇರ ಸಂಬಂಧ ಇಲ್ಲಿ ಏರ್ಪಡುವುದಿಲ್ಲ. ಈ ಕಾರಣದಿಂದ ವಾಸ್ತವವಾಗಿ ಷಷ್ಠೀ ವಿಭಕ್ತಿ ಇಲ್ಲ ಎಂದು ಹೇಳಬಹುದು. ಆದರೆ ಆಂತರರಚನಾಮಟ್ಟದಲ್ಲಿ ಕ್ರಿಯಾಪದಕ್ಕೆ ಸಂಬಂಧವೇರ್ಪಟ್ಟಿರುವ ನಾಮದ ವಿಶೇಷಣ ರೂಪವನ್ನು ನಿರ್ಮಿಸುವ ವಿಶಿಷ್ಟ ಕಾರ್ಯವನ್ನು ಷಷ್ಠೀ ನಿರ್ವಹಿಸುತ್ತದೆ. (ನೋಡಿ 6.7.0, ಷಷ್ಠೀ ವಿಭಕ್ತಿ ಇಲ್ಲ ಎನ್ನುವುದಕ್ಕೆ ಇನ್ನೊಂದು ಕಾರಣವೆಂದರೆ ಷಷ್ಠಿ ವಿಭಕ್ತಿ ಇಲ್ಲದೆ ಅರ್ಥಕ್ಕೆ ಬಾಧೆ ಬರದ ರೀತಿಯಲ್ಲಿ ವಾಕ್ಯರಚನೆ ಸಾಧ್ಯವಿರುವುದೇ ಆಗಿದೆ:

ಉದಾ : ಇವರು ನನ್ನ ತಂದೆ (ಷಷ್ಠೀ) → ನನ್ನನ್ನು ಹುಟ್ಟಿಸಿದ ತಂದೆ ಇವರು.
ಇದು ನನ್ನ ಹೊಲ (ಷಷ್ಠೀ) → ಇದು ನಾವು ತೆಗೆದುಕೊಂಡ ಹೊಲ.
ಆದರೆ ಇದು ಎಲ್ಲ ಕಡೆಗೂ ಸಾಧ್ಯವಿಲ್ಲ.

ಉದಾ : ಹೂವಿನ ತೋಟದಲ್ಲಿ ಹೂವಿದೆ (ಷಷ್ಠೀ) → ?
ಗಿಡದ ಮೇಲೆ ಮಂಗ ಕೂತಿದೆ ( " ) → ?
ಅವಳ ಕಣ್ಣು ಆಕರ್ಷಕವಾಗಿವೆ ( " ) → ?

ಇಂತಹ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಇವುಗಳಲ್ಲಿ ಷಷ್ಠೀ ಪ್ರತ್ಯಯ ವಲ್ಲದೆ ಬೇರೆ ಯಾವ ಪ್ರತ್ಯಯವೂ ಅನ್ವಯವಾಗುವುದಿಲ್ಲ. ಆದುದರಿಂದ ಷಷ್ಠೀಗೆ

ಕನ್ನಡದಲ್ಲಿ ತನ್ನದೇ ಆದ ವಿಶಿಷ್ಟ ಅಸ್ತಿತ್ವವಿದೆ. ತೃತೀಯಾ, ಸಪ್ತಮಿ, ಸಹತ್ವ ಮುಂತಾದ ವಿಭಕ್ತಿಗಳನ್ನು ಸೂಚಿಸುವ ಪದೋತ್ತರ ರೂಪಗಳು ಹತ್ತುವಾಗ ಆ ಪದೋತ್ತರ ರೂಪಗಳ ಹಿಂದಿನ ನಾಮಪದವು ಷಷ್ಠಿಯಲ್ಲಿರುತ್ತವೆ. ಉದಾ : ಅಣ್ಣನ ಕಡೆಯಿಂದ, ಬಾಗಿಲ ಕೆಳಗೆ, ಹುಡುಗಿಯ ಕೊರಳಲ್ಲಿ, ಬಾವಿಯ ಒಳಗೆ.

### 6.7.7 ಸಪ್ತಮೀ ವಿಭಕ್ತಿ :

ಹಳಗನ್ನಡಕ್ಕೆ ಅಲ್ ಹಾಗೂ ಒಳ ಪ್ರತ್ಯಯ ಹೇಳಲಾಗಿದೆ. ಹೊಸಗನ್ನಡ ಸಪ್ತಮೀ ವಿಭಕ್ತಿಗೆ ಸಾಮಾನ್ಯವಾಗಿ 'ಅಲ್ಲಿ' ಎಂಬ ಪ್ರತ್ಯಯ ಅನ್ವಯವಾಗುತ್ತದೆ. 'ಅಲ್ಲಿ' ಇದು ಸ್ವತಂತ್ರ ಪದವೂ ಹೌದು. ಇದರಂತೆ ಇನ್ನೂ ಕೆಲವು ಪದೋತ್ತರ ರೂಪಗಳು ಸಪ್ತಮಿಯನ್ನು ಸೂಚಿಸಲು ಬಳಸಲ್ಪಡುತ್ತವೆ. ಒಳಗೆ, ಇಲ್ಲಿ, ಹತ್ತಿರ, ಕಡೆಗೆ, ಅತ್ತ, ಇತ್ತ, ಮುಂದೆ, ಕೆಳಗೆ ಇತ್ಯಾದಿ. ಇವೆಲ್ಲ 'ಅಲ್ಲಿ' ರೂಪದಂತೆ ಸ್ವತಂತ್ರ ಪದಗಳೂ ಆಗಿವೆ.

ಉದಾ : ಮನೆಯೊಳಗೆ ಬಾ, ಕುರ್ಚಿಯಲ್ಲಿ ಕೂಡ್ರು, ನನ್ನ ಹತ್ತಿರ ಹಣ ವಿಲ್ಲ. ನನ್ನವಳ ಹತ್ತಿರ ಇರಬಹುದು. ಅವಳ ಕಡೆಗೆ ಇದ್ದರೆ ಕೊಡುತ್ತಾಳೆ. ಅವಳತ್ತ ಹೋಗೋಣ, ನನ್ನ ಹಿಂದೆ ಬರುತ್ತೀಯಾ ? ಅವಳ ಮುಂದೆ ನಾಚಬೇಡ, ತನ್ನ ತಲೆದಿಂಬಿನ ಕೆಳಗೆ ಹಣ ಇಟ್ಟಿರುತ್ತಾಳೆ. ಅವಳ ಪಕ್ಕದಲ್ಲಿ ನಿಲ್ಲು, ನಿನ್ನ ಕೈಯಲ್ಲಿ ಕೊಡುತ್ತಾಳೆ.

ಈ ಎಲ್ಲ ವಾಕ್ಯಗಳಲ್ಲೂ ಸಪ್ತಮೀ ಅರ್ಥ ಒಳಗೊಂಡಿರುವುದನ್ನು ಗಮನಿಸ ಬೇಕು.

ಪಂಚಮೀ ವಿಭಕ್ತಿಯದೇ ಒಂದು ಪ್ರಕಾರ. ಈ ಸಪ್ತಮೀ ವಿಭಕ್ತಿ, ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ ಎಂದು ಕಾಲ್ಡವೆಲ್‌ರ ಅಭಿಪ್ರಾಯ. ಇದನ್ನು ಒಪ್ಪುವುದಕ್ಕೆ ಆಗುವುದಿಲ್ಲ. ಪಂಚಮೀ ವಿಭಕ್ತಿ ತೌಲನಿಕ, ಹೋಲಿಕೆಯ ಅರ್ಥವನ್ನು ವ್ಯಕ್ತ ಪಡಿಸುವಂತೆ ಸಪ್ತಮೀ ವ್ಯಕ್ತಪಡಿಸಲಾರದು. ಇದಲ್ಲದೆ ಕಾಲಸೂಚಕನಾಮಗಳು ಬಂದಾಗ ಪಂಚಮೀ ಹಾಗೂ ಸಪ್ತಮೀ ವಿಭಕ್ತಿಗಳಲ್ಲಿಯ ಅಂತರ ಸ್ಪಷ್ಟವಾಗಿ ವೇದ್ಯವಾಗುತ್ತದೆ.

ಉದಾ : ಅವಳಿಂದ ಸಣ್ಣವನು, ಬೇಸಿಗೆ ತಿಂಗಳಿಂದ ಮಳೆ ಬರುತ್ತದೆ.
ಕಲಬುರ್ಗಿಯಿಂದ ಬರುತ್ತಾನೆ.

ಈ ವಾಕ್ಯಗಳಲ್ಲಿರುವ ಪಂಚಮೀ ಅರ್ಥವನ್ನು ಸಪ್ತಮೀ ಪೂರೈಸಲಾರದು. ಕಾರಣ ಪಂಚಮೀ ಮತ್ತು ಸಪ್ತಮೀ ಬೇರೆ ಬೇರೆಯೆಂದೇ ಪರಿಗಣಿಸುವುದು ಸೂಕ್ತ.

## 6.7.8. ಸಹತ್ವ ವಿಭಕ್ತಿ :

ಕರ್ತೃವಿನ ಜೊತೆಗೆ ಇರುವಿಕೆಯ ಸಹತ್ವವನ್ನು ಸೂಚಿಸುವ ವಿಶಿಷ್ಟ ಅರ್ಥವನ್ನು ನೀಡುವ ವಿಭಕ್ತಿಯನ್ನು ಪ್ರತ್ಯೇಕವಾಗಿ ಗುರುತಿಸಬಹುದು. ದ್ರಾವಿಡ ಭಾಷೆಗಳಲ್ಲಿ ಸಹತ್ವ ವಿಭಕ್ತಿಯೊಂದನ್ನು ಪ್ರತ್ಯೇಕವೆಂದೇ ಪರಿಗಣಿಸಲಾಗಿದೆ.೧ ಕೆಲವರು ತೃತೀಯಾದಲ್ಲಿ ಇದನ್ನು ಸೇರಿಸುವರಾದರೂ ಸಹತ್ವಕ್ಕೂ ತೃತೀಯೆಗೂ ಸಾಕಷ್ಟು ಭಿನ್ನತೆ ಇರುವುದು ಸ್ಪಷ್ಟವಾಗಿದೆ. ಒಡನೆ, ಒಂದಿಗೆ, ಒಟ್ಟಿಗೆ, ಜೊತೆಗೆ, ಕೂಡ ಇಂತಹ ಪದೋತ್ತರ ರೂಪಗಳು ಸಹತ್ವ ವಿಭಕ್ತಿಯನ್ನು ಸೂಚಿಸುತ್ತವೆ.

ಉದಾ : ನನ್ನೊಡನೆ ಅವಳು ಓದುತ್ತಿದ್ದಾಳೆ.
ಮಗುವಿನೊಂದಿಗೆ ಅವರು ಬಂದರು.
ಪತ್ನಿಯಜೊತೆಗೆ ಸಿನಿಮಾಕ್ಕೆ ಹೋದನು.
ರಾಮನೊಟ್ಟಿಗೆ ಸೀತೆ ಕಾಡಿಗೆ ಹೋದಳು.

## 6.7.9. ಸಂಬೋಧನಾ ವಿಭಕ್ತಿ :

ಸಹಜ ನಾಮವಾಗಲಿ ಇಲ್ಲವೆ ನಾಮಪದಾಂತ್ಯ ಸ್ವರ ದೀರ್ಘೀಕರಣವಾಗಲಿ ಸಂಬೋಧನೆಯ ಅರ್ಥವನ್ನು ನೀಡುತ್ತದೆ. ಸಂಬೋಧನೆ ನಿಜವಾಗಿ ವಿಭಕ್ತಿಯಲ್ಲ. ಪ್ರಯೋಗಶರಣರಾದ ವ್ಯಾಕರಣಕಾರರು ಇದನ್ನು ವಿಭಕ್ತಿಯ ಪಟ್ಟಿಯಲ್ಲಿ ಸೇರಿಸುತ್ತಾರೆ. ಇದಕ್ಕೆ ವಿಭಕ್ತಿಯ ಸ್ಥಾನವನ್ನು ಯಾಕೆ ಕೊಡಬೇಕೆಂಬುದಕ್ಕೆ ಸಬಲ ಆಧಾರಗಳನ್ನೇ ಯಾರೂ ನೀಡುವುದಿಲ್ಲ. ಕೆಲವರು (ಕುಶಾಲಪ್ಪಗೌಡ, ಪ್ರ. ಗೋ. ಕುಲಕರ್ಣಿ, ಹಾ. ಮಾ. ನಾಯಕ, ಮುಂ.) ಇದನ್ನು ವಿಭಕ್ತಿಯೆಂದು ಒಪ್ಪಿಕೊಳ್ಳುವುದಿಲ್ಲ. ವಿಲ್ಯಂ ಮಾಡ್ತ ಅವರ—"ಸಂಬೋಧನೆಯು ಕಾರಕವೂ ಅಲ್ಲ. ವಿಭಕ್ತಿಯೂ ಅಲ್ಲ. ಯಾಕೆಂದರೆ ಇದು ಕ್ರಿಯಾಪದದೊಡನೆ ನಾಮಪದ ಯಾವ ಅರ್ಥ ಸಂಬಂಧವನ್ನು ಸ್ಪಷ್ಟಪಡಿಸುವುದಿಲ್ಲ. ಆದ್ದರಿಂದ ಸಂಬೋಧನೆ ಕೇವಲ

---

೧. ನೋಡಿ—ದ್ರಾವಿಡ ಭಾಷಾವ್ಯಾಸಂಗ— ನವದತ್ತಿ ವಂಶ ಸಂಗಮೇಶ (೧೯೭೬) ಪು, ೧೧೬–೧೧೮

ಲಕ್ಷ್ಯ ಸೆಳೆಯುವುದಕ್ಕಿದೆ ಅಷ್ಟೇ"೧ ಎಂಬ ಅಭಿಪ್ರಾಯ ಸಮಂಜಸವಾಗಿದೆ.

6.7.10. ಈವರೆಗೆ ವಿವರಿಸಲ್ಪಟ್ಟ ವಿಭಕ್ತಿಗಳಲ್ಲದೆ ಕೆಲವು ವಿದ್ವಾಂಸರು ನಿರ್ದೇಶಿತ [Directive], ಉದ್ದೇಶಿತ [Purpo·ive], ಕಾರಣಿತ [Causative], ಐಂದ್ರಿತ [Sensory], ] ಪರಿಣಾಮಿತ Effective] ಮುಂತಾದ ಇನ್ನೂ ಅನೇಕ ಹೊಸ ವಿಭಕ್ತಿಗಳನ್ನು ಸೂಚಿಸಿದ್ದಾರೆ. ಅವುಗಳನ್ನು ಸ್ವತಂತ್ರ ವಿಭಕ್ತಿಗಳೆಂದು ಅನುಮಾನವಿಲ್ಲದೆ ಒಪ್ಪಿಕೊಳ್ಳುವುದಕ್ಕೆ ಬಲವಾದ ಆಧಾರಗಳು ದೊರೆಯಬೇಕು.

ಕನ್ನಡದಲ್ಲಿ ಪ್ರಥಮಾದಿಂದ ಸಪ್ತಮಿವರೆಗೆ ಏಳು ಹಾಗೂ ಸಹತ್ವ ಹೀಗೆ ಒಟ್ಟು ಎಂಟು ವಿಭಕ್ತಿಗಳನ್ನು ಸದ್ಯಕ್ಕೆ ಇಟ್ಟುಕೊಳ್ಳಬಹುದಾಗಿದೆ.

**6.7.11 ವಿಭಕ್ತಿ ಪಲ್ಲಟ :**

ಒಂದು ವಿಭಕ್ತಿ ಬೇರೊಂದು ವಿಭಕ್ತಿ ಪ್ರತ್ಯಯದ ಮೂಲಕ ಸೂಚಿಸಲ್ಪಟ್ಟರೆ ವಿಭಕ್ತಿ ಪಲ್ಲಟವಾಗುತ್ತದೆಂದು ಪ್ರಾಚೀನ ವೈಯಾಕರಣರ ಅಭಿಪ್ರಾಯ. ಪ್ರತ್ಯಯಗಳ ಮೇಲಿಂದ ವಿಭಕ್ತಿ ಗುರುತಿಸುವುದು ಕೆಲವು ಸಲ ಕಠಿಣವೇ ಆಗುತ್ತದೆ. ಉದಾ : ನೀರಿಗೆ ಹೋಗುವಳು; ಮನೆಗೆ ಹೋಗುವಳು ಇವುಗಳಲ್ಲಿ ವ್ಯತ್ಯಾಸವಿದೆ. ಮೊದಲನೆಯದು ಉದ್ದೇಶಿತ (ನೀರಿಗಾಗಿ) ಎಂದೂ ಎರಡನೆಯದು ನಿರ್ದೇಶಿತ ವೆಂದೂ ವಿವರಿಸಬಹುದು. ಎಮ್ಮೆ ಹುಡುಕಬೇಕು, ಎಮ್ಮೆ ಹಾಲು ಚೆನ್ನಾಗಿರುವ ದಿಲ್ಲ. ಈ ವಾಕ್ಯಗಳಲ್ಲಿ ಬೇರೆ ಬೇರೆ ವಿಭಕ್ತಿಗಳಿವೆ. ಆದರೂ ಯಾವ ಪ್ರತ್ಯಯ ವಿಲ್ಲ. ಆದುದರಿಂದ ಪ್ರತ್ಯಯ ಕೆಲವೆಡೆ ಮುಖ್ಯವಲ್ಲವೆನಿಸುತ್ತದೆ. ನಳದಿಂದ ನೀರು ಬಂತು, ನಳದಲ್ಲಿ ನೀರು ಬಂತು, ಹಿರಿಯರನ್ನು ಗೌರವಿಸು, ಹಿರಿಯರಿಗೆ ಗೌರವಿಸು, ಮದುವೆ ಮಾಡುವವರಿಗೆ ಏನೆಂದು ಹೇಳಬೇಕು ? ಮದುವೆ ಮಾಡುವವರನ್ನು ಏನೆಂದು ಹೇಳಬೇಕು ? ಅವನು ಮಾತಿನಲ್ಲಿ ಕುಳಿತರೆ ತೀರಿತು, ಅವನು ಮಾತಿಗೆ ಕುಳಿತರೆ ತೀರಿತು, ಮಾವಿನ ಗಿಡದ ತೊಗಟೆ ಬಿರುಸು, ಮಾವಿನ ಗಿಡಕ್ಕೆ ತೊಗಟೆ ಬಿರುಸು—ಇಂತಹ ಅನೇಕ ವಾಕ್ಯಗಳಲ್ಲಿ ಪ್ರತ್ಯಯಗಳು ಬೇರೆ ಯಾಗಿದ್ದರೂ ಅರ್ಥಮಾತ್ರ ಒಂದೇ ಆಗಿರುವುದನ್ನು ಗಮನಿಸಬೇಕು. ಒಂದೇ ವಿಭಕ್ತಿ ಪ್ರತ್ಯಯ ರೂಪ ಬೇರೆ ಬೇರೆ ವಿಭಕ್ತಿ ಅರ್ಥಗಳನ್ನೂ ವ್ಯಕ್ತಪಡಿಸ ಬಹುದು. ಉದಾ : ಕಾಲಲ್ಲಿ ಒದೆಯುತ್ತಾನೆ, ಕಾಲಲ್ಲಿ ಹುಣ್ಣು ಇದೆ. ಮುಂದಿಗಿ

---

೧. ನೋಡಿ–Madtha William-Case System of Kannada [Dravidian Case System (1976) P. 142.

ಹೊಡಿ, ಮುಂದಿಗಿ ಬುದ್ಧಿಯಿಲ್ಲ, ನಾವು ಮನೀಲಿ ಕೆಲಸ ಮಾಡಿಕೋತೀವಿ (ನಾವು ಮನೆಯಲ್ಲಿ ಕೆಲಸ ಮಾಡಿಕೊಳ್ಳುತ್ತೀವೆ), ನಾವು ಮನೀಲಿ ಹೊಲ ಮಾಡ್ಸತೀವಿ (ನಾವು ಮನೆಯ ಜನರಿಂದ ಹೊಲ ಮಾಡಿಸುತ್ತೀವೆ .

ಹೀಗೆ ವಿಭಕ್ತಿ ಪಲ್ಲಟ ಕನ್ನಡದಲ್ಲಿ ವಿಶಿಷ್ಟವಾಗಿ ನಿಲ್ಲುತ್ತದೆ. ವಿಭಕ್ತಿಪಲ್ಲಟಕ್ಕೆ ಅನ್ಯಭಾಷಾ ಪ್ರಭಾವ, ಕನ್ನಡ ರಚನೆಯಲ್ಲಿಯೇ ಒಂದು ರೂಪಿನ ಪ್ರಭಾವ ಮತ್ತೊಂದಕ್ಕೆ, ಪ್ರಾದೇಶಿಕ ಭಿನ್ನತೆ ಇತ್ಯಾದಿ ನಾನಾ ಕಾರಣಗಳಿರಬಹುದು. ಈ ನಿಟ್ಟಿನಲ್ಲಿ ಆಳವಾದ ಅಧ್ಯಯನ ನಡೆಯುವವರೆಗೂ ವಿಭಕ್ತಿಪಲ್ಲಟದ ರಹಸ್ಯ ಬಿಡಿಸಲಾಗದು.

## ಅನುಬಂಧ

### 6.7.*.0 ಕೇಶಿರಾಜನ ವಿಭಕ್ತಿ ವಿಚಾರಗಳು :

ಪದದ ಅರ್ಥವನ್ನು ವಿಭಾಗಿಸುವುದೇ ವಿಭಕ್ತಿ. ಇವನ್ನೇ ವಿಭಕ್ತಿ ಪ್ರತ್ಯಯ ವೆಂದು ಅನ್ನಬಹುದು. ಆ ವಿಭಕ್ತಿ ಪ್ರತ್ಯಯಗಳ ಹಿಂದೆ ಇರುವ ಲಿಂಗ ಅಥವಾ ಧಾತುವೇ ಪ್ರಕೃತಿ. ಪ್ರಕೃತಿ ಪ್ರತ್ಯಯಗಳು ಸೇರಿದಾಗ ಪದವಾಗುತ್ತದೆ ಎಂಬುದಾಗಿ ವಿಭಕ್ತಿಯನ್ನು ಕೇಶಿರಾಜ ವಿವರಿಸಿದ್ದಾನೆ (ಸೂ. ೪೫).

ಅವನು ಏಳು ವಿಭಕ್ತಿಗಳನ್ನೂ ಅವುಗಳ ಪ್ರತ್ಯಯಗಳನ್ನೂ (ಸೂ. ೧೦೩) ಹೀಗೆ ಹೇಳಿದ್ದಾನೆ :

ಪ್ರಥಮ --ಮ್, ದ್ವಿತೀಯ –ಅಮ್, ತೃತೀಯ –ಇಮ್, ಚತುರ್ಥಿ–ಕೆ, ಪಂಚಮಿ –ಅತ್, ಷಷ್ಠಿ –ಅದ್, ಸಪ್ತಮಿ –ಒಳ್.

ಪ್ರಥಮಾ ವಿಭಕ್ತಿಯಲ್ಲಿ ಅಕಾರಾಂತಕ್ಕೆ ಬಿಂದು ಬರುತ್ತದೆಂದೂ; ಅಕಾರಾಂತ ವಿಲ್ಲದೆಡೆ ಪ್ರಥಮಾ ವಿಭಕ್ತಿಗೆ ಲೋಪವಿದೆಯೆಂದೂ ಅಕಾರಾಂತ ಪುಲ್ಲಿಂಗವಿದ್ದು ಸ್ವರ ಪರವಾದರೆ 'ನ್'ಕಾರ ಆಗಮವಾಗುತ್ತದೆಂದೂ ಹೇಳುತ್ತಾನೆ (ಸೂ. ೧೦೫). ಉದಾ : ವೇದವಿದಂ, ಕರಡಿ, ಅವನಂ.

6.7.*.1 'ವರ್' ಪ್ರತ್ಯಯವೆಂದು ಅವನು ಹೇಳಿದ್ದರೂ ಇದು ಎಲ್ಲಿಡೆ ಇದ್ದಂತಿಲ್ಲ. ಅರಸು ಇದು ಅರಸಂ ಆಗುವುದಿಲ್ಲ. ಅಳಿಯ ಇದು ಅಳಿಯಂ ಆಗುವುದಿಲ್ಲ. ಕನ್ನಡದಲ್ಲಿ ಪ್ರಥಮಾವಿಭಕ್ತಿ ಪ್ರತ್ಯಯ ಶೂನ್ಯವಾಗಿದೆ. ಕೇಶಿರಾಜನು ಅದನ್ನು ಸ್ಥಾಪಿಸಲು ಪ್ರಯತ್ನಿಸಿರುವನಷ್ಟೇ [ನೋಡಿ ಕನ್ನಡ ಕೈಪಿಡಿ ಪು. ೩೬೩ (೧೯೬೯)]. ಲಿಂಗ, ಅರ್ಥ, ವಚನ ಹಾಗೂ ಸಂಬೋಧನೆಯಲ್ಲಿ ಪ್ರಥಮಾ ಇರುತ್ತದೆ. (ಸೂ. ೧೩೭). ಲಿಂಗವೆಂದರೆ ವಸ್ತುವಿನ ಕುರುಹು, ಅರ್ಥ –ಭಾವವಿಶೇಷ, ವಚನ –ಗಣನೆ, ಸಂಬೋಧನೆ ಅಭಿಮುಖೀಕರಣಗೊಳಿಸುವಿಕೆ.

6.7.*.2 ದ್ವಿತೀಯಾ ವಿಭಕ್ತಿಯಲ್ಲಿ ಅಕಾರಾಂತ ನಪುಂಸಕಲಿಂಗಕ್ಕೆ ಮ್, ನ್ ಕಾರಗಳು ಬರುತ್ತವೆ. ಸಂಸ್ಕೃತದಲ್ಲಿ 'ಮ್' ಮಾತ್ರ ಬರುತ್ತದೆ. (ಸೂ. ೧೧೭) ಎನ್ನುತ್ತಾನೆ. ಉದಾ : ಬೆಟ್ಟಮಂ, ಬಳಗಮಂ, ಪೊಲನಂ, ನೆಲನಂ, ಸಂಸ್ಕೃತಕ್ಕೆ ಕುಲಮಂ, ಚಲಮಂ, ದ್ವಿತೀಯಾ ವಿಭಕ್ತಿ—ಕರ್ಮ, ನಿರ್ವರ್ತ್ಯ, ವಿಕಾರ್ಯ, ಪ್ರಾಪ್ಯ ಹಾಗೂ ವೈಷಯಿಕ—ಹೀಗೆ ಐದು ಬಗೆಯ ಅರ್ಥಗಳಲ್ಲಿ ಬರುತ್ತದೆ (ಸೂ.೧೩೮). ಉದಾ : ೧. ತುಡಿಗೆಯಂ ತೊಟ್ಟಂ, ೨. ಮನೆಯಂ ಮಾಡಿದಂ, ೩. ಕಾಯಂ ಪೋೞ್ದಂ, ೪. ಮನೆಯಂ ಸಾರ್ದಂ, ೫. ನಲ್ಲಳನಪ್ಪಿದಂ. ಇದಲ್ಲದೆ ಇಷ್ಟ, ಅನಿಷ್ಟ, ಕಾಲಪಥ ಈ ಅರ್ಥವಿದ್ದಾಗಲೂ ದ್ವಿತೀಯೆ ಬಳಕೆಗೊಳ್ಳುತ್ತದೆ. (ಸೂ. ೧೩೯). ಉದಾ : ನೇವಳಮಂ ತೆಗೆದಂ, ಪಾವಂ ದಾಂಟಿದಂ, ಆಱುದಿಂಗಳಂ ತಳ್ವಿದಂ, ಮಾಗಾವುದಮಂ ನಡೆದಂ.

ಕೇಶಿರಾಜನು 'ಅಮ್' ಪ್ರತ್ಯಯವನ್ನು ದ್ವಿತೀಯೆಗೆ ಹೇಳಿದ್ದರೂ ಪ್ರಾಯಶಃ ಅದು ಅನ್‌ದಿಂದ ರೂಪುಗೊಂಡಿರಬಹುದಾಗಿದೆ (ನೋಡಿ ಕನ್ನಡ ಕೈಪಿಡಿ ಪು.೩೬೪) (೧೯೬೯).

6.7.*.3 ತೃತೀಯಾವಿಭಕ್ತಿ ಕರ್ತೃಕರಣ ಹಾಗೊ ಹೇತುವಿನಲ್ಲಿ ಬರುತ್ತದೆ (ಸೂ.೧೩೯ . ಉದಾ : ಕಾವ್ಯಮೆನ್ನಿಂ ಪೇೞಿಪಟ್ಟುದು, ಕೊಡಲಿಯಿಂ ಕಡಿದಂ ಓಲಗದಿಂ, ಪಡೆದಂ, 'ಇಮ್' ಪ್ರತ್ಯಯವಲ್ಲದೆ ಇಂದಂ ಇಂದೆ ಎಂಬ ಪ್ರತ್ಯಯಗಳೂ ತೃತೀಯಾಕ್ಕಿವೆ (ಸೂ. ೧೧೭). ಉದಾ : ಭಯದಿಂದ, ಅಳ್ಕೆಗಳಿಂದೆ ಇವುಗಳಿಗೆ ಎಕಾರಾದೇಶವೂ ಆಗಬಹುದು. ಕ್ರಮದೆ, ನಯದೆ ಇತ್ಯಾದಿ, ಆದರೆ ಈ 'ಎ' ಯನ್ನು ಕೆಲವರು ಸಪ್ತಮಿಯಲ್ಲಿ (ಕೈಪಿಡಿ. ಪು. ೩೬೫)

ಸೇರಿಸಿದ್ದಾರೆ. ತೃತೀಯಾವಿಭಕ್ತಿಗೆ 'ಇನ್' ಪ್ರತ್ಯಯವೂ (ಹೆಚ್ಚಾಗಿ ಸ್ವರದ ಪರಿಸರದಲ್ಲಿ) ದೊರೆಯುತ್ತದೆ. 'ಇವರ್' ಕ್ಕಿಂತ 'ಇನ್' ಇಟ್ಟುಕೊಳ್ಳುವುದೇ ಉಚಿತವೆಂದು ಕೈಪಿಡಿಕಾರರು ಅಭಿಪ್ರಾಯಿಸಿದ್ದಾರೆ. ಕೇಶಿರಾಜನು ಉ, ಋ, ಎ, ಔ, ಸ್ವರಗಳಿದ್ದಾಗ 'ಇನ್' ಆಗಮವೆಂದು ಪ್ರತ್ಯೇಕವಾಗಿ ಹೇಳಿದ್ದಾನೆ (ಸೂ. ೧೧೮). ಉದಾ ; ತಳಿರ್ವಾಸಿನಿಂದೆ, ಪಿತೃವಿನ, ಪುತ್ರಿನ, ಗೌವಿನ, ಇನಾಗಮದ ಬಗೆಗೆ ಅವನು ಹೇಳಿದ ಇತರ ವಿಷಯಗಳು ತೃತೀಯೆಗೆ ನೇರವಾಗಿ ಸಂಬಂಧಿಸಿರುವುದಿಲ್ಲ.

6.7.*.4 ಚತುರ್ಥೀವಿಭಕ್ತಿ ಸಂಪ್ರದಾನಕಾರಕಾರ್ಥದಲ್ಲಿ ರುಚಿ, ಈರ್ಷೆ, ಮತ್ಸರ, ಹಿತ, ಭೀತಿ, ಉನ್ನತಿ, ಸ್ವಭಾವ, ಕಾರಣ, ನಮಸ್ಕಾರ, ಅನಾದರ, ನೆನಹು, ಅನಿಷ್ಟ, ಸಾದೃಶ್ಯ, ಪ್ರತಿನಿಧಿ, ಇಷ್ಟ--ಈ ಅರ್ಥವುಳ್ಳ ಶಬ್ದಗಳಲ್ಲಿ ಬಳಕೆಗೊಳ್ಳುತ್ತದೆ. (ಸೂ. ೧೪೧). ಉದಾ ; ಬ್ರಹ್ಮಣಂಗೆ, ಕೂಸಿಂಗೆ, ಕವಿಗೆ, ಸವತಿಗೆ, ಪಸುವಿಂಗೆ, ಪಾಪಕ್ಕೆ, ಪುಲಿಗೆ, ಲೋಕಕ್ಕೆ, ಜಗಕ್ಕೆ, ಸಿಂಹಕ್ಕೆ, ಮಳೆಗೆ, ದೇವರ್ಗೆ, ಪುಲ್ಗೆ, ಆತಂಗೆ, ತುಪ್ಪಕ್ಕೆ, ಕೆಳೆಯಂಗೆ

ಕೇಶಿರಾಜನು ಇವುಗಳ ಮುಂದಿರುವ ವಾಕ್ಯಭಾಗದ ಅರ್ಥವನ್ನನುಸರಿಸಿ ಹೀಗೆ ೧೪-೧೬ ಬಗೆಯಲ್ಲಿ ಚತುರ್ಥಿಯನ್ನು ವರ್ಗೀಕರಿಸಿದ್ದು ಸಮಂಜಸವಲ್ಲ.

ಅಕಾರಾಂತ ಪುಲಿಂಗವಿದ್ದರೆ ಚತುರ್ಥಿ 'ಗೆ' ಪ್ರತ್ಯಯಕ್ಕೆ ಮುನ್ನ ಬಿಂದು ಬರುತ್ತದೆ. ಅಕಾರಂತ ನಪುಂಸಕಲಿಂಗವಿದ್ದರೆ (ವಿಕಲ್ಪವಾಗಿ) ಪ್ರತ್ಯಯವು ದ್ವಿತ್ವವಾಗುತ್ತದೆ. ಅಕಾರಾಂತವಿಲ್ಲದ ಸ್ವರ ಹಾಗೂ ವ್ಯಂಜನಾಂತಗಳಿಗೆ ಚತುರ್ಥಿ ಪ್ರತ್ಯಯ ಲಿಂಗ-ವಚನ ಪರಿಗಣನೆಯಿಲ್ಲದೆಯೆ 'ಗೆ' ಎಂದಾಗುತ್ತದೆ. ಉದಾ : ಅರಸಂಗೆ, ಬನಕೆ, ಕವಿಗೆ, ನಿನಗೆ, ಕಿವಿಗಳ್ಗೆ.

ಸಂಸ್ಕೃತದ ಪುಂ, ಸ್ತ್ರೀಲಿಂಗದ ಬಹುವಚನಗಳಿಗೆ ಪ್ರತ್ಯಯ ದ್ವಿತ್ವವಾಗುವಿಕೆ ವಿಕಲ್ಪವೆಂದು (ಸೂ. ೧೩೫) ಹೇಳಿರುವುದರಲ್ಲಿ ಅರ್ಥವಿಲ್ಲ. ಕೇಶಿರಾಜನು ಕೆ (ಕ್ಕೆ) ಗೆ (ಗ್ಗೆ), ಜ್‌ಗೆ ಎಂಬುವುಗಳನ್ನು ಚತುರ್ಥಿಗೆ ಪ್ರತ್ಯಯಗಳೆಂದು ಹೇಳಿರುವನು.

6.7.*.5. ಅಪಾದಾನ ಕಾರಕದಲ್ಲಿ ಪಂಚಮೀ ಬರುತ್ತದೆ. ಭಯ, ಸ್ವೀಕಾರ, ಇಷ್ಟಾನಿಷ್ಟ, ಹೇತು, ಉದಯ, ಗುರುತ್ವದಲ್ಲಿ ಇದು ವರ್ತಿಸುತ್ತದೆ (ಸೂ. ೧೪೨) ಇದಕ್ಕೆ 'ಅತ್ತಣಿಂ' ಪ್ರತ್ಯಯವಿದೆ. ಮತ್ತೊಂದೆಡೆ ಸೂ. ೧೨೬) 'ಅಲ್' ಎಂಬ ಪಂಚಮಿ ಪ್ರತ್ಯಯವನ್ನು 'ಅತ್ತಣಿಂ' ಎಂದು ನಿರ್ಮಿಸುವರೆಂದು ಹೇಳಿದ್ದಾನೆ.

'ಅತ್ತಣಿಂ' ಅತ್ತಣಿಂದ. ಅತ್ತಣಿಂದೆ ಎಂದು ತೃತೀಯವನ್ನಾಗಿ ಮಾಡಿ ಪ್ರಯೋಗಿಸುತ್ತಾರೆನ್ನುತ್ತಾನೆ. ಇಲ್ಲಿ 'ಅತ್ತಣ್'ಕ್ಕಿಂತ 'ಇಂದ' ಪ್ರತ್ಯಯವೇ ಮುಖ್ಯವಾಗಿದೆ. ತೃತೀಯಾ ಪಂಚಮೀ ಒಂದೇ ಪ್ರತ್ಯಯದಿಂದ ವರ್ತಿಸುತ್ತವೆ. ವಾಸ್ತವವಾಗಿ ಪಂಚಮೀ ಹಾಗೂ ತೃತೀಯಾಗಳಿಗೆ ಬೇರೆ ಬೇರೆ ಕಾರಕಾರ್ಥ ಇರುವುದರಿಂದ ಅವೆರಡನ್ನೂ ಪ್ರತ್ಯೇಕವಾಗಿಯೇ ಪರಿಗಣಿಸತಕ್ಕದ್ದು. ಪಂಚಮೀ ವಿಭಕ್ತಿ ಇಲ್ಲ ಎನ್ನುವುದು ಪೂರ್ಣ ತಪ್ಪಾಗುತ್ತದೆ. ಕೇಶಿರಾಜ ಕೊಟ್ಟಿರುವ ಅಲ್ ಅಥವಾ ಇಂದ ಪ್ರತ್ಯಯಗಳೇ ಪಂಚಮೀ ಅರ್ಥದಲ್ಲಿ ವರ್ತಿಸುತ್ತಿವೆ. ಸಂದರ್ಭ, ಅರ್ಥ ತಿಳಿದುಕೊಂಡು ವಿಭಕ್ತಿಯನ್ನು ನಿರ್ಧರಿಸಬೇಕು. ಒಂದೇ ರೂಪವುಳ್ಳ ಭಿನ್ನ ಬದ್ಧ ಆಕೃತಿಮಾಗಳು ಇವಾಗಿವೆ. (ನೋಡಿ 6.7.5.2)

### 6.7.೫.6 ಷಷ್ಠೀ :

ಸಂಬಂಧದಲ್ಲಿ ಷಷ್ಠೀ ಬರುತ್ತದೆ. ಅದು ಸ್ವಾಮಿ, ಕುಲ, ಜಾತಿ, ಅವಯವ, ಲಕ್ಷಣ, ಸನ್ನಿಧಾನ, ಸಂಸ್ಪರ್ಶ, ಸಂಬಂಧ ಇತ್ಯಾದಿ ಯಾವುದೇ ಸಂಬಂಧವಿರಬಹುದು. ಉದಾ : ಊರೊಡೆಯು, ಎಮ್ಮ ಸೊಮ್ಮು, ಗಿಳಿಯ ಪಿಂಡು, ಕೊಡೆಯ ಕಾವು, ಸಿಂದದ ಕುದುರೆ, ಊರುಮುಂದು, ತೋಳಬಂದಿ, ನೊಸಲಕಣ್ಣದೇವಂ.

ಕೆಲವರು ಷಷ್ಠೀ 'ಅ' ಪ್ರತ್ಯಯವನ್ನು ದೀರ್ಘಿಸುತ್ತಾರೆ. ಆ ದೀರ್ಘ ಖೇದದಲ್ಲಿ ಸಂಭ್ರಮದಲ್ಲಿ ಪ್ರಯೋಗಿಸಲ್ಪಡುತ್ತದೆ. ಉದಾ . ಮೃಡನಾ, ಗಂಗಾಧರನಾ....ಬೆಡಗಾಡಾ ಇಲ್ಲಿ ಖೇದ ಸಂಭ್ರಮದಲ್ಲಿ ಪ್ರಯೋಗಿಸುವ 'ಆ' ಷಷ್ಠೀ ಆಗುತ್ತದೆಯೇ ? ಎಂಬುದು ಸಂದೇಹ.

### 6.7.೫ 7 ಸಪ್ತಮೀ :

ಅಧಿಕರಣಕಾರಕದಲ್ಲಿ ಸಪ್ತಮೀ, ಇದು ನಿರ್ಧಾರಣ, ವಿಷಯ, ವ್ಯಾಪಕ, ವ್ಯವಹಾರ ಕಾಲ, ಸತ್ಯರ್ಥಗಳಲ್ಲಿ ವರ್ತಿಸುತ್ತದೆ. (ಸೂ. ೧೪೪). 'ಅಲ್ಲಿ' 'ಒಳ್' ಪ್ರತ್ಯಯಗಳು ಇದಕ್ಕೆ ಇವೆ. ದಿಗ್ವಾಚಿಯಾದ ಆಕಾರಾಂತದ ಮೇಲೆ ಒಮ್ಮೊಮ್ಮೆ 'ಅಲ್' ಹಾಗೂ ಉಕಾರಾಂತ ದಿಗ್ವಾಚಿಗಳಿಗೆ 'ಎ' ತ್ವವು ಬರುತ್ತದೆ. ಉದಾ : ಕೊಳದೊಳ್, ಕೊಳದಲ್ಲಿ, ಮೂಡತೆಂಕಬಡಗ ಪೊಡವಿಪತಿಗಳ್ಗೆನಲ್..........
(ಮೂಡಲ್, ತೆಂಕಲ್....ಇತ್ಯಾದಿ ವಿಕಲ್ಪ), ಒಳಗು-ಒಳಗೆ, ಪೊಱಗು-ಪೊಱಗೆ.

ನಾಗವರ್ಮನು ಹೇಳದ ಸತಿ ಸಪ್ತಮಿಯ ಬಗ್ಗೆ ಕೇಶಿರಾಜ ನಾಲ್ಕು ಸೂತ್ರಗಳಲ್ಲಿ ವಿಶೇಷವಾಗಿ ಹೇಳಿ ಅದು ಕನ್ನಡದ ಅಸಾಧಾರಣ ಲಕ್ಷಣಗಳಲ್ಲೊಂದು

ಎಂದಿರುವನು. ಆದರೆ ಸಪ್ತಮೀ 'ಅಲ್' ಪ್ರತ್ಯಯ ಸತ್ಯರ್ಥದಲ್ಲಿ ಬಳಕೆಗೊಳ್ಳುವಾಗ ಕ್ರಿಯಾಪದಕ್ಕೆ ಅನ್ವಯವಾಗುತ್ತದೆ. ಅಲ್ಲದೆ ಅದು ಬಳಕೆಯಾದ ವಾಕ್ಯದಲ್ಲಿ ಎರಡು ಕರ್ತೃಗಳಿರುತ್ತವೆ. ಕ್ರಿಯಾಪದಕ್ಕೆ ಯಾವುದು ಅನ್ವಯವಾಗುತ್ತದೆಯೋ ಅದು ಆಖ್ಯಾತ ಪ್ರತ್ಯಯವೆನಿಸುತ್ತದೆ. ವಿಭಕ್ತಿ ಪ್ರತ್ಯಯವೆನಿಸುವುದಿಲ್ಲ. 'ಅಲ್' ಪ್ರತ್ಯಯ ಅನ್ವಯವಾದ ವಾಕ್ಯಖಂಡವು ಇಡೀ ವಾಕ್ಯದಲ್ಲಿ ಮುಖ್ಯವಾಗಿರುವುದಿಲ್ಲ. ಮುಖ್ಯ ವಾಕ್ಯದ ಕರ್ತೃವಿಗೆ 'ಅಲ್' ಹತ್ತುವುದಿಲ್ಲ. ಉದಾ : ಪಾವಸೆ ಕಿಡಲ್ ನೀರ್ ತಿಳಿದುದು, (ಇಲ್ಲಿ ಕಿಡಲೊಂಡಂ ಬಳಸುವುದು ಸೂಕ್ತವೆಂಬುದು ಕೇಶಿರಾಜನ ಅಭಿಮತ. ಆದರೆ ಅದಕ್ಕೆ ಮಹತ್ವವಿಲ್ಲ.) ಇಲ್ಲಿ ನೀರ್ ತಿಳಿದುದು ಮುಖ್ಯವಾಕ್ಯ.

'ಅಲು', 'ರೆ', 'ಒಡನೆ', 'ಎ', 'ಅಷ್ಟರಲ್ಲಿ', "ವರೆಗೆ"; ಮುಂತಾದವು ನಿಬದ್ಧ (conditioned) ಕ್ರಿಯಾ ರೂಪಗಳನ್ನು ರೂಪಿಸುವ ಬದ್ಧಾಕೃತಿಮಾಗಳಾಗುತ್ತವೆ. ಉದಾ : ನೀನು ಬರಲು ಅವಳು ಎದ್ದಳು. ನೀನು ಬಂದರೆ ಅವಳು ಬಂದಾಳು. ನೀನು ಬಂದೊಡನೆ ಅವಳು ಹಾಡುತ್ತಾಳೆ. ಅವಂ ಬರೆ ಅವಳ್ ಪಾಡಿದಳ್, ನೀನು ಬರುವಷ್ಟರಲ್ಲಿ ಅವಳು ಬರುತ್ತಾಳೆ. ನೀನು ಬರುವವರೆಗೆ ಅವಳು ಬಾರಳು. ಇತ್ಯಾದಿ. ಇಂತಹವು ಯಾವುದೇ ಭಾಷೆಯಲ್ಲಿ ಇರಬಹುದಾದ ರೂಪಗಳು. ಆದ್ದರಿಂದ ಇವುಗಳನ್ನು ಕನ್ನಡದ ಅಸಾಧರಣ ಲಕ್ಷಣ ಎಂದೆನ್ನಲು ನಮ್ಮ ಸಮ್ಮತವಿಲ್ಲ.

**6.7.*.8 ಸಂಬೋಧನೆ :**

ಸಾಮಾನ್ಯವಾಗಿ ಪ್ರಥಮಾ ಏಕವಚನ ಲೋಪವಾಗಿ ಸಂಬೋಧನವಾಗುತ್ತದೆ. ಹ್ರಸ್ವ, ದೀರ್ಘಗಳೂ ಬಳಕೆಗೊಳ್ಳಬಹುದು. ಉದಾ : ಕೇಳ ಮಾಧವ, ಎಲೆ ಗಣಪ, ಜಿನೇಂದ್ರಾ. ಏ ಅಥವಾ ಎ ಸಂಬೋಧನೆಗೆ ಬಳಕೆಯಾಗುತ್ತದೆ. ಅಕರಾಂತವಿದ್ದಲ್ಲಿ ಬಿಂದು ಬರುತ್ತದೆ. ಉದಾ : ಕೊಳನೇ. ಒಮ್ಮೊಮ್ಮೆ ದೀರ್ಘವಿಲ್ಲ. ಉದಾ : ಎಲೆತುಂಬಿ.

ಸಂಬೋಧನ ವಿಭಕ್ತಿಗೆ ಕಾರಕವಿಲ್ಲ. ಆದ್ದರಿಂದ ಇದು ವಿಭಕ್ತಿಯಲ್ಲ.

**6.8 ಕನ್ನಡ ನಾಮ ಪ್ರತ್ಯಯಗಳು :** ತದ್ಧಿತ ಪ್ರತ್ಯಯ

6.8.0 ಪ್ರತ್ಯಯಗಳನ್ನು ಹಚ್ಚಿ ಪ್ರಕೃತಿಗಳನ್ನು ನಾಮಗಳಾಗಿ ರೂಪಿಸುವುದು ಕನ್ನಡದಲ್ಲಿ ಸಹಜ. ನಾಮರೂಪಗಳನ್ನು ಸಿದ್ಧಿಸುವ ಪ್ರತ್ಯಯಗಳಿಗೆ ತದ್ಧಿತ

ಪ್ರತ್ಯಯಗಳೆಂದು ಕರೆಯುತ್ತಾರೆ. ಕನ್ನಡ ನಾಮಪಕೃತಿಗಳಿಗೆ ಹತ್ತುವ ಪ್ರತ್ಯಯಗಳು ಈ ಕೆಳಗಿನಂತಿವೆ :

ಈ ಕೆಳಗೆ ಕಾಣಿಸಿದಂತೆ ನಾಲ್ಕು ರೀತಿಯಲ್ಲಿ ನಾಮಪದಗಳು, ರೂಪಿತಗೊಳ್ಳುತ್ತವೆ.—

೧. ನಾಮಪ್ರಕೃತಿ+ತದ್ಧಿತ ಪ್ರತ್ಯಯ=ನಾಮಪದ. ಕನ್ನಡ+ಇಗ=ಕನ್ನಡಿಗ.
೨. ವಿಶೇಷಣ+ತದ್ಧಿತಪ್ರತ್ಯಯ=ನಾಮಪದ ತಣ್ +ಪು=ತಂಪು.
೩. ಕ್ರಿಯಾ ಪ್ರಕೃತಿ+ತದ್ಧಿತಪ್ರತ್ಯಯ=ನಾಮಪದ (ಸಾಧಿತ). ಹಿಡಿ+ಕೆ=ಹಿಡಿಕೆ.
೪. ನಾಮಪ್ರಕೃತಿ+ನಾಮಪ್ರಕೃತಿ=ನಾಮಪದ. ಬಾನ್+ಉಲಿ=ಬಾನುಲಿ.

### 6.8.1 ಪುಲ್ಲಿಂಗಸೂಚಕ ಪ್ರತ್ಯಯಗಳು :

–ಇಗ, –ವಂತ, –ಅಡಿಗ, –ಆಳಿ, –ಕಾರ/ಗಾರ/ಆರ, – ಮುಕ್ಕ, –ಗುಳಿಗ, –ಕುಟಿಗ, –ಅಟಿಗ, –ವಣಿಗ, –ಇಲ, –ಕ,–ಗುಳಿ, –ವಳ, –ಗುಣಿ, –ಅ.

ಉದಾ : ಅಕ್ಕಸಾಲಿಗ, ಕನ್ನಡಿಗ, ತೋಟಿಗ; ಹಣವಂತ, ಬುದ್ಧಿವಂತ, ಹಾವಾಡಿಗ; ಓದಾಳಿ, ಮಾತಾಳಿ, ವಾಚಾಳಿ; ಕಂಚಗಾರ, ಕಮ್ಮಾರ, ಬೇಹುಕಾರ, ಮಾಲೆಗಾರ, ಬೆಳೆಗಾರ, ಕುಂಬಾರ; ಹಳ್ಳಿಮುಕ್ಕ, ಮಣ್ಣಮುಕ್ಕ; ಮರಕುಟಿಗ, ಕಲ್ಕುಟಿಗ. ಮಾವಟಿಗ, ಮದುವಣಿಗ, ಗಾವಿಲ; ಹುಸಿಕ, ಬಡಕ, ಮನೆಮುರುಕ, ಮುದುಕ, ಕಟುಕ; ಅಂಜುಗುಳಿ, ಲಂಚಗುಳಿ, ಮರಗುಳಿ; ಮಡಿವಳ, ತುಡುಗುಣಿ; ಬಡವ, ಚಲುವ, ಬಲ್ಲಿದ.

### 6.8.2 ಸ್ತ್ರೀಲಿಂಗಸೂಚಕ ಪ್ರತ್ಯಯಗಳು :

–ಎ, –ಇ, (ಇ) –ನಿ, –ಸಿತಿ(ಇತ್ತಿ), –ಗಿತ್ತಿ, –ಳು, –ತಿ, –ಣಿ, –ಕಾರ್ತಿ (ಗಾರ್ತಿ)

ಉದಾ—ವಿಮಲೆ, ಸೀತೆ, ಜಾರೆ, ಜಾಣೆ; ಹುಡುಗಿ, ತುಡುಗಿ, ಶಿಕ್ಷಕಿ, ಬೆಡಗಿ, ಸಿಡುಮೂಗಿ, ಕುಂಟಿ, ಉಪಾಧ್ಯಾಯಿನಿ,ವಿದ್ಯಾರ್ಥಿನಿ, ಮಹಾರ್ರಾಯಿತಿ,ಜೋಯಿತಿ, ಗಾಣಗಿತ್ತಿ, ಒಕ್ಕಲಗಿತ್ತಿ, ಹಾದರಗಿತ್ತಿ; ಕಿರಿಯಳು, ಇನಿಯಳು, ಮಾಸ್ತರತಿ, ಹೊಲತಿ; ಮಾಸ್ತರಣಿ, ಕುಂಟಣಿ, ಸರ್ಪಿಣಿ, ಮಾತುಗಾರ್ತಿ, ಬಳೆಗಾರ್ತಿ.

### 6.8.3 ನಪುಂಸಕಲಿಂಗಸೂಚಕ ಪ್ರತ್ಯಯಗಳು :

–ಪು, –ವಿ(ವೆ), –ತನ, –ಇಕೆ, –ಕೆ, –ಣ, –ಅನೆಯ, –ಮೆ, –ತೆ, –ಆಟ, –ಆಟಿಕೆ, –ಗಿರಿ, –ಸ್ತನ, –ಸ್ತಿಕೆ.

ಉದಾ : ಪಡೆಪು, ಪೆಂಪು, ಪೆರ್ಮೆ, ಕೆಂಪು; ಬಳವಿ, ಅಳವಿ; ಮರವೆ, ಪರವೆ, ಸಿರಿತನ, ಕಲಿತನ, ಮನೆತನ, ಬಾಳ್ವಿಕೆ, ಬೇಸರಿಕೆ, ಮೂಸ್ತ್ರಿಕೆ, ಉನ್ನತಿಕೆ, ಕಾಣಿಕೆ, ತೆಂಕಣ, ಬಡಗಣ, ಸುತ್ತಣ, ಹತ್ತನೆಯ, ನೂರನೆಯ, ಒಲ್ಮೆ, ಹಿರಿಮೆ, ಒಪ್ಪೆ, ಜಾಣ್ಮೆ, ನೆಗಳ್ತೆ ಶಾಬಾಶ್‌ಗಿರಿ, ಗುಲಾಮಗಿರಿ, ದೊಡ್ಡಸ್ತನ, ನೆಂಟಸ್ತನ, ದೊಡ್ಡಸ್ತಿಕೆ, ಹುಡುಗಾಟಿಕೆ, ನಗಚಾಟಿಕೆ; ಹುಡುಗಾಟ, ತಿಕ್ಕಾಟ.

6.8.4 ಪುಲ್ಲಿಂಗ ಹಾಗೂ ಸ್ತ್ರೀಲಿಂಗಪೆರಡಕ್ಕೂ ಸಾಮಾನ್ಯವಾಗಿರುವ ನಾಮ ಗಳನ್ನು 'ಇ' ಎಂಬ ಪ್ರತ್ಯಯ ನಿರ್ಮಿಸುತ್ತದೆ. ಉದಾ : ದಾನ→ದಾನಿ. ಸದ್ಗುಣ→ಸದ್ಗುಣಿ, ಗಮಕ→ಗಮಕಿ.

6.8.5 ಕೆಲವು ಸಂಬಂಧವಾಚಿ ನಾಮಗಳು ತದ್ಧಿತ ಪ್ರತ್ಯಯಗಳಂತೆ ವರ್ತಿಸುತ್ತವೆ.

ಉದಾ : ಅಯ್ಯ→ಹೂವಯ್ಯ, ಅಪ್ಪ→ನಾಗಪ್ಪ, ಅಜ್ಜ→ಕಲ್ಲಜ್ಜ, ಅಣ್ಣ→ಸಂಗಣ್ಣ, ಅಮ್ಮ→ಗುಡ್ಡಮ್ಮ, ಅವ್ವ→ನಾಗವ್ವ, ಅಜ್ಜಿ→ತುಂಗಜ್ಜಿ. ಅಕ್ಕ→ಸಾವಕ್ಕ.

6.8.3.1 ಧಾತುಗಳಿಗೆ ಕೆಲವು ಪ್ರತ್ಯಯಗಳನ್ನು ಹಚ್ಚುವುದರಿಂದ ನಾಮಪದಗಳು ಸಿದ್ಧಿಸುತ್ತವೆ. ಆ ನಾಮಪದಗಳನ್ನು ಸಾಧಿತನಾಮಗಳೆನ್ನುತ್ತಾರೆ.

ನಡೆ+ತೆ> ನಡತೆ (ತೆ)    ನಗು+ಎ> ನಗೆ (ಎ)
ಕುಂಟು+ಅ> ಕುಂಟ (ಅ)    ಬೆರೆ+ಕೆ> ಬೆರಕೆ (ಕೆ)
ನಂಬು+ಇಕೆ> ನಂಬಿಕೆ (ಇಕೆ)    ಸುಲಿ+ಗೆ> ಸುಲಿಗೆ (ಗೆ)
ತುಳಿ+ತ> ತುಳಿತ (ತ)    ಮರೆ+ಉ> ಮರೆವು (ಉ)
ತಿನ್+ಡಿ> ತಿಂಡಿ (ಡಿ)

6.8.3.2 ಕೆಲವು ನಾಮಪದಗಳು ಅಂತರಿಕ ಬದಲಾವಣೆಯಿಂದ ಸಿದ್ಧಿಸುತ್ತವೆ.

ಉದಾ : ಇಡು> ಈಡು    ಕೆಡು> ಕೇಡು    ಆಡು> ಆಟ
ನೋಡು> ನೋಟ    ಓಡು> ಓಟ    ಮಾಡು> ಮಾಟ

6.8.3.3 ನಾಮಗಳಿಗೆ ವಿಶೇಷಣವಾಗುವ ಕೃದಂತ ಹಾಗೂ ನಿಷೇಧವನ್ನು ಸೂಚಿಸುವ ರೂಪಗಳಿಗೆ ಕೆಲವು ಪ್ರತ್ಯಯಗಳು ಹತ್ತುತ್ತವೆ.

ಉದಾ : "ಅ"

6.8.3.3.1 ಸೀತೆಯ ಪತಿ, ಅಣ್ಣನ ಬಾಯಿ

ಇಲ್ಲಿ ಪತಿ, ಬಾಯಿ ನಾಮಗಳಿಗೆ ಸೀತೆ, ಅಣ್ಣ, ವಿಶೇಷಣಗಳಾಗಿವೆ. ಅವು ವಿಶೇಷಣಗಳಾಗಲು "ಅ" ಪ್ರತ್ಯಯ ಹತ್ತಿದೆ.

6.8.3.3.2 ನೋಡಿದ ಸಿನೆಮಾ, ಆಡಿದ ಆಟ, ಓದಿದ ಪುಸ್ತಕ, ನೋಡುವ ಕಣ್ಣು, ಓಡದ ನಾಯಿ, ಸಿಕ್ಕದ ಬಸ್ಸು ಇಂಥವುಗಳಲ್ಲಿ—

ಧಾತು + [ಇದ್ / ಉವ್ / ಅದ್] + ಅ= ವಿಶೇಷಣರೂಪ ಅಥವಾ ನಿಷೇಧರೂಪ.

ಈ ಬಗೆಯಾಗಿ ಬದಲಾವಣೆ ನಡೆಯುತ್ತವೆ.

## 6.8.4 ಕನ್ನಡ ಕ್ರಿಯಾಪ್ರತ್ಯಯಗಳು :

ಕ್ರಿಯಾಪ್ರತ್ಯಯಗಳನ್ನು ೧. ಪ್ರೇರಣಾರ್ಥಕ ೨. ಕಾಲವಾಚಕ ೩. ವಿಧ್ಯರ್ಥಕ ೪. ನಿಷೇಧಕ ಎಂದು ವಿಂಗಡಿಸಬಹುದು.

6.8.4.1 ಕಾಲವಾಚಕ ಪ್ರತ್ಯಯಗಳು—

6.8.4.1.1 ವರ್ತಮಾನಕಾಲ ಪ್ರತ್ಯಯ—ಉತ್ತ್[೧]

ಉದಾ : ಬರ್+ಉತ್ತ್+ಆನೆ> ಬರುತ್ತಾನೆ.
ಓಡು+ಉತ್ತ್+ಆಳೆ> ಓಡುತ್ತಾಳೆ.
ಬರ್+ಉತ್ತ್+ಆರೆ> ಬರುತ್ತಾರೆ.
ನೆಕ್+ಉತ್ತ್+ಅದೆ> ನೆಕ್ಕುತ್ತದೆ.

6.8.4.1.2 ಭೂತಕಾಲ ಪ್ರತ್ಯಯ :
ಇದ್ ~ ದ್ ~ ತ್

6.8.4.1.2.1 —ಇದ್—
ಬೇಡ್+ಇದ್+ಅನು> ಬೇಡಿದನು
ತಂಗ್+ಇದ್+ಇನು> ತಂಗಿದನು

---

೧. ಕೇಶಿರಾಜನು ಇದಕ್ಕೆ ಉತಂ,ಉತ್ತಂ, ಉತ್ತೆ,ಉತೆ, ಎಂಬ ನಾಲ್ಕು ರೂಪಗಳು ಇವೆಯೆಂದು ಹೇಳಿದ್ದಾನೆ (ಸೂ. ೨೪೭)

ಕಟ್+ಇದ್+ಅನು> ಕಟ್ಟಿದನು
ಓದ್+ಇದ್+ಅನು> ಓದಿದನು
ಬೆರಸ್+ಇದ್+ಅನು> ಬೆರಸಿದನು

6.8.4.1.2.2 —ದ್—

ಸರಿ+ದ್+ಅನು> ಸರಿದನು
ದಣಿ+ದ್+ಅನು> ದಣಿದನು
ಹಾಯ್+ದ್+ಅನು> ಹಾಯ್ದನು.

-ದ್- ಪ್ರತ್ಯಯ ಹತ್ತುವಾಗ ಕೆಲವು ಧಾತ್ತುಗಳು ರೂಪಾಂತರ ಪ್ರಕ್ರಿಯೆಗೆ ಒಳಗಾಗುತ್ತವೆ.

ಧಾತುವಿನ ಅಂತ್ಯವ್ಯಂಜನ ಲೋಪ :

ಆಗ್+ದ್+ಅನು> ಆದನು
ಹೋಗ್+ದ್+ಅನು> ಹೋದನು

ಧಾತುವಿನ ಅಂತ್ಯವ್ಯಂಜನ ಬದಲಾವಣೆ—

ಧಾತು ಳ್, ರ್, ಲ್ ಗಳಿಂದ ಅಂತ್ಯಗೊಳ್ಳುತ್ತಿದ್ದರೆ ಅಂತ್ಯವ್ಯಂಜನವು ಪ್ರತ್ಯಯದೊಡನೆ ಸಮರೂಪಧಾರಣೆಗೊಳುತ್ತದೆ.

ಬೀಳ್+ದ್+ಅನು> ಬಿದ್ದನು; ಇರ್+ದ್+ಅನು> ಇದ್ದನು;
ಗೆಲ್+ದ್+ಅನು> ಗೆದ್ದನು.

'ಣ್' ಅಂತ್ಯದಲ್ಲಿದ್ದರೆ ಪ್ರತ್ಯಯವೇ ಮೂರ್ಧನ್ಯ 'ಡ್' ಕಾರವಾಗಿ ಮಾರ್ಪಡುತ್ತದೆ.

ಕಾಣ್+ದ್+ಅನು> ಕಂಡನು.

ಧಾತುವಿನ ಮುಂದೆ 'ನ್' ಆಗಮ :—

ಬೇ+ನ್+ದ್+ಅನು> ಬೆಂದನು; ಬರ್+ನ್+ದ್+ಅನು> ಬಂದನು;
ಕೊಲ್+ನ್+ದ್+ಅನು> ಕೊಂದನು; ಕೊಳ್+ನ್+ದ್+ಅನು> ಕೊಂಡನು.

ಈ ಪ್ರತ್ಯಯಾನ್ವಯದಲ್ಲಿ ಧಾತುವಿನ ಅಂತ್ಯವ್ಯಂಜನಗಳು ಲೋಪವಾಗುತ್ತವೆ. 'ಳ್' ಇದ್ದರೆ ಪ್ರತ್ಯಯ 'ನ್ಡ್' ಆಗಿ ಪರಿವರ್ತಿತವಾಗುತ್ತದೆ. ದೀರ್ಘಸ್ವರಾಂತ್ಯ ಏಕಾಕ್ಷರ ಧಾತುವಿನ ದೀರ್ಘ ಸ್ವರ ಹ್ರಸ್ವವಾಗುತ್ತದೆ.

6.8.4.1.2.3 -ತ್-

ಸುಡ್+ತ್+ಅನು> ಸುಟ್ಟನು; ಹೋಗ್+ತ್+ಅನು> ಹೊಕ್ಕನು
ಅಳ್+ತ್+ಅನು> ಅತ್ತನು; ಉಣ್+ತ್+ಅನು> ಉಂಡನು;
ಹೊರ್+ತ್+ಅನು> ಹೊತ್ತನು; ಇ+ತ್+ಅನು> ಇತ್ತನು;
ಸೋಲ್+ತ್+ಅನು> ಸೋತನು; ಕಲಿ+ತ್+ಅನು> ಕಲಿತನು;
ಸಾಯ್+ತ್+ಅನು> ಸತ್ತನು; ಕೀಳ್+ತ್+ಅನು> ಕಿತ್ತನು-

ಇಲ್ಲಿ ಧಾತು ಏಕಾಕ್ಷರಯುಕ್ತವಾಗಿರುತ್ತದೆ. ಹ್ರಸ್ವಸ್ವರದಿಂದ ಕೂಡಿದ್ದರೆ ಈ ಕೆಳಗಿನಂತೆ ಧಾತುವ್ಯಂಜನವು ರೂಪಾಂತರಗೊಳ್ಳುತ್ತದೆ :

ಡ್ > ಟ್, ಗ್ > ಕ್, ಳ್ > ತ್, ೞ್ > ತ್.
'ಣ್' ಕಾರಾಂತವಿದ್ದರೆ— ಪ್ರತ್ಯಯವೇ ಮೂರ್ಧನ್ಯ 'ಡ್' ಕಾರವಾಗುತ್ತದೆ. ದೀರ್ಘ ಸ್ವರಯುಕ್ತ ಧಾತುವಿನಲ್ಲಿ ಅಂತ್ಯವ್ಯಂಜನವು ಲೋಪವಾಗಬಹುದು ಇಲ್ಲವೆ ದೀರ್ಘ ಸ್ವರವೇ ಹ್ರಸ್ವವಾಗಿ ಅಂತ್ಯವ್ಯಂಜನವು ಪ್ರತ್ಯಯದ ಸಮರೂಪ ಧಾರಣೆ ಮಾಡಿಕೊಳ್ಳುತ್ತದೆ.

ಕೇಶಿರಾಜನು ಭೂತಕಾಲಕ್ಕೆ ಇ, ಉ, ಪ್ರತ್ಯಯಗಳನ್ನು ಸೂಚಿಸಿದ್ದಾನೆ. (ಸೂ.೨೪೭) ನಚ್ಚಿ, ಮೆಚ್ಚಿ, ಎತ್ತಿ, ಮುತ್ತಿ, ಇತ್ಯಾದಿ. ಆದರೆ ಇವು ಅಪೂರ್ಣ ಭೂತಕಾಲ ಸೂಚಕವಾಗಿರುವದನ್ನು ಗಮನಿಸಬೇಕು.

6.8.1.4.4 ಭವಿಷತ್ಕಾಲ ಪ್ರತ್ಯಯ : 'ಉವ್'

ಮಾಡ್+ಉವ್+ಅನು> ಮಾಡುವನು ಕಾಣ್+ಉವ್+ಅನು> ಕಾಣುವನು ಸಾಯ್+ಉವ್+ಅಳು> ಸಾಯುವಳು; ಬರ್+ಉವ್+ಅದು> ಬರುವುದು.

ಕೇಶಿರಾಜನು ಗುಂ, ಕುಂ, ಎಂಬ ಪ್ರತ್ಯಯಗಳು "ಭೂತಕಾಲವೆನ್ನದೆ ಲಿಂಗತ್ರಯವೆನ್ನದೆ, ವಚನತ್ರಯವೆನ್ನದೆ" ವರ್ತಮಾನ ಹಾಗೂ ಭವಿಷತ್ಕಾಲಗಳಲ್ಲಿ ಪ್ರಥಮಪುರುಷ ಏಕವಚನದಲ್ಲಿ ಆದೇಶವಾಗುತ್ತವೆಂದು ಹೇಳಿದ್ದಾನೆ.

ಉದಾ : ಭೂತ ಭವಿಷತ್ ವರ್ತಮಾನಗಳಿಗೆ—

ಅಂದು ಮಾಡುಗುಂ; ಅಂದು ಮಾಟ್ಕುಂ; ಈಗಳ್ ಸೂಚಿಸುಗಂ; ಅವರ್ ನಾಳೆ ಕಾಣ್ಗುಂ.

ಲಿಂಗತ್ರಯಕ್ಕೆ : ಭೂವಳಯಾಧಿಪಂ ನುಡಿಗುಂ; ತಳೋದರಿ ಬಿಸುಸುಯ್ಗುಂ;
ಕೋಗಿಲೆಯುಲಿಗುಂ.

ವಚನತ್ರಯಕ್ಕೆ: ಓರ್ವನೆ ಗೆಲ್ಗುಂ ಕೀರಿಟಿ; ಇರ್ವರುಂ ನುಡಿಗುಂ;
ಮೂಱು ಕೋಣಿವ್ರಗಿಸುಗುಂ.

ಹೊಸಗನ್ನಡದಲ್ಲಿ ಈ ಪ್ರತ್ಯಯ ಬಳಕೆಯಲ್ಲಿ ಇಲ್ಲ.

### ೬.8.5 ಪ್ರೇರಣಾರ್ಥಕ ಪ್ರತ್ಯಯ :

ಕನ್ನಡದಲ್ಲಿ ಪ್ರೇರಣಾರ್ಥಕ ಪ್ರತ್ಯಯ—'ಇಸು' ಇದು ಕ್ರಿಯಾ ಇಲ್ಲವೆ ನಾಮಪ್ರಕೃತಿಗಳಿಗೆ ಹತ್ತುತ್ತದೆ. ಕ್ರಿಯಾಪ್ರಕೃತಿಯೊಡನೆ ಸೇರಿದಾಗ ಕೆಲವೆಡೆ ಪ್ರೇರಣಾರ್ಥಕವನ್ನು ನೀಡುವುದಿಲ್ಲ, ಬದಲಾಗಿ ಕೇವಲ ಕ್ರಿಯಾರೂಪವನ್ನು ಸಿದ್ಧಿಸುತ್ತದೆ.

### 6.8.5 1 ಪ್ರೇರಣಾರ್ಥಕ್ಕೆ—

ಬರೆ ಇಸು> ಬರೆಯಿಸು; ಮಾಡ್ + ಇಸು> ಮಾಡಿಸು;
ತಿನ್ + ಇಸು> ತಿನಿಸು; ಓದ್+ಇಸು> ಓದಿಸು

### 6.8.5 2 ಕ್ರಿಯಾರೂಪಕ್ಕೆ—

ಸಂಪರ್ಕ+ಇಸು> ಸಂಪರ್ಕಿಸು; ಬೇಸರ+ಇಸು> ಬೇಸರಿಸು; ನೆಲ+ಇಸು> ನೆಲಸು; ತರ್ಕ+ಇಸು> ತರ್ಕಿಸು; ಪೂಜೆ+ಇಸು> ಪೂಜಿಸು; ಕನ್ನಡ+ಇಸು> ಕನ್ನಡಿಸು; ಘಮಘಮ+ಇಸು> ಘಮಘಮಿಸು, ತುಂಡು+ಇಸು> ತುಂಡಿಸು, ಸಣ್ಣ+ಇಸು> ಸಣ್ಣಿಸು.

ಕೇಶಿರಾಜನು ಧಾತುಗಳಿಗೆ ಇಸು ಪ್ರತ್ಯಯವು ಹೇತು, ಸ್ವಯಂಕರ್ತೃ, ಅನ್ಯಕರ್ತೃ, ಪ್ರಯೋಜನವಸ್ತು ಎಂಬ ನಾಲ್ಕು ಅರ್ಥಗಳನ್ನು ಅಭಿವ್ಯಕ್ತಿಸುವಲ್ಲಿ ಬಳಕೆಯಾಗುತ್ತದೆಂದು ಹೇಳುತ್ತಾನೆ (ಸೂ.೨೪೨).

### 6.8.6 ವಿಧ್ಯರ್ಥ ಪ್ರತ್ಯಯ :

ವಿಧ್ಯರ್ಥವನ್ನು ಸೂಚಿಸುವಲ್ಲಿ 'ಅಲಿ' ಎಂಬ ಪ್ರತ್ಯಯ ಧಾತುಗಳಿಗೆ ಅನ್ವಯವಾಗುತ್ತದೆ.

### ೬.೮.೯ ಕನ್ನಡ ನಾಮಪದಗಳ ವರ್ಗೀಕರಣ




**ಉದಾಹರಣೆಗಳು :**

೧ ರಾಮು, ರಾಜು
೨ ಸೀತಾ, ಕಮಲೆ
೩ ನಾನು
೪ ನೀನು
೫ ಅವನು, ಅವಳು, ಅದು
೬ ಏನು, ಏಕೆ
೭ ಯಾರು, ಯಾವನು, ಯಾವಳು
೮ ಎಷ್ಟು, ಅಷ್ಟು
೯ ಅಣ್ಣಂದಿರು, ತಮ್ಮಂದಿರು
೧೦ ತಾಯಂದಿರು, ಸೊಸೆಯಂದಿರು
೧೧ ಗಂಡಸರು, ಹೆಂಗಸರು
೧೨ ಮಂತ್ರಿಗಳು, ಗುರುಗಳು
೧೩ ಮಕ್ಕಳು, ಆಳುಗಳು
೧೪ ಮಂಗಳೂರು, ಮೈಸೂರು
೧೫ ಚೆಂದವಾದ, ಚೆಲುವ ಕುಳ್ಳ
೧೬ ನೀರು, ಎಣ್ಣೆ ರೊಕ್ಕ, ನೆಲ
೧೭ ಹಸು, ದನ, ನಾಯಿ
೧೮ ಗಿಡ, ಮರ ಬಳ್ಳಿ,
೧೯ ಪೂರ್ವ, ಪಶ್ಚಿಮ
೨೦ ಊರು, ಹಳ್ಳಿ, ಮಹಡಿ
೨೧ ಮಳೆಗಾಲ, ಚಳಿಗಾಲ
ಸೋಮವಾರ ರವಿವಾರ
೨೩ ಮುಂಜಾನೆ, ಮಧ್ಯಾಹ್ನ
೨೪ ದಿನ, ಗಂಟೆ, ತಿಂಗಳು
೨೫ ಕಲ್ಲು, ಕಸ, ಪೆನ್ನು
೨೬ ಒಬ್ಬ ಇಬ್ಬರು, ನಾಲ್ವರು
೨೭ ಒಂದು, ಎರಡು, ನಾಲ್ಕು
೨೮ ಒಂದನೆಯ, ನೂರನೆಯ
೨೯ ಬೇಹುಕಾರೆ, ತಂಟೆಕೋರ
೩೦ ಕಬ್ಬಿಗ, ಚದುರೆ
೩೧ ಓದಾಳಿ, ಜೂದಾಳಿ
೩೨ ಮಿಂಗುಲಿಗ, ಲಂಚಗುಳಿ
೩೩ ಕಲಿತನ, ಉಕ್ಕು, ಒಲವು ಕೇಡು, ಪೆಂಪು, ಆಯತಿಕೆ ಬಾಳಿಕೆ

ಮಾಡ್+ಅಲಿ> ಮಾಡಲಿ, ಸೇರ್+ಅಲಿ> ಸೇರಲಿ,
ಹೋಗ್+ಅಲಿ> ಹೋಗಲಿ, ತಿನ್+ಅಲಿ> ತಿನ್ನಲಿ,

ಕೇಶಿರಾಜನು ಇದನ್ನು 'ಅಲ್' ಪ್ರತ್ಯಯವೆಂದು ಸೂಚಿಸಿರುವನು. ಅದು ಪ್ರತಿಷೇಧದ ಕ್ರಿಯೆ ಇದ್ದಾಗ ಮಧ್ಯಮ ಪುರುಷದಲ್ಲಿ ಸತತವಾಗಿ ಬರುತ್ತದೆನ್ನುತ್ತಾನೆ (ಸೂ. ೨೪೫), ಆದರೆ ಹೊರಗನ್ನಡದಲ್ಲಿ ಈ ಬಗೆಯ ಅರ್ಥ ಸೀಮಿತತೆ ಇಲ್ಲ. 'ಅಲ್' ಅಲ್ಲದೆ ಕೆ, ಗೆ, ಪ್ರತ್ಯಯಗಳನ್ನು ವಿಧ್ಯರ್ಥಕ್ಕೆ ನಿಡುತ್ತಾನೆ— ಕುಡುಗೆ, ತರ್ಕೆ, ಬರ್ಕೆ, ಮಾಟ್ಕಿ ಇತ್ಯಾದಿ. ಸಹಜಧಾತು ಸ್ವರೂಪವು ಅಂದರೆ ಯಾವ ಪ್ರತ್ಯಯವಿಲ್ಲದೆಯೂ ವಿಧ್ಯರ್ಥವಾಗಬಲ್ಲುದೆಂದೂ ಹೇಳಿದ್ದಾನೆ.— ನುಡಿ, ಹರಿಕೇಳ್, ಇರು, ನೆಟ್ಟು ಇತ್ಯಾದಿ.

ಆಜ್ಞೆ, ಕೋರಿಕೆ, ಆಶೀರ್ವಾದ, ಇಚ್ಛೆ, ಒಪ್ಪಿಗೆ ಮುಂತಾದವುಗಳನ್ನು ವಿಧ್ಯರ್ಥದಲ್ಲಿ ಸೇರಿಸಿದರೆ ಇವೆಲ್ಲ ಒಳಗೊಳ್ಳುತ್ತವೆ. ಹೊಸಗನ್ನಡದಲ್ಲಿ 'ಅಲಿ' ಪ್ರತ್ಯಯವಲ್ಲದೆ 'ಇರಿ', 'ಓಣ', 'ವಾ' ಇಂತಹ ಪ್ರತ್ಯಯಗಳೂ ಬಳಕೆಯಲ್ಲಿವೆ— ತಿನ್ನಿರಿ, ತಿನ್ನೋಣ, ತಿನ್ನುವಾ.

6.8.7 **ನಿಷೇಧ ಪ್ರತ್ಯಯ :**

ಕಾಲಸೂಚಕ ಪ್ರತ್ಯಯಗಳ ಸ್ಥಾನದಲ್ಲಿ ಕ್ರಿಯಾಪ್ರಕೃತಿಯೊಡನೆ ಸೇರಿ ಸಾಮಾನ್ಯವಾಗಿ ನಿಷೇಧಸೂಚಕ ಪ್ರಯತ್ಯಗಳು ಬಳಕೆಯಾಗುತ್ತವೆ. 'ಅ' ಹಾಗೂ 'ಎ' ಇವು ನಿಷೇಧ ರೂಪಗಳನ್ನು ರಚಿಸುವ ಪ್ರತ್ಯಯಗಳಾಗಿವೆ.

6.8.7.1 ಕಾಣ್+ಅ> ಕಾಣ, ನೋಡ್+ಅ> ನೋಡ,
ತಿನ್+ಅ> ತಿನ್ನ.

'ಎ' ಪ್ರತ್ಯಯವು ಹೀಗೆ ನೇರವಾಗಿ ಧಾತುಗಳಿಗೆ ಹತ್ತುವುದಿಲ್ಲ.

6.8.7.2 ಕಣ್+ಅನ್+ಎ> ಕಾಣದೆ; ನೋಡ್+ಅನ್+ಎ> ನೋಡದೆ;
ತಿನ್+ಅದ್+ಎ> ತಿನ್ನದೆ.

ಇಲ್ಲಿ ಮೊದಲನೆಯದು (6.8.7.1) ಭವಿಷತ್—ವರ್ತಮಾನ ಕಾಲದಲ್ಲೂ ಎರಡನೆಯದು (6.8.7.2) ಭೂತಕಾಲದಲ್ಲೂ ಬಳಕೆಗೊಳ್ಳುತ್ತವೆ. ಎರಡನೆಯದರಲ್ಲಿ 'ಅ' ಪ್ರತ್ಯಯವನ್ನು ಹಚ್ಚಿ ಕಾಲಾತೀತ ನಿಷೇಧರೂಪವನ್ನು ಸಿದ್ಧಿಸಬಹುದು—

ಕಾಣ್+ಅದ್+ಅ> ಕಾಣದ; ನೋಡ್+ಅದ್+ಅ> ನೋಡದ;
ತಿನ್+ಅದ್+ಅ> ತಿನ್ನದ.

ಕೇಶಿರಾಜನು ನಿಷೇಧ ಕ್ರಿಯೆ ಮೂರೂ ಕಾಲಗಳಲ್ಲಿ ಒಂದೇ ರೀತಿ ಎಂದಿದ್ದಾನೆ (ಸೂ. ೨೩೩). ಉದಾ : ಮಾಡಿದನೆಂಬುದಕ್ಕೆ ಮಾಡಂ, ಮಾಡಿದಪನೆಂಬುದರ್ಕೆ ಮಾಡಂ, ಮಾಡುವನೆಂಬುದರ್ಕೆ ಮಾಡಂ. ಆದರೆ ಅವನ ಹೇಳಿಕೆ ಸಂದಿಗ್ಧವಾಗಿದೆ.

### 6.8.8 ಪುರುಷವಾಚಕ ಕ್ರಿಯಾಪ್ರತ್ಯಯಗಳು::

ಕ್ರಿಯಾಪದಗಳಿಗೆ ಹತ್ತುವ ಪುರುಷವಾಚಕ ಪ್ರತ್ಯಯಗಳು ವಚನ ಹಾಗೂ ಲಿಂಗವನ್ನೂ ಸೂಚಿಸುತ್ತವೆ. ಇವುಗಳನ್ನು ಸರ್ವನಾಮ ಪ್ರತ್ಯಯಗಳು ಎನ್ನಬಹುದು.

**ಏಕವಚನದಲ್ಲಿ—**

| ಕಾಲ | ರೂಪ | ಪ್ರತ್ಯಯ | ಪುರುಷ |
|---|---|---|---|
| ವರ್ತಮಾನ | ಬರೆಯುತ್ತೇನೆ | —ಏನೆ | ಪ್ರಥಮ |
| " | ಬರೆಯುತ್ತೀ | —ಈ | ದ್ವಿತೀಯ |
| " | ಬರೆಯುತ್ತಾನೆ | —ಆನೆ | ತೃತೀಯ |
| " | ಬರೆಯುತ್ತಾಳೆ | —ಆಳೆ | |
| " | ಬರೆಯುತ್ತದೆ | —ಅದೆ | |
| ಭೂತ ಹಾಗೂ | ಬರೆಯುವೆ(ನು) | —ಎ(ನು) | ಪ್ರಥಮ |
| ಭವಿಷತ್ | ಬರೆಯುವಿ (ವೆ) | —ಇ(ಎ) | ದ್ವಿತೀಯ |
| " | ಬರೆಯುವನು | —ಅನು | ತೃತೀಯ |
| " | ಬರೆಯುವಳು | —ಅಳು | |
| " | ಬರೆಯುವುದು* | —ಉದು | |

* ಭೂತಕಾಲದಲ್ಲಿ ತೃತೀಯ ಪುರುಷ ನಪುಂಸಕದಲ್ಲಿ ಇತು ಪ್ರತ್ಯಯವಿದೆ–ಬರೆಯಿತು.

**ಬಹುವಚನದಲ್ಲಿ—**

| ಕಾಲ | ರೂಪ | ಪ್ರತ್ಯಯ | ಪುರುಷ |
|---|---|---|---|
| ವರ್ತಮಾನ | ಬರೆಯುತ್ತೇವೆ | –ಏವೆ | ಪ್ರಥಮ |
| ” | ಬರೆಯುತ್ತೀರಿ | –ಈರಿ | ದ್ವಿತೀಯ |
| ” | ಬರೆಯುತ್ತಾರೆ | –ಆರೆ | ತೃತೀಯ |
| ” | ಬರೆಯುತ್ತವೆ | –ಅವೆ | |
| ಭೂತಕಾಲ | ಬರೆದೆವು | –ಎವು | ಪ್ರಥಮ |
| ” | ಬರೆದಿರಿ | –ಇರಿ | ದ್ವಿತೀಯ |
| ” | ಬರೆದರು | –ಅರು | ತೃತೀಯ |
| ” | ಬರೆದವು | –ಅವು | |

ಭವಿಷತ್ಕಾಲದಲ್ಲೂ ಪ್ರತ್ಯಯಗಳು ಭೂತಕಾಲದಲ್ಲಿರುವಂತಹವೆ ಇವೆ. ಆ ಪ್ರತ್ಯಯಗಳ ಹಿಂದೆ ಭವಿಷತ್ಕಾಲಸೂಚಕ ಪ್ರಾತಿಪದಿಕ ರಚಕ 'ಉವ್' ಆದೇಶವಾಗುತ್ತದೆ.

ಉದಾ : ಬರೆ+ಯ್+ಉವ್+ಎವು> ಬರೆಯುವೆವು;
ಬರೆ+ಯ್+ಉವ್+ಇರಿ> ಬರೆಯುವಿರಿ;
ಬರೆ+ಯ್+ಉವ್+ಅದು> ಬರೆಯುವುದು;
ಬರೆ+ಯ್+ಉವ್+ಅವು> ಬರೆಯುವವು.

ಭವಿಷತ್ಕಾಲದಲ್ಲಿ– 'ಉವ್'-ದಂತೆ, ಭೂತಕಾಲದಲ್ಲಿ–'ದ್'–, ವರ್ತಮಾನ ಕಾಲದಲ್ಲಿ –ಉತ್– ಆದೇಶವಾಗುತ್ತವೆ.

6.8.8.1 ಕೇಶಿರಾಜನು ದ, ದಪ, ವ, ಉದು, ಉವು, ಇತು, ಇತ್ತು, ಅತ್ತು, ಅಳ್, ಗುಂ, ಕುಂ, ಅಂ, ಅರ್, ಅಯ್, ಇರ್, ಎನ್, ಎವು ಹೀಗೆ ಒಟ್ಟು ೧೭ ಇಂತಹ ಪ್ರತ್ಯಯಗಳನ್ನು ಆಖ್ಯಾತ ಪ್ರಕರಣದಲ್ಲಿ ಅಲ್ಲಲ್ಲಿ ಹೇಳಿರುವನು. (ನೋಡಿ ಸೂ. ೨೨೮, ೨೩೨, ೨೩೬, ೨೩೭, ೨೩೮, ೨೯೪, ೨೪೮, ೨೫೩ ಹಾಗೂ ೨೫೪).

## 6.9 ಕ್ರಿಯಾಪದಗಳು :

6.9.0 ಕನ್ನಡದಲ್ಲಿ (ಇತರ ದ್ರಾವಿಡ ಭಾಷೆಗಳಲ್ಲಿದ್ದಂತೆ) ಕ್ರಿಯಾಪ್ರಕೃತಿಗಳು ನಾಮಪದಗಳಂತೆ ಪ್ರತ್ಯಯಗಳನ್ನು ಹಚ್ಚಿಕೊಳ್ಳುವುದರಿಂದ, ಅಲ್ಲದೆ ಅನೇಕ

ನಾಮಗಳು ಕ್ರಿಯಾರ್ಥವನ್ನು ನೀಡುವುದರಿಂದ ಅವುಗಳಿಂದಲೇ ವಾಕ್ಯರಚನೆ ಸಾಧ್ಯವಿರುವುದರಿಂದ (ಉದಾ ; ಕವಿ ಕೇಶವನು, ನಾನು ಮಲ್ಲಿಕಾರ್ಜುನನ ಮಗನು) ನ್ಯಾಯವಾಗಿ ಕ್ರಿಯಾಪದಗಳೆಂಬುವು ಇಲ್ಲ ಎಂಬ ಅಭಿಪ್ರಾಯ ಉಂಟಾಗಿದೆ. ಆದರೆ ಕ್ರಿಯಾರ್ಥವನ್ನೊಳಗೊಂಡ ಎಲ್ಲ ರೂಪಗಳನ್ನು (ಅವು ನಾಮಪದಗಳಾಗಿರಲಿ, ಧಾತುಗಳಾಗಿರಲಿ) ಭಾಷೆಯಲ್ಲಿ ಅವುಗಳ ವ್ಯವಸ್ಥೆಯನ್ನು ಪ್ರತ್ಯೇಕವಾಗಿ ವರ್ಣಿಸುವುದು ಅಗತ್ಯ.೧

6.9.1 ಕನ್ನಡದಲ್ಲಿ ಕ್ರಿಯಾಪದ ರಚನೆ ಮುಖ್ಯವಾಗಿ ಹೀಗಿರುತ್ತದೆ.—

೧. ಕ್ರಿಯಾಪ್ರಾತಿಪದಿಕ+ಕಾಲವಾಚಕ ಪ್ರತ್ಯಯ+ಸರ್ವನಾಮ ಪ್ರತ್ಯಯ ಉದಾ : ಮಾಡ್+ಉತ್ತ್+ಆಳೆ=ಮಾಡುತ್ತಾಳೆ. ನೋಡ್+ಇದ್+ಅನು=ನೋಡಿದನು. ಬರು+ವ್+ಉದು=ಬರುವುದು—

೨. ಭೂತ (ಕ್ರಿಯಾವಿಶೇಷಣ) ನ್ಯೂನರೂಪ+ಪೂರ್ಣ ಕ್ರಿಯಾರೂಪ ಉದಾ : ನಿಂತು ಬಿಟ್ಟನು, ಸತ್ತು ಹೋದನು, ಹುಚ್ಚು ಹಿಡಿದಿದೆ, ಉಬ್ಬಿಕೊಂಡಿದೆ, ಇಳಿದು ಬಂದಳು, ಬೇಗ ಬನ್ನಿರಿ.

೩. ಭೂತ/ಭೂತೇತರ ನ್ಯೂನರೂಪ+'ಇರು' ಧಾತುವಿನ ಭೂತ/ಭೂತೇತರ ನ್ಯೂನರೂಪ+ಸರ್ವನಾಮ ಪ್ರತ್ಯಯ. ಉದಾ : ಬಂದಿದ್ದೇನೆ, ಕುಡಿದಿದ್ದಾನೆ, ತುಂಬಿದೆ, ಸೊರಗಿದ್ದಾಳೆ, ಓದುತ್ತಿದ್ದಾನೆ, ಅಳುತ್ತಿದ್ದಾಳೆ. ಮಲಗಿದ್ದಳು, ಮರೆಯುತ್ತಿದ್ದೆ, ಆಡುತ್ತಿದ್ದರು.

6.9.2 **ಸಕರ್ಮಕ/ಅಕರ್ಮಕ :** ಕನ್ನಡದಲ್ಲಿ ಸಕರ್ಮಕ ಹಾಗೂ ಅಕರ್ಮಕ ಕ್ರಿಯಾಪದ ಭೇದವನ್ನು ವಾಕ್ಯಮಟ್ಟದಲ್ಲಿ ಗುರುತಿಸಬಹುದು. ಕರ್ಮವನ್ನು ಕೆಲವು ನೇರವಾಗಿ ಸ್ವೀಕರಿಸುತ್ತವೆ. ಕೆಲವು ಸ್ವೀಕರಿಸುವುದಿಲ್ಲ. ಕೆಲವು ಕ್ರಿಯಾಪ್ರಕೃತಿಗಳು ಕರ್ಮಸೂಚಕ ಪ್ರತ್ಯಯ ಹತ್ತಿಸಿಕೊಂಡಾಗಲೇ ಸಕರ್ಮಕವಾಗುತ್ತವೆ. ಇಲ್ಲದಿದ್ದರೆ ಸಹಜವಾಗಿಯೆ ಅವು ಅಕರ್ಮಕ ಅರ್ಥವನ್ನು ನೀಡುತ್ತವೆ. ಕೆಲವು ಕರ್ಮಸೂಚಕ ಪ್ರತ್ಯಯವಿಲ್ಲದಿದ್ದರೂ ಸಕರ್ಮಕ ಅರ್ಥವನ್ನು ನೀಡುತ್ತವೆ.

---

೧ ಕ್ರಿಯಾಪದಗಳ ಬಗೆಗಿನ ಹೆಚ್ಚಿನ ವಿವರಣೆಗಳಿಗೆ ನೋಡಿ : (೧) ತೀ. ನಂ. ಶ್ರೀ. ಅವರ ಕನ್ನಡ ಮಧ್ಯಮ ವ್ಯಾಕರಣ (೧೯೭೨) ಪು. ೮೧-೧೩೫ (೨) ಪ್ರ. ಗೋ ಕುಲಕರ್ಣಿ ಅವರ ಕನ್ನಡ ಭಾಷೆಯ ಚರಿತ್ರ (೧೯೭೫) ಪು. ೪೯೩-೫೬೨ (೩) ಡಾ. ಕುಶಾಲಪ್ಪಗೌಡ ಅವರ ಕನ್ನಡಭಾಷೆ ಮತ್ತು ವ್ಯಾಕರಣಗಳ ಅಧ್ಯಯನ (೧೯೮೬) ಪು. ೧೧೨ ರಿಂದ ೧೧೬.

ಅವನು ತಿನ್ನುತ್ತಾನೆ. ಅವನು ತಿನಿಸುತ್ತಾನೆ. ಇಲ್ಲಿ ತಿನ್ನು, ತಿನಿಸು ಎರಡೂ ಸಕರ್ಮಕಗಳೇ. ಆದರೂ ಮೊದಲನೆಯದರಲ್ಲಿ ಕರ್ಮಸೂಚಕ ಪ್ರತ್ಯಯವಿಲ್ಲ. ಎರಡನೆಯದರಲ್ಲಿ 'ಇಸು' ಪ್ರತ್ಯಯವಿದೆ. ಆದ್ದರಿಂದ ಅಕರ್ಮಕ ಕ್ರಿಯಾಪ್ರಕೃತಿಗಳನ್ನು ಪ್ರತ್ಯಯ ಹಚ್ಚಿ ಸಕರ್ಮಕ ಮಾಡಿದರೆ ಅವುಗಳನ್ನು ಸಾಧಿತ ಸಕರ್ಮಕವೆನ್ನಬೇಕಾಗುತ್ತದೆ.

6.9.3 ಕನ್ನಡ ಕ್ರಿಯಾಪದಗಳನ್ನು ಕರ್ಮವನ್ನವಲಂಬಿಸಿ ಸಕರ್ಮಕ– ಅಕರ್ಮಕ ಎಂದೂ ಅರ್ಥಾನುಗುಣವಾಗಿ ಪೂರ್ಣ, ಅಪೂರ್ಣ, ಸಂಯುಕ್ತವೆಂದು ಮುಖ್ಯವಾಗಿ ವಿಂಗಡಿಸಬಹುದು. ಪೂರ್ಣ ಕ್ರಿಯಾಪದದಲ್ಲಿ ಕಾಲವನ್ನನುಸರಿಸಿ ವರ್ತಮಾನ ಭೂತ, ಭವಿಷತ್ ಎಂದು ಮತ್ತೆ ಮೂರು ಪ್ರಕಾರಗಳನ್ನು ಹಾಗೂ ಇತರ ಪ್ರಕಾರಗಳಲ್ಲಿ ವಿಧ್ಯರ್ಥ, ನಿಷೇಧ, ಸಂಭಾವನಾ ಹಾಗೂ ಕ್ರಿಯಾರ್ಥಕಾವ್ಯಯ ಎಂದು ನಾಲ್ಕು ಬಗೆಯಲ್ಲಿ ವಿಂಗಡಿಸಬಹುದು.

ಅಪೂರ್ಣ ಕ್ರಿಯಾಪದದಲ್ಲಿ ನ್ಯೂನಾಂಶವನ್ನವಲಂಬಿಸಿ ವರ್ತಮಾನ ನ್ಯೂನ, ಭೂತನ್ಯೂನ ನಿಷೇಧನ್ಯೂನ ಎಂದು ಮೂರು ಬಗೆಯಾಗಿ ಹಾಗೂ ಇತರತ್ರ, ಪಕ್ಷಾರ್ಥ, ಭಾವಾರ್ಥ ಎಂದು ಇಬ್ಬಗೆಯಾಗಿ ವಿಂಗಡಿಸಬಹುದು. ಒಂದಕ್ಕಿಂತ ಹೆಚ್ಚು ಕ್ರಿಯೆಗಳನ್ನು ಒಂದೇ ಕ್ರಿಯಾಪದರೂಪವು ಸೂಚಿಸುತಿದ್ದರೆ ಸಂಯುಕ್ತ ಕ್ರಿಯಾಪದ ಎನಿಸುವುದು.

6.9.3.1 ಹಿಂದಿನ ಪುಟ [೧೯೨] ದಲ್ಲಿ ಕ್ರಿಯಾಪದದ ವರ್ಗೀಕರಣದ ನಕ್ಷೆಯನ್ನು ಸೂಚಿಸಲಾಗಿದೆ ನೋಡಿ.

### 6.9.4 ಕ್ರಿಯಾವಿಶೇಷಣಗಳು :

ಕ್ರಿಯಾಪದಗಳನ್ನು ವರ್ಣಿಸುವ ಪದಗಳನ್ನು ಕ್ರಿಯಾವಿಶೇಷಣಗಳೆಂದು ಪರಿಗಣಿಸುತ್ತಾರೆ. ಅವುಗಳನ್ನು ಸಹಜ, ತದ್ಧಿತ, ಪ್ರಶ್ನಾರ್ಥಕ, ವಾಕ್ಯಾರ್ಥಕ ಎಂದು ನಾಲ್ಕು ಬಗೆಯಾಗಿ ವಿಂಗಡಿಸಬಹುದು.

ಉದಾ : (i) ಸಹಜ→ ಮುಂದೆ, ಹಿಂದೆ, ಹತ್ತಿರ, ದೂರ, ಈಗ, ಆಗ, ಅಲ್ಲಿ, ಇಲ್ಲಿ, ಇಷ್ಟು, ಅಷ್ಟು, ಇನ್ನೂ, ಮತ್ತೆ, ತುಂಬ, ಅಂತು, ಇಂತು, ಇಂದು, ನಾಳೆ, ದೊಡ್ಡದು, ಉದ್ದ, ಗಿಡ್ಡ, ಬೇಗ.

(ii) ತದ್ಧಿತ → ಸಣ್ಣಗೆ, ತಣ್ಣಗೆ, ಕೆಂಪಗೆ. ಕಮ್ಮನೆ, ತೆಳ್ಳನೆ, ಭಗಭಗ, ದಪದಪ, ಘೊಪ್ಪನೆ, ಪಟ್ಟನೆ, ಗೊಳ್ಳನೆ.

(iii) ಪ್ರಶ್ನಾರ್ಥಕ→ಎಲ್ಲಿ, ಯಾಕೆ, ಎಷ್ಟು, ಎಂತು, ಏನು, ಅಲ್ಲವೆ.

(iv) ವಾಕ್ಯಾರ್ಥಕ→ಇಡೀ ವಾಕ್ಯದಲ್ಲಿ ಮುಖ್ಯ ಕ್ರಿಯಾಪದವನ್ನು ಒಂದಕ್ಕಿಂತ ಹೆಚ್ಚು ವಿಶೇಷಣಗಳು ವರ್ಣಿಸುತ್ತಿದ್ದರೆ ವಾಕ್ಯಾರ್ಥಕವೆಂದು ಭಾವಿಸಬೇಕು. ಉದಾ: **ನಿಜವಾಗಿಯೂ** ಅವನು **ಗಬಗಬನೆ** ತಿಂದನು. ಅವರು **ಬೇಗ ಬೇಗನೆ ಮುಂದೆ** ಓಡಿದರು. ಅವಳು **ಬಹಳಷ್ಟು ತೆಳ್ಳಗೆ** ಇದ್ದಾಳೆ, ಅಶೋಕನು **ಇನ್ನೂ ಹಿಂದೆ** ಹೋದನಲ್ಲವೆ ?

6.9.5 **ಕ್ರಿಯಾನೋಟಕ ರೂಪಗಳು** (Verbal Aspect forms)

ಕನ್ನಡದಲ್ಲಿ ಸಹಾಯಕ ಕ್ರಿಯಾಪದಗಳಂತೆ ತೋರುವ, ವಾಕ್ಯದಲ್ಲಿನ ಮುಖ್ಯ ಕ್ರಿಯಾಪದದ ಅರ್ಥಕ್ಕೆ ಪುಷ್ಟಿ ನೀಡುವ ಕ್ರಿಯಾನೋಟಕ ರೂಪಗಳು ಬಳಕೆಯಾಗುತ್ತವೆ. ಇವು ಯಾವಾಗಲೂ ತಮ್ಮ ಮೂಲ ಅರ್ಥವನ್ನೇ ಇಂಥ ಬಳಕೆಯಲ್ಲಿ ಸೂಚಿಸುತ್ತವೆಯೆಂದು ಹೇಳಲು ಬಾರದು. ಉದಾಹರಣೆಗೆ— 'ಬಿಡು' ಎಂಬ ಕ್ರಿಯಾನೋಟಕ ಬಳಕೆಗೊಳ್ಳುವ ಬಗೆಯನ್ನು ನೋಡಿ—ಕೊಂದು ಬಿಡು. ಓಡಿಬಿಟ್ಟನು. ಕುಡಿದು ಬಿಟ್ಟಾಳು. ಇಲ್ಲಿ 'ಬಿಡು' ಇದು ಮುಖ್ಯ ಕ್ರಿಯಾಪದಗಳಿಗೆ ಸಹಾಯಕವಾಗಿ ಪೂರ್ಣಾರ್ಥಕೊಡುವುದೇ ಆಗಿದೆ. ಇನ್ನಿತರ ಕೆಲವು ಕ್ರಿಯಾನೋಟಕಗಳು — ಕೊಳ್ → ಹಿಡಿದುಕೊಳ್ಳು. ಕೊಂಡು**ಕೊಂಡರು**, ನಿಂತು**ಕೊಂಡಳು**, ಹಿಡಿದು**ಕೊಂಡ** ಆಡು → **ಕಿತ್ತಾಡಿದರು**, ಸುತ್ತಾಡಿದರು, **ಓಡಾಡಿದಳು**, ಬಡಿದಾಡಿದರು. ಹಾಕು→ಮುರಿದಹಾಕಿದ, ಕಿತ್ತ**ಹಾಕಿ**ದಳು, ಸುತ್ತಹಾಕಿದ, ತಿಂದುಹಾಕಿತು. ಹೋಗು→ಸುಟ್ಟುಹೋದ, ಕೆಟ್ಟುಹೋದಳು, ಸತ್ತುಹೋಯಿತು, ಮರೆತು ಹೋದರು. ಆರಿಹೋದೀತು. ಕೊಡು→ ಬಿಟ್ಟುಕೊಡ, ತೋರಿಸಿಕೊಡು.

6.9.6 **ಸಂಯೋಜನ ಪ್ರತ್ಯಯ** (verbal Conjunctive)

ಭಾಷಾ ಘಟಕವನ್ನು ಸಂಯೋಜಿಸಲು ಕ್ರಿಯಾ ಪ್ರಕೃತಿಗೆ ಸೇರುವ ಪ್ರತ್ಯಯವೇ ಸಂಯೋಜನಾತ್ಮಕ ಕ್ರಿಯಾ ಪ್ರತ್ಯಯ[೧] ಅಲ್/ಲ್ (ಉ), ಎ, ಅ, ಆಕ/ಓಕೆ, ರೆ, ಅ, ಉದಾ. ಬರಲು ಬೇಕು, ಬರಲಿಲ್ಲ, ಹೋಗಲೇಬೇಡ ಬರಬೇಕು, ತಿನ್ನಲೊಲ್ಲ, ಜಿಗಿದೆ ಬಂದ, ಕರೆಯು ಬಂದ, ಕುಡಿ**ಯೋ**ಕಿಲ್ಲ/ಕುಡಿಯಾಕಿಲ್ಲ, ಬಂದಿದ್ದಾಗ, ಸಿಕ್ಕರೆ, ನಿಂತರೆ, ಹೋಗುತ್ತ ಇರು.

---

೧. ಕನ್ನಡ ಭಾಷೆಯ ರೂಪರೇಷೆಗಳು—ವಿಲ್ಯಂ ಮಾಡ್ತ (ಪು. ೫೫)

### 6.9.7 ನಿಷೇಧಾರ್ಥಕ ಕ್ರಿಯಾಪದಗಳು ;

ಇಲ್ಲ, ಅಲ್ಲ, ಆರ್, ಬೇಡ, ಅ/ಎ ಇವುಗಳನ್ನು ಅನ್ವಯಿಸುವುದರ ಮೂಲಕ ನಿಷೇಧಕ್ರಿಯಾಪದಗಳನ್ನು ರಚಿಸುವ ವಾಡಿಕೆ ಕನ್ನಡದಲ್ಲಿ ಇದೆ.

ಉದಾ : ಕಾಣುವುದಿಲ್ಲ, ಕಾಣುತ್ತಿಲ್ಲ, ಕಂಡಿಲ್ಲ, ಪ್ರಾಣಿಯಲ್ಲ, ಮರವಲ್ಲ, ಕಾಣಲಾರೆ, ಕಾಣಲಾರನು, ಕಾಣಲಾರದು, ನೋಡಬೇಡ, ನೋಡನು, ನೋಡೆನು, ಬಾರದೆ, ನಿಲ್ಲದೆ, ಓಡದೆ.

### 6.9.8 ಆಜ್ಞಾರ್ಥಕ ಕ್ರಿಯಾಪದಗಳು :

ಸಾಮಾನ್ಯವಾಗಿ ಸಹಜ ಕ್ರಿಯಾಧಾತುಗಳು ಆಜ್ಞಾರ್ಥಕ ಕ್ರಿಯಾಪದಗಳಾಗಬಹುದು. ಆದರೆ ಎಲ್ಲ ಧಾತುಗಳೂ ಇದಕ್ಕೆ ಉದಾಹರಣೆಗಳಾಗಲಾರವು ಆಜ್ಞಾರ್ಥಕ ಕ್ರಿಯಾಪದಗಳ ರಚನೆಯಲ್ಲಿ ಈ ಅಂಶಗಳು ಗಮನಾರ್ಹವಾಗಿವೆ.

೧. ಮಾನವೇತರ ಜೀವಿಗಳಿಗೆ ಅನ್ವಯಿಸುವಾಗ ಸಹಜ ಕ್ರಿಯಾಪದಕ್ಕೆ ಓ (ಏಕವಚನ) ರಿ/ಇರಿ (ಬಹುವಚನ) ಪ್ರತ್ಯಯಗಳು ಹತ್ತುವುದಿಲ್ಲ

೨. ಏಕವಚನದಲ್ಲಿ ಪುಲ್ಲಿಂಗಕ್ಕೆ ಓ, ಸ್ತ್ರೀಲಿಂಗಕ್ಕೆ ಎ ಪ್ರತ್ಯಯ ಹತ್ತುತ್ತದೆ.

೩. ಬಹುವಚನದಲ್ಲಿ 'ಇರಿ'/ರಿ, ಪ್ರತ್ಯಯ ಹತ್ತುತ್ತದೆ.

ಹೋಗೋ, ನಿಲ್ಲೋ, ಕೇಳೋ, ನೋಡಿರಿ, ತಿನ್ನಿರಿ, ಬಾರೇ, ನಿಲ್ಲೆ, ಸಾಯು, ಓಡು, ಬರು ಹಾಗೂ ತರು ಕ್ರಿಯಾಪದಗಳಂತೆ ಬಾ, ತಾ, (ಏ. ವ) ಬನ್ನಿರಿ, ತನ್ನಿರಿ (ಬ. ವ.) ರೂಪಗಳಿವೆ. ಶಿಷ್ಟ ಕನ್ನಡದಲ್ಲಿ 'ಕೊಳ್' ಎಂಬ ಧಾತು ಸಹಾಯಕ ಕ್ರಿಯಾಪದವಾಗಿ ಆಜ್ಞಾರ್ಥದಲ್ಲಿ ಬಳಕೆಯಾಗುತ್ತದೆ—ನಿಂತುಕೊಳ್ಳು, ಕಟ್ಟಿಕೊಳ್ಳು, 'ಕೊಳ್'> ಕೋ ಆಗಿ ಮಾರ್ಪಟ್ಟು ಆಡುನುಡಿಯಲ್ಲಿ ಬಳಕೆಯಾಗುತ್ತದೆ. ನಿಂತುಕೋ, ಕಟ್ಟಿಕೋ, 'ಇಸು' ಪ್ರತ್ಯಯವು ಅನ್ವಯವಾದರೆ ಆಜ್ಞಾರ್ಥ ಉಂಟಾಗುತ್ತದೆ – ಸೇವಿಸು, ತಿನಿಸು, ಓಡಿಸು, ಆಗಲಿ/ಲಿ ರೂಪಗಳನ್ನು ಅನ್ವಯಿಸಿದರೆ ಆಜ್ಞಾರ್ಥ ಬರುತ್ತದೆ—ಬರೋಣವಾಗಲಿ, ಹೋಗಲಿ, ಬೇಕು ಬೇಡ, ಬಿಡು ಇಂತಹ ರೂಪಗಳು ಅನ್ವಯವಾದರೆ ಆಜ್ಞಾರ್ಥವುಂಟಾಗುತ್ತದೆ– ತಿನ್ನಬೇಡ, ಓಡಬೇಕು, ತಿಂದುಬಿಡು.

೬.9.9 ಕೇಶಿರಾಜನು ಧಾತುಗಳನ್ನು ಸ್ವರಧಾತು, ಕಾಂತ, ಗಾಂತ, ಇಸು ಪ್ರತ್ಯಯಾಂತವಾಗಿರುವ ಸ್ವಯಂಕರ್ತೃಕ ಧಾತುಗಳೆಂದು ವರ್ಗೀಕರಣ

ಮಾಡಿದ್ದಾನೆ.೧ ಇದನ್ನು ಬೇರೆ ರೀತಿಯಾಗಿಯೂ ಮಾಡಬಹುದು : ಏಕಾಕ್ಷರ ಧಾತುಗಳು, ಈರಕ್ಕರ ಧಾತುಗಳು ಮೂರಕ್ಷರದಧಾತುಗಳು. ಸಂಯುಕ್ತಧಾತುಗಳು; ಕ್ರಿಯಾಸಮಾಸವಾಗಿರುವ ಧಾತುಗಳು, ಇಸು ಪ್ರತ್ಯಯಾಂತ ಧಾತುಗಳು ಎಂದು ವಿಂಗಡಿಸುವುದು ಸೌಕರ್ಯದೃಷ್ಟಿಯಿಂದ ಲೇಸು.೨ ಎಂಬ ಅಭಿಪ್ರಾಯವೂ ಇದೆ.

6.9.10 ಕರ್ಮಣೀ ಪ್ರಯೋಗ ಕನ್ನಡದಲ್ಲಿ ಇಲ್ಲ. ನಾಗವರ್ಮ, ಕೇಶಿರಾಜರು ಈ ಬಗ್ಗೆ ಮೌನವಾಗಿರುವರಾದರೂ ತೃತೀಯಾವಿಭಕ್ತಿಯನ್ನು ವಿವರಿಸುವಲ್ಲಿ ಉದಾಹರಣೆ ನೀಡುವಾಗ ಕರ್ಮಣೀ ಪ್ರಯೋಗವಲ್ಲಿರುವಂಥವುಗಳನ್ನು ಬಳಸಿದ್ದಾರೆ. ಸಂಸ್ಕೃತ ಭಾಷೆಯ ಪ್ರಭಾವದಿಂದ ಈ ಬಗೆಯ ಪ್ರಯೋಗ ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೆ ಅಲ್ಲಲ್ಲಿ ಆಗಿರುವದು ಕಾಣುಬರುತ್ತದೆ. ಹೊಸಗನ್ನಡದಲ್ಲಿ 'ಅಲ್ಪಡು' ಎಂಬ ಪರೋತ್ತರ ರೂಪವನ್ನು ಧಾತುಗಳಿಗೆ ಹಚ್ಚಿ ಕರ್ಮಣೀ ಪ್ರಯೋಗ ಮಾಡಲಾಗುತ್ತದೆ.

## 6.10 ಸಮಾಸ :

6.10.0 ಸಂಧಿಯು ಧ್ವನಿಮಾಶಾಸ್ತ್ರ ಹಾಗೂ ಆಕೃತಿಮಾಶಾಸ್ತ್ರಗಳ ನಡುವಿನ ಸೇತುವೆ ಎನಿಸಿದರೆ, ಸಮಾಸವು ಆಕೃತಿಮಾಶಾಸ್ತ್ರ ಹಾಗೂ ವಾಕ್ಯಶಾಸ್ತ್ರದ ನಡುವಿನ ಸೇತುವೆಯೆನಿಸುತ್ತದೆ. ವಾಕ್ಯಗಳನ್ನು ನಿರ್ಮಾಣ ಮಾಡುವಲ್ಲಿ ಆಕೃತಿಮಾಗಳು ಒಂದರ ಅನಂತರ ಮತ್ತೊಂದು ಬಂದು ಭಾಷಾ ರಚನೆಗೆ ಅನುಗುಣವಾಗಿ ಒಂದಕ್ಕೊಂದು ಹೊಂದಿಕೊಂಡು ನಿಲ್ಲುವಾಗ ಉಚ್ಚಾರ ಸೌಲಭ್ಯಕ್ಕಾಗಿ ನಡೆಯುವ ಕ್ರಿಯೆಯೆ ಸಮಾಸಕ್ರಿಯೆ. ಅಂದರೆ ಆಕೃತಿಮಾಬದ್ಧ ರಚನೆಗಳು ವಾಕ್ಯಬದ್ಧ ರಚನೆಗಳಾಗುವಾಗ ಅತ್ಯಲ್ಪ ಕಾಲದಲ್ಲಿ ಉಚ್ಚಾರ ನಡೆದರೆ ಸಮಾಸ ಕ್ರಿಯೆಯುಂಟಾಗುತ್ತದೆ. ವಾಕ್ಯದಲ್ಲಿ ಎರಡು ಅಥವಾ ಹೆಚ್ಚು ಆಕೃತಿಮಾಗಳನ್ನು ಕೂಡಿಸಿ ಉಚ್ಚರಿಸುವಾಗ ವಿರಾಮ ಕಳೆದು ಹೋದರೆ ಸಮಾಸ ಘಟಿಸುತ್ತದೆ. ಇದನ್ನು ಸುಲಭವಾದ ರೀತಿಯಲ್ಲಿ – ಎರಡು ಅಥವಾ ಹೆಚ್ಚು ಆಕೃತಿಮಾಗಳನ್ನು ಕೂಡಿಸಿ ಒಂದು ದೊಡ್ಡ ಆಕೃತಿಮಾ ರಚನೆ ಮಾಡುವುದೇ ಸಮಾಸವೆಂದು ಹೇಳಬಹುದು.

---

೧. ಶ. ಮ. ಸೂ. ೨೬೫

೨. ನರಸಿಂಹಾಚಾರ್ಯ ಡಿ. ಎಲ್-ವ್ಯಾಕರಣಗಳು (ಸಂ. ವೀ, ಸಿ.) ಪು. ೧೯೪

ಆಕೃತಿಮಾಬದ್ಧ ರಚನೆಗಳು ಆಂತರಿಕವಾಗಿ ಬೆಳೆಯಿಸಲು ಬರದೆ ಇರುವಂತಹವು. ಉದಾ : ಹುಡುಗಿಯರು, ಕಣ್ಣುಗಳು, ಪುಸ್ತಕವನ್ನು, ಬಾವಿಯಲ್ಲಿಂದ, ಹಣ್ಣಿನ, ಬರುತ್ತಾರೆ, ಹಿಡಿದ, ಮಾರುವ, ಹೋದಳು ಮುಂತಾದವು.

ವಾಕ್ಯಬದ್ಧ ರಚನೆಗಳು ಆಂತರಿಕವಾಗಿ ಬೆಳೆಯಿಸಲು ಬರುತ್ತವೆ.

ಉದಾ : "ಕಮಲೆಯ ಕೂದಲು" ಈ ರಚನೆಯನ್ನು—

ಕಮಲೆಯ ಉದ್ದ ಕೂದಲು

ಕಮಲೆಯ ಕರಿಯ ಉದ್ದ ಕೂದಲು

ಕಮಲೆಯ ಕರಿಯ ಉದ್ದ ಸುಂದರ ಕೂದಲು

ಎಂದು ಮುಂತಾಗಿ ಆಂತರಿಕವಾಗಿ ಬೆಳೆಯಿಸಬಹುದಾಗಿದೆ. ವಾಕ್ಯಬದ್ಧ ರಚನೆಗಳಲ್ಲೆಲ್ಲ ಸಮಾಸ ನಡದೇ ನಡೆಯುತ್ತದೆಂದು ಹೇಳಲು ಬರುವದಿಲ್ಲ. ಅರ್ಥ ಹಾಗೂ ವಿರಾಮ ಇವೆರಡು ಅಂಶಗಳು ಸಮಾಸ ಘಟಿಸುವಲ್ಲಿ ಮಹತ್ವದವಾಗಿವೆ.

'ಆಕಳ ಸುಂದರ ಸಣ್ಣ ಕಣ್ಣು' ಈ ವಾಕ್ಯಬದ್ಧ ರಚನೆಯಲ್ಲಿ ಸಮಾಸವೇ ಇಲ್ಲ. "ಅರಸನ ಮನೆ" ಈ ರಚನೆಯನ್ನು "ಅರಮನೆ" ಎಂದು ಮಾಡಿದಾಗ ಮಾತ್ರ ಸಮಾಸವೆನಿಸುತ್ತದೆ. ಆದರೆ 'ಮಗುವಿನ ಮನಸ್ಸು' ಎಂಬ ರಚನೆಯನ್ನು ಸಮಾಸ ಮಾಡಲು ಬರುವುದಿಲ್ಲ. ಆದುದರಿಂದ ಕೆಲವು ರಚನೆಗಳು ಸಮಾಸವಾಗುತ್ತವೆ;ಕೆಲವು ಆಗುವುದಿಲ್ಲ.ಸಮಾಸವು ಎರಡು ಇಲ್ಲವೆ ಹೆಚ್ಚು ಆಕೃತಿಮಾಬದ್ಧ ರಚನೆಗಳನ್ನು ಒಳಗೊಂಡು (ಕೆಲವು ಸಲ ಧ್ವನಿಮಾ ಬದಲಾವಣೆಗೊಳಗಾಗಿ) ಇದ್ದರೂ ಒಂದೇ ಆಕೃತಿಮಾ ರೀತಿಯಲ್ಲಿ ವರ್ತಿಸುವುದು. ಇದು ಸಮಾಸದ ವೈಶಿಷ್ಟ್ಯ.

6.10.1 ಈ ಕೆಳಗಿನ ಉದಾಹರಣೆಗಳನ್ನು ಗಮನಿಸಿರಿ—

೧. ತಣ್ಣನೆ+ಗಾಳಿ=ತಂಗಾಳಿ; ಹಿರಿಯ+ಅಣ್ಣ=ಹಿರಿಯಣ್ಣ

೨. ರಾಮನೂ+ಲಕ್ಷ್ಮಣನೂ= ರಾಮಲಕ್ಷ್ಮಣರು;
ನೆಂಟರೂ+ಇಷ್ಟರೂ=ನೆಂಟಿಷ್ಟರು

೩. ಬಳೆಯಂ+ತೊಟ್ಟಂ=ಬಳೆದೊಟ್ಟಂ

ಇವುಗಳಲ್ಲಿ ಒಂದನೆಯ ಗುಂಪು ವಿಶೇಷಣ+ನಾಮಪದ=ನಾಮಪದವಾಗಿದೆ. ಎರಡನೆಯದರಲ್ಲಿ ನಾಮಪದ+ನಾಮಪದ=ನಾಮಪದವಾಗಿದೆ. ಮೂರನೆಯದರಲ್ಲಿ

ಕರ್ಮಪದ ಕೃದಂತ—ಕೃದಂತವಾಗಿದೆ. ಈ ರೀತಿಯಾಗಿ ಒಂದಕ್ಕಿಂತ ಹೆಚ್ಚು ಆಕೃತಿಮಾಗಳು ಸೇರಿದರೂ ಸಮಾಸದಲ್ಲಿ ಅವೆಲ್ಲ ಒಂದುಗೂಡಿ ಒಂದೆ ಆಕೃತಿಮಾ ವರ್ತಿಸುವಂತೆ ಭಾಷಿಕ ಕಾರ್ಯವನ್ನು ನಿರ್ವಹಿಸುತ್ತದೆ. ಹೀಗೆ ಭಾಷೆಯಲ್ಲಿ ವಿಶಿಷ್ಟ ಭಾಷಿಕ ಕಾರ್ಯವನ್ನು ನಿರ್ವಹಿಸುವ ಆಕೃತಿಮಾಗಳ ಏಕೀಕೃತ ರೂಪವನ್ನು ಸಿದ್ಧಪಡಿಸುವ ಕ್ರಿಯೆಯೇ ಸಮಾಸ ಕ್ರಿಯೆ ಅಂತಹ ರೂಪಗಳು ಹೊಂದುವ ಅರ್ಥ ಹಾಗೂ ಭಾಷಿಕ ಕಾರ್ಯ ಎರಡನ್ನೂ ಸಮಾಸದಲ್ಲಿ ಪರಿಗಣಿಸಬೇಕು. ಉದಾಹರಣೆಗೆ—ಮಂಗಬುದ್ಧಿ ಎಂಬ ಸಮಾಸದಲ್ಲಿ ಮಂಗನ+ಬುದ್ಧಿ ಎಂಬ ಎರಡು ರೂಪಗಳು ಏಕೀಕೃತವಾಗಿವೆ. ಅವುಗಳ ಸಾಮಾನ್ಯಾರ್ಥ ಬೇರೆ ಬೇರೆ ಆಗಿವೆ. ಆದರೆ ಅವೆರಡು ಸಮಾಸವಾದಾಗ ಅದರ ಅರ್ಥ ವಿಶಿಷ್ಟವಾಗುತ್ತದೆ. (ಚಂಚಲತೆ) ಎರಡು ನಾಮಪದಗಳು ಸೇರಿ ಒಂದೇ ನಾಮಪದವಾಗಿದೆ. ಹೀಗೆ ಅರ್ಥ ಹಾಗೂ ಭಾಷಿಕ ಕಾರ್ಯ ಸಮಾಸದಲ್ಲಿ ಮಹತ್ವದ ಅಂಶಗಳು.

ಆಧುನಿಕ ಭಾಷಾವಿಜ್ಞಾನಿಗಳು ಸಮಾಸವನ್ನು ಎರಡು ಬಗೆಯಾಗಿ ವಿಂಗಡಿಸಿ ವಿವರಿಸುತ್ತಾ. ೧. ಅಂತಃಕೇಂದ್ರಿಯ **(Endocentric)** ೨. ಬಹಿಃಕೇಂದ್ರೀಯ **(Exocentric)**

### 6.10.2 ಅಂತಃಕೇಂದ್ರೀಯ ಸಮಾಸ :

ಪೂರ್ವಪದ ಇಲ್ಲವೆ ಉತ್ತರ ಪದಗಳಲ್ಲಿಯೆ ಅರ್ಥವು ಅಡಕಗೊಂಡು ಕೇಂದ್ರೀಕೃತವಾಗಿದ್ದರೆ ಅಂತಃಕೇಂದ್ರೀಯ ಸಮಾಸವೆನಿಸುವುದು. ಅರ್ಥದಂತೆ ಭಾಷಿಕ ಕಾರ್ಯದ ದೃಷ್ಟಿಯಿಂದಲ್ಲೂ ಸಮಾಸದಲ್ಲಿ ಸೇರಿರುವ ಪದಗಳಲ್ಲಿಯ ಯಾವುದಾದರೊಂದು ಪದದ ಕಾರ್ಯವನ್ನೇ ಸಮಸ್ತಪದ ನಿರ್ವಹಿಸುತ್ತದೆ. ಉದಾಹರಣೆಗೆ– 'ಹುರಿಗಡಲೆ' ಎಂಬ ಸಮಾಸ ಹುರಿಯಲಾಗಿರುವ ಕಡಲೆ ಎಂಬ ಅರ್ಥವನ್ನೆ ಹೊಂದಿದೆ. ಅಂದರೆ ಹುರಿ, ಕಡಲೆ ಎಂಬ ಅರ್ಥಗಳನ್ನು ಬಿಟ್ಟು ಬೇರೊಂದು ಅರ್ಥ ಇಲ್ಲಿ ಇಲ್ಲ. ಹುರಿದ+ಕಡಲೆ ಎಂದು ಸಮಾಸವನ್ನು ವಿಗ್ರಹಿಸಬಹುದು. ಪೂರ್ವಪದ ಕೃದಂತವೂ ಉತ್ತರಪದವು ನಾಮವೂ ಆಗಿದೆ. 'ಹುರಿಗಡಲೆ' ಏಕೀಕೃತ ಸಮಸ್ತಪದವು ನಾಮಪದದ ಕಾರ್ಯವನ್ನು ನಿರ್ವಹಿಸುತ್ತದೆ.

ಅಂತಃಕೇಂದ್ರೀಯ ಸಮಾಸದಲ್ಲಿ—

6.10 2.0 ನಾಮಪದ+ನಾಮಪದ= ನಾಮಪದವಾಗಬಹುದು.

ಉದಾ : ಹಿರಿಯನು+ಕಿರಿಯನು=ಹಿರಿಕಿರಿಯರು

ರಾಮನು+ಲಕ್ಷ್ಮಣನು=ರಾಮಲಕ್ಷ್ಮಣರು
ಕಸ+ಕಡ್ಡಿ=ಕಸಕಡ್ಡಿ
ಮಳೆ+ಕಾಲ=ಮಳೆಗಾಲ

6.10.2.1 ವಿಶೇಷಣ+ನಾಮಪದ=ನಾಮಪದವಾಗಬಹುದು.
ಇಲ್ಲವೆ ಗುಣವಾಚಿ+ನಾಮಪದ=ನಾಮಪದವಾಗಬಹುದು.
ಉದಾ : ತಣ್ಣನೆ+ಕೊಳು=ತಂಗೊಳು
ಹೊಸ+ಕನ್ನಡ=ಹೊಸಗನ್ನಡ
ಹಿರಿ+ಹಾವು=ಹೆಬ್ಬಾವು
ಹಿರಿಯ+ಮನೆ=ಹಿರಿಮನೆ
ಕೆಂಪು+ಮಣ್ಣು=ಕೆಮ್ಮಣ್ಣು
ಕಿರು+ನಾಲಗೆ=ಕಿರುನಾಲಗೆ
ಎಳೆ+ಕರು=ಎಳಗರು
ಮೆಲ್ಲಿತು+ನುಡಿ=ಮೆಲ್ನುಡಿ
ಬಿರು+ಗಾಳಿ=ಬಿರುಗಾಳಿ

6.10.2.2 ಕರ್ಮಪದ+ಕೃದಂತ=ಕೃದಂತವಾಗಬಹುದು.
ಉದಾ : ಬಳೆಯಂ+ತೊಟ್ಟ=ಬಳೆದೊಟ್ಟ
ಕೈಯನ್ನು+ಹಿಡಿದ=ಕೈವಿಡಿದ
ಮನವನು+ಸೆಳೆದ=ಮನಸೆಳೆದ

6.10.2.3 ಕೃದಂತ+ನಾಮಪದ=ನಾಮಪದವಾಗಬಹುದು.
ಉದಾ : ಸಿಡಿಯುವ+ಮದ್ದು=ಸಿಡಿಮದ್ದು
ಕಡೆಯುವ+ಕೋಲು=ಕಡೆಗೋಲು
ಹರಿಯುವ+ನದಿ=ಹರಿವನದಿ

6.10.2 4 ಸಂಖ್ಯಾವಾಚಕ+ನಾಮ=ನಾಮಪದವಾಗಬಹುದು.
ಐದು+ಮೂಲಿ=ಐಮೂಲಿ
ಉದಾ : ಷಟ್+ಕೋನ=ಷಟ್ಕೋನ
ಮೂರು+ಹುರಿ=ಮುಪ್ಪುರಿ

6.10.2.5. ಸಂಖ್ಯಾವಾಚಕ+ಸಂಖ್ಯಾವಾಚಕ=ಸಂಖ್ಯಾವಾಚಕ.

ಉದಾ : ಇರ್+ಪತ್ತು=ಇಪ್ಪತ್ತು
ಮೂರು+ಪತ್ತು=ಮೂವತ್ತು
ಇರ್+ಸಾಸಿರ=ಇರ್ಚ್ಛಾಸಿರ

### 6.10.3 ಬಹಿಃಕೇಂದ್ರೀಯ ಸಮಾಸ :

ಬಹಿಃಕೇಂದ್ರೀಯ ಸಮಾಸದಲ್ಲಿ ಪೂರ್ವಪದ ಹಾಗೂ ಉತ್ತರಪದಗಳಲ್ಲಿ ಯಾವುದರಲ್ಲೂ ಅರ್ಥವು ಕೇಂದ್ರೀಕೃತವಾಗಿರುವುದಿಲ್ಲ. ಕೇಶಿರಾಜ ಹೇಳುವ ಬಹುವ್ರೀಹಿ ಸಮಾಸವೇ ಇದಾಗಿದೆ, 'ಪದನೆರಡು ಪಲವುಂ ಮೇಣ್ ಪರ ಪದಾರ್ಥಮಂ ಬಯಸುತಿರೆ' ಎಂದು ಅವನು ಹೇಳಿದುದನ್ನೇ ಬಹಿಃಕೇಂದ್ರೀಯಕ್ಕೆ ಹೇಳಬಹುದು.

ಉದಾ : ಹಣೆ+ಕಣ್ಣು=ಹಣೆಗಣ್ಣು (ಶಿವ)
ನೀಲ+ಕಂಠ=ನೀಲಕಂಠ (ಶಿವ)
ಚತುರ್+ಮುಖ (ಉಳ್ಳವ)=ಚತುರ್ಮುಖ (ಬ್ರಹ್ಮ)

### 6.10.೫ ಕೇಶಿರಾಜನ ಸಮಾಸ ವಿಚಾರಗಳು :

ಕಱುತಾಯಬಟಿಯನುಱಿಯದ
ತೆಱದಿಂದಂ ನಾಮಪದಮುದರ್ಥಾನುಗಮಾ
ಗೆಱಗೆ ಸಮಾಸಂ ನೆಗೞ್ಗುಂ
ನೆಱೆಪೋಕುಂ ಮಧ್ಯಗತವಿಭಕ್ತಿಗಳವಱೊಳ್ [ಸೂ.೧೭೩]

ಎಂದು ಸಮಾಸದ ವ್ಯಾಖ್ಯೆಯನ್ನು ಕೇಶಿರಾಜ ನೀಡಿದ್ದಾನೆ, ಇಲ್ಲಿ ಎರಡು ಅಂಶಗಳನ್ನು ಮುಖ್ಯವಾಗಿ ಅವನು ಸೂಚಿಸುತ್ತಾನೆ.

೧. ನಾಮ ಹಾಗೂ ಅರ್ಥ ಪರಸ್ಪರ ಅನ್ಯೋನ್ಯವಾಗಿವೆ. ಅವು ಅಗಲುವುದಿಲ್ಲ.
೨. ಸಮಾಸವಾಗುವಾಗ ಮಧ್ಯದ ವಿಭಕ್ತಿಪ್ರತ್ಯಯಗಳು ಲೋಪವಾಗುತ್ತವೆ.

ತತ್ಪುರುಷ, ಕರ್ಮಧಾರಯ, ದ್ವಿಗು, ದ್ವಂದ್ವ, ಬಹುವ್ರೀಹಿ, ಅವ್ಯಯೀಭಾವ, ಕ್ರಿಯಾ ಹಾಗೂ ಗಮಕ ಈ ಎಂಟು ಸಮಾಸಗಳನ್ನು ಅವನು ವಿವರಿಸಿದ್ದಾನೆ. (ಸೂ. ೧೭೫-೧೭೬).

ತತ್ಪುರುಷ, ಕರ್ಮಧಾರಯ, ದ್ವಿಗು, ಕ್ರಿಯಾ ಹಾಗೂ ಗಮಕಗಳನ್ನು ಉತ್ತರಪದಪ್ರಧಾನ ಸಮಾಸಗಳೆಂದೂ, ಅವ್ಯಯೀಭಾವ ಅಥವಾ ಅಂಶೀ ಸಮಾಸವನ್ನು ಪೂರ್ವಪದಪ್ರಧಾನ ಸಮಾಸಗಳೆಂದೂ, ದ್ವಂದ್ವ ಸಮಾಸವನ್ನು ಉಭಯಪದಪ್ರಧಾನ ಸಮಾಸವೆಂದೂ ಬಹುವ್ರೀಹಿಯನ್ನು ಅನ್ಯಪದಾರ್ಥ ಸೂಚಕ ಸಮಾಸವೆಂದೂ ಒಟ್ಟು ನಾಲ್ಕು ಬಗೆಯಲ್ಲಿ ವಿಂಗಡಿಸಬಹುದು.

6.10.*.1 ಕೇಶಿರಾಜನು ವಿವರಿಸಿರುವ ಎಲ್ಲಾ ಎಂಟು ಸಮಾಸಗಳನ್ನು ಕನ್ನಡಕ್ಕೆ ಹೇಳಬೇಕಾಗಿಲ್ಲ. ತತ್ಪುರುಷ, ಕರ್ಮಧಾರಯಗಳಲ್ಲಿ ಅಂತರವೇ ಇಲ್ಲವೆನಿಸುತ್ತದೆ. ತತ್ಪುರುಷವನ್ನು—ಉತ್ತರಪದಪ್ರಧಾನ ಎಂದಿಷ್ಟೇ ಸೂಚಿಸುತ್ತಾನೆ. ಅದೇ ತತ್ಪುರುಷ ಅನ್ಯೋನ್ಯ ಆಶ್ರಯವಾಗಿದ್ದರೆ ಕರ್ಮಧಾರಯವಾಗುತ್ತದೆ, ಅದುವೆ ಸಂಖ್ಯಾವಾಚಿಯನ್ನು ಪೂರ್ವಪದದಲ್ಲಿ ಪಡೆದಿದ್ದರೆ ದ್ವಿಗುವಾಗುತ್ತದೆ ಎನ್ನುತ್ತಾನೆ. (ಸೂ.೧೭೫) ಕನ್ನಡವಕ್ಕಿ ಇದನ್ನು ಕನ್ನಡದ+ಪಕ್ಕಿ ಎಂದರೆ ತತ್ಪುರುಷ. ಕನ್ನಡ+ಪಕ್ಕಿ ಎಂದರೆ ಕರ್ಮಧಾರಯ. ವ್ಯಕ್ತಿ ತನ್ನ ಮನಸ್ಸಿಗೆ ಬಂದಂತೆ ಇಂಥಲ್ಲಿ ವಿಗ್ರಹ ಮಾಡಬಹುದು. ಇದು ಸಮಂಜಸವಲ್ಲ. ಕೇವಲ ಸಂಖ್ಯಾವಾಚಿ ಇರುವುದರಿಂದ ದ್ವಿಗು ಎಂದು ಪ್ರತ್ಯೇಕವಾಗಿ ಸಮಾಸ ಮಾಡುವುದು ಸರಿಯೆನಿಸುವುದಿಲ್ಲ. ಅದನ್ನು ಕರ್ಮಧಾರಯದಲ್ಲಿ ಇಲ್ಲವೆ ತತ್ಪುರುಷದಲ್ಲಿ ಸೇರಿಸಿಬಿಡಬಹುದು. ಮಾಡುವಮಾಟ, ಆಡುವನುಡಿ, ಇರಿಯುವದನ, ಈದಆಕಳು, ಯಾವಹುಡುಗಿ, ಓಡಿದಕಳ್ಳ, ಹೆಂಡತಿಯುಬುಟ್ಟಿ, ತಿನ್ನುವಉಪ್ಪಿಟ್ಟು, ನಾಯಿಯಜಾತಿ ಇಂಥ ಅಸಂಖ್ಯಾತ ಶಬ್ದ ಜೋಡಣೆಗಳನ್ನೆಲ್ಲ ಗಮಕದಲ್ಲಿ ಸೇರಿಸಬೇಕಾಗುತ್ತದೆ. ಗಮಕದಲ್ಲಿ ಯಾವ ವಿಶೇಷತೆಯೂ ಇದ್ದಂತೆ ತೋರುವುದಿಲ್ಲ.[೧] ಅಂತೆಯೆ "ಕೇಶಿರಾಜನು ಗಮಕ ಸಮಾಸವನ್ನು ಹೆಸರಿಸಿ ಕನ್ನಡದ ಅಸಾಧಾರಣ ಲಕ್ಷಣ ಹೇಳುವ ಬದಲು ತನ್ನ ಅಶಾಸ್ತ್ರೀಯತೆಯನ್ನೆ ತೋರಿಸಿದಂತಾಗಿದೆ"[೨] ಎಂದು ವಿಲ್ಯಂ ಮಾಡ್ತ ಅವರು

೧. ಇದರಲ್ಲಿ ವೈಶಿಷ್ಟ್ಯಗಳಿವೆಯೆನ್ನುವವರೂ ಇದ್ದಾರೆ ನೋಡಿ–ಪ್ರಾಚೀನ ಕನ್ನಡ ವ್ಯಾಕರಣಗಳು (ಎಂ.ವಿ. ಸೀತಾರಾಮಯ್ಯ) ಪು.೧೭೪–೧೮೫.

೨. ಕನ್ನಡದಲ್ಲಿ ಸಮಾಸ- ಕರ್ನಾಟಕ ಭಾರತಿ ಸಂ. ೪ (೧೯೭೨; ಪು.೧೧೪-೧೩೬.

ಟೀಕಿಸಿದ್ದಾರೆ. ಅರ್ಥ, ವಿಗ್ರಹ ಮಾಡುವ ಬಗೆ ಹಾಗೂ ಪದಪ್ರಾಧಾನ್ಯ ಈ ಮೂರು ಅಂಶಗಳನ್ನು ಸಮಾಸ ನಿರ್ಧಾರದಲ್ಲಿ ಗಮನಿಸಬೇಕಾಗುತ್ತದೆ. ಆದ್ದರಿಂದ 'ತನಗತ್ವಂ ಪೆರಗಿತ್ವಂ'ಕ್ಕೆ ಮಹತ್ವವಿಲ್ಲ. 'ಪಸಿಯಬಣ್ಣ' ಇದರಲ್ಲಿ ಪಸಿ+ಬಣ್ಣ ಎಂಬುವಷ್ಟೇ ಇವೆ. ಇಂದಿಗೂ ಆಡುನುಡಿಯಲ್ಲಿ ಹಸೀಬಣ್ಣ ಎಂಬ ರೂಪವೇ ಬಳಕೆಯಲ್ಲಿದೆ. ಪಸಿಬಣ್ಣವನ್ನು ಗ್ರಂಥಸ್ಥದಲ್ಲಿ ಪಸಿಯ ಬಣ್ಣವೆಂದು ಷಷ್ಠೀ ಮಾಡಿ ಬಳಸಲಾಗುತ್ತದೆ. ಇಲ್ಲಿ ಸಮಾಸಮಾಡದೆ ಬಿಡಿಸಿ ಬರೆಯಲಾಗುತ್ತದಷ್ಟೆ.

ಸಂಖ್ಯೆಗಳಿಗೆ ಸಂಬಂಧಿಸಿದ ಸಮಾಸಗಳನ್ನು ದ್ವಿಗುವಿನಲ್ಲಿ ಸೇರಿಸಬಹುದಾಗಿದೆ. ನಾಗವರ್ಮ ಭಟ್ಟಾಕಳಂಕರು ಅವನ್ನೆಲ್ಲ ದ್ವಿಗುವಿನಲ್ಲೆ ಸೇರಿಸಿದ್ದಾರೆ. ಗಮಕದಲ್ಲಿ ಸೇರಿಸಿರುವ ಉದಾಹರಣೆಗಳು ತತ್ಪುರುಷದಲ್ಲಿಯೇ ಒಳಗೊಳ್ಳುತ್ತವೆಂದು ಕೇಶಿರಾಜನೇ ನಂಬಿದ್ದಾನೆ. ಅಂತೆಯೆ 'ಸಂಖ್ಯೆಯೊಳ್ ತತ್ಪುರುಷಕ್ಕೆ' ಎಂದು ಹೇಳಿಯೇ ಅವನು ಅಂಥ ಉದಾಹರಣೆ ನೀಡಿದ್ದಾನೆ.

ತೆಕ್ಕುಂಜ ಗೋಪಾಲಕೃಷ್ಣಭಟ್ಟರು ಗಮಕ ಸಮಾಸವೆಂಬ ಬೇರೊಂದು ಸಮಾಸ ವರ್ಗ ಅವಶ್ಯವೆಂದು ಪ್ರತಿವಾದಿಸಿದ್ದಾರೆ.೧ ಸಂಸ್ಕೃತದಲ್ಲಿ 'ಅಲುಕ್' ಎಂಬ ಸಮಾಸವಿದ್ದು ಅದು ಗಮಕವನ್ನು ಬಹಳಷ್ಟು ಹೋಲುತ್ತದೆ. ಏಕಾರ್ಥ ಭಾವದ ಅರ್ಥಾನುಗಮ್ಯತ್ವ ಗಮಕದ ಲಕ್ಷಣ. ಒಂದರಿಂದ ಇನ್ನೊಂದು ಪದಕ್ಕೆ ಅರ್ಥ ಗಮಿಸುತ್ತ ಸಾಗುವುದೇ ಇಲ್ಲಿ ಮುಖ್ಯ.ಸಂಧಿಕಾರ್ಯ ಇಲ್ಲಿ ಅಮುಖ್ಯ. ಪ್ರಾಯಃ ಕೇಶಿರಾಜ ಇದನ್ನು ಲಕ್ಷಿಸಿರುವಂತೆ ತೋರುತ್ತದೆ. ಡಾ. ಪಿ. ಕೃಷ್ಣಭಟ್ಟ ಅವರು ಗಮಕವನ್ನು ಕನ್ನಡಕ್ಕೆ ಒಪ್ಪಿಕೊಳ್ಳಬೇಕಾಗುತ್ತದೆ ಎಂದು ನಾಲ್ಕು ಕಾರಣಗಳಿಂದ ಸಮರ್ಥಿಸಿದ್ದಾರೆ.೨

6.10.3 ಅಚ್ಚಕನ್ನಡ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಸೇರಿಸಿ ಮಾಡುವ ಸಮಾಸವು ಕನ್ನಡಕ್ಕೆ ಸಹಜವಲ್ಲವೆಂದು ಅದು ಅರಿಸಮಾಸ ದೋಷವೆಂದು ಕೇಶಿರಾಜನು ಪರಿಗಣಿಸಿದ್ದಾನೆ. ಆದರೂ ಮಂಗಳಾರತಿ, ಪೂಮಾಲೆ, ಪಟಮಾನಿಸ, ಜೊನ್ನವಕ್ಕಿ, ಮುಂತಾದ ಸಮಾಸಗಳನ್ನು ಒಪ್ಪಿಕೊಂಡಿದ್ದಾನೆ. ಮಣಿಮಂಚ ಮುಂತಾದ ೨೧ ತತ್ಸಮಪದಗಳನ್ನು ಕನ್ನಡ ಸಮಾಸದಲ್ಲಿ ಬಳಸಬಹುದೆನ್ನುತ್ತಾನೆ. ಆದರೆ ಭಾಷೆ ತನ್ನ ಬೆಳವಣಿಗೆಗಾಗಿ ತನ್ನ ರಚನೆಯ ಚೌಕಟ್ಟಿನಲ್ಲಿ ಏನು ಬೇಕಾದರೂ ಸ್ವೀಕರಿಸುತ್ತದೆ ಎಂಬುದನ್ನು ಕನ್ನಡಭಾಷೆ ತೋರಿಸಿಕೊಟ್ಟಿದೆ. ಕೇಶಿರಾಜನು ಭಾಷಾಮಿಶ್ರಣವನ್ನು ಎಷ್ಟೇ ತಡೆಯಲು ಯತ್ನಿಸಿದರೂ ಅದು ನಿರಂತರವಾಗಿ ಮುಂದುವರಿಯಿತು. ಸಂಸ್ಕೃತವಲ್ಲದೆ ಅನೇಕ ಅನ್ಯಭಾಷಾ ಪದಗಳನ್ನು ಕೂಡಿಸಿ

೧. ಕನ್ನಡ ಸಮಾಸಗಳು (೧೯೭೦) ಪು. ೬೦.

೨. ಪಿ. ಕೃಷ್ಣಭಟ್ಟ- ಕನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತದ ಪ್ರಭಾವ (೧೯೮೯) ಪು. ೨೮೦

ಕೊಂಡೂ ಕನ್ನಡ ಪದಗಳು ಮುನ್ನಡೆದಿವೆ. ಕಡ್ಡಿಪೆನ್ನು, ರೈಲುಗಾಡಿ, ಬಸ್ ನಿಲ್ದಾಣ, ಇಂತಹ ಹಲವಾರು ಪದಗಳೇ ಇದಕ್ಕೆ ಸಾಕ್ಷಿಯಾಗಿವೆ.

ಕೇಶಿರಾಜನು ಸಮಾಸ ಪ್ರಕರಣದ ೩೪ ಸೂತ್ರದಲ್ಲಿ ಕೇವಲ ನಾಲ್ಕು ಸೂತ್ರಗಳಲ್ಲಿ ಎಲ್ಲಾ ಸಮಾಸಗಳನ್ನು ಹೇಳಿ ಉಳಿದ ೩೦ ಸೂತ್ರಗಳಲ್ಲಿ ಸಮಾಸ ಘಟಿಸುವಾಗ ಉಂಟಾಗುವ ಧ್ವನಿ ಬದಲಾವಣೆಗಳ ಬಗೆಗೆ ವಿವರಿಸಿದ್ದಾನೆ. ಸಮಾಸದಲ್ಲಿ ಆಗುವ ಧ್ವನಿ ಬದಲಾವಣೆಗಳನ್ನು ಮಹತ್ವದ ಅಂಶಗಳೆಂದು ಪರಿಗಣಿಸಲಾಗದು. ಅವನು ಅಸಾಧಾರಣ ಲಕ್ಷಣವೆಂದು ಹೇಳುವ ಗಮಕಕ್ಕೆ ಒಂದೇ ಸೂತ್ರ ಮೀಸಲಾಗಿಟ್ಟಿದ್ದಾನೆ.

## 6.11 ಸ್ವೀಕರಣ :

**6.11.0** ಕೇಶಿರಾಜನು ಸಂಸ್ಕೃತದಿಂದ ಕನ್ನಡಕ್ಕೆ ಬಂದ ಬಹಳಷ್ಟು ಶಬ್ದಗಳ ಪಟ್ಟಿಯನ್ನು ಕೆಲವು ಸಾಮಾನ್ಯ ನಿಯಮಗಳೊಡನೆ ಕೊಡುತ್ತಾ ಹೋಗಿದ್ದಾನೆ. ಆದರೆ ಅವುಗಳನ್ನು ಕನ್ನಡದ ಯಾವ ರಚನೆಯ ಕಾರಣಗಳಿಗಾಗಿ ಸ್ವೀಕರಿಸಲಾಗಿದೆ ಅಥವಾ ಅವುಗಳಲ್ಲಿ ಯಾವ ಬದಲಾವಣೆಗಳಾಗಿವೆಯೆಂಬ ವಿವರಗಳನ್ನು ನೀಡಿಲ್ಲದಿರುವುದರಿಂದ ಈ ಅಪಭ್ರಂಶ ಪ್ರಕರಣ ಅಷ್ಟಾಗಿ ಖಚಿತವೆನಿಸುವುದಿಲ್ಲ. ಕನ್ನಡದ ಅನೇಕ ಶಬ್ದಗಳು ಸಂಸ್ಕೃತದಿಂದ ಪ್ರಾಕೃತಕ್ಕೆ ಹೋಗಿ ಪ್ರಾಕೃತ ಮೂಲಕ ಕನ್ನಡಕ್ಕೆ ಬಂದಿವೆ. ಕೇಶಿರಾಜನು ಕೇವಲ ಸಂಸ್ಕೃತಕ್ಕೆ ಹೆಚ್ಚು ಮಹತ್ವವನ್ನು ನೀಡಿದ್ದರಿಂದ ಅವನು ಹೇಳಿರುವ ಅನೇಕ ಶಬ್ದಗಳನ್ನು ನಾವು ಮರು ಪರಿಶೀಲಿಸಿ ಪ್ರಾಕೃತ ಮೂಲಕ ಬಂದವುಗಳನ್ನು ಬೇರೆಯಾಗಿ ಪರಿಗಣಿಸಬೇಕಾಗುತ್ತದೆ. ಹಾಗೆ ಮಾಡಿದಾಗ ಮಾತ್ರ ಆ ಶಬ್ದಗಳ ಸರಿಯಾದ ಬೆಳವಣಿಗೆಯ ಹಂತಗಳನ್ನು ಗುರುತಿಸಿ ವಿವರಿಸಬಹುದಾಗಿದೆ. ಸಮಸಂಸ್ಕೃತ ಶಬ್ದಗಳು ಕನ್ನಡ ರಚನೆಗೆ ಸುಲಭವಾಗಿ ಹೊಂದಿಕೊಂಡುಬಿಡುವದರಿಂದ ಅವುಗಳಲ್ಲಿ ವಿಶೇಷ ವ್ಯತ್ಯಾಸ ಕಾಣದು. ದೇಶೀಯ ಪದಗಳಂತೂ ಶುದ್ಧ ಕನ್ನಡದವು. ಇವೆರಡರ ಬಗ್ಗೆ ನಾವು ವಿವರಿಸಬೇಕಾದ್ದಿಲ್ಲ. ಸಂಸ್ಕೃತದಿಂದ ನೇರವಾಗಿ ಹಾಗೂ ಪ್ರಾಕೃತ ಮೂಲಕ ಕನ್ನಡಕ್ಕೆ ಅಪಭ್ರಂಶವಾಗಿ ಬಂದವುಗಳನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸುವುದು ಅವಶ್ಯವಿದೆ. ಯಾಕೆಂದರೆ ಕನ್ನಡದ ಭಾಷಾ ರಚನೆಗೆ ಅನುಗುಣವಾಗಿ ಅವು ಹೇಗೆ ಬದಲಾವಣೆಗೊಳಗಾಗಿವೆ ಎಂಬುದು ಪರಿಶೀಲನಾರ್ಹ. ಸ್ವೀಕರಿಸುವ ಭಾಷೆಯೇ ಅನ್ಯಭಾಷಾ ಪದಗಳನ್ನು ತನ್ನ ರಚನೆಗನುಗುಣವಾಗಿ ಹೇಗೆ ಸ್ವೀಕರಿಸಬೇಕೆಂಬುದನ್ನು ನಿರ್ಧರಿಸುತ್ತದೆ.

ಆದರಲ್ಲೂ ಧ್ವನಿಮಾರಚನೆ ಇಲ್ಲಿ ಬಹು ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿರುತ್ತದೆ. ಕೇಶಿರಾಜ ಹಾಗೂ ಇನ್ನಿತರ ಕನ್ನಡ ವೈಯಾಕರಣಿಗಳು ಹೇಳಿರುವ ತದ್ಭವ, ಅನ್ಯದೇಶಿಯ ಎಂದಿಷ್ಟೇ ತೆಗೆದುಕೊಂಡರೆ ಸರಿಯಾದ ಕಾರಣ ನೀಡುವುದು ದುಸ್ತರವೆನಿಸುತ್ತದೆ. ಅಂತೆಯೇ ಕುಳ್ಳಿಯವರು ಸ್ವೀಕೃತ ಶಬ್ದಗಳನ್ನು—

೧. ಸಂಸ್ಕೃತ ಸಮ (unchanged)
೨. ಸಂಸ್ಕೃತ ಭವ (changed)
೩. ಪ್ರಾಕೃತ ಸಮ
೪. ಪ್ರಾಕೃತ ಭವ

ಎಂದು ನಾಲ್ಕುಗೆಯಾಗಿ ವಿಂಗಡಿಸಿದ್ದಾರೆ.[೧]

6.11.1 ಪ್ರಾಕೃತ ಮೂಲಕ ಬಂದ ಕೆಲವು ಸಂಸ್ಕೃತ ಶಬ್ದಗಳು

| **ಸಂಸ್ಕೃತ** | **ಪ್ರಾಕೃತ** | **ಕನ್ನಡ** |
|---|---|---|
| ಆರ್ಯ | ಅಜ್ಜ | ಅಜ್ಜ |
| ಕಾರ್ಯ | ಕಜ್ಜ | ಕಜ್ಜ |
| ನಿಭ | ನೆಪ | ನೆಪ |
| ವಕ್ರ | ವಂಕ | ವಂಕ |

ಇಲ್ಲಿ ಪ್ರಾಕೃತ ಕನ್ನಡಗಳಲ್ಲಿ ಬದಲಾವಣೆ ಇಲ್ಲ.

6.11.1.1 ಕನ್ನಡ ರಚನೆಗೆ ಅನುಗುಣವಾಗಿ ಬದಲಾವಣೆ ಹೊಂದಿರುವಂಥವುಗಳು

| **ಸಂಸ್ಕೃತ** | **ಪ್ರಾಕೃತ** | **ಕನ್ನಡ** |
|---|---|---|
| ಸ್ಥಾನ | ಠಾಣ | ತಾಣ |
| ಕೂರ್ಪಾಸ | ಕುಪ್ಪಿಸೊ | ಕುಪ್ಪಸ (ಕುಬುಸ) |
| ಸ್ಥೂಲ | ಥೋರೋ | ತೋರ (ತೋಲ) |
| ದಂಷ್ಟ್ರ | ದಾಢಾ | ದಾಡೆ |
| ಪೃಥ್ವಿ | ಪೊಢಮಿ | ಪೊಡವಿ |

೧. Kulli J.S.–Kesiraja's Sabdamanidarpana (1976) P·238.

| | | |
|---|---|---|
| ವಿದ್ಯಾ | ವೆಜ್ಜೆ | ಬೆಜ್ಜ |
| ಶಿಥಿಲ | ಸಡಿಲೊ | ಸಡಿಲ |
| ಶೆಯ್ಯಾ | ಸೆಜ್ಜಾ | ಸೆಜ್ಜೆ |

...............ಮಂ ಶಾದವು

ಕನ್ನಡ ಭಾಷಾರಚನೆಗೆ ಅನುಗುಣವಾಗಿ ಬದಲಾವಣೆಯ ಕಾರಣಗಳನ್ನು ಹೇಳಬಹುದು.

6.11.1.1.1 ಕನ್ನಡದಲ್ಲಿ ಋ, ೠ ಸ್ವರಗಳಿಲ್ಲ. ಅವು ರ್ ಎಂದಾಗುತ್ತವೆ. ಇಲ್ಲವೆ ಲೋಪವಾಗುತ್ತವೆ.

ಋಷಿ > ರಿಸಿ ಋಣ > ರಿಣ

ಮೃಗ > ಮಿಗ ಶೃಂಗಾರ > ಸಿಂಗಾರ

6..111.1.2 ಕನ್ನಡದಲ್ಲಿ ಸಂಧ್ಯಕ್ಷರಗಳು ಇಲ್ಲ, ಆದ್ದರಿಂದ ಐ > ಎ, ಏ. ಔ > ಒ, ಓ ಬದಲಾವಣೆ ಅಲ್ಲಿ ನಡೆಯುತ್ತದೆ.—

ವೈಶಾಖ > ಬೇಸಿಗೆ ಸೌರಾಷ್ಟ್ರ > ಸೊರಟ

ಕೌಪೀನ > ಕೋವಣ.

6.11.1.1-3 ಶಬ್ದಾಂತದಲ್ಲಿ 'ಒ' ಕನ್ನಡದಲ್ಲಿಲ್ಲ. ಸಂಸ್ಕೃತದಿಂದ ಅಂಥ ಯಾವ ಪದವೂ ಸ್ವೀಕೃತವಾಗಿಲ್ಲ. ಇಂಗ್ಲೀಷಿನಿಂದ ಸ್ವೀಕರಿಸಿದ ಶಬ್ದ–ರೇಡಿಯೋ > ರೇಡವೆ (ಕನ್ನಡದ ಸಂಬೋಧನೆ,ಆಜ್ಞಾರ್ಥ,ಉದ್ಗಾರವಾಚಕಗಳಲ್ಲಿಮಾತ್ರ ಶಬ್ದಾಂತ್ಯ ದಲ್ಲಿ ಒ/ಓ ಬರುತ್ತವೆ.)

6.11.1.1.4 ಕನ್ನಡದಲ್ಲಿ ದೀರ್ಘಸ್ವರ(ಏಕಾಕ್ಷರ ಶಬ್ದಗಳ ಹೊರತಾಗಿ ಶಬ್ದಾಂತ್ಯ ದಲ್ಲಿಲ್ಲ. ಆದ್ದರಿಂದ ಅವು ಹ್ರಸ್ವವಾಗುತ್ತವೆ. 'ಆ' ಕಾರಾಂತವಿದ್ದರೆ 'ಹ್ರಸ್ವ 'ಎ' ಕಾರಾಂತವಾಗಿ ಮಾರ್ಪಡುತ್ತವೆ.

ಬಾಲಾ > ಬಾಲೆ ಶಾಲಾ > ಶಾಲೆ

ಲಕ್ಷ್ಮೀ > ಲಕುಮಿ ಶ್ರೀ > ಸಿರಿ

6.11.1.1.5 ಪದಮಧ್ಯ ಅಕ್ಷರದ ದೀರ್ಘಸ್ವರವು ಹ್ರಸ್ವೀಕರಣಗೊಳ್ಳುವುದು ಕನ್ನಡದ ವಿಶೇಷ ಬಗೆ.

ಆಕಾಶ> ಆಗಸೆ    ವಿಲಾಸ> ವಿಳಸ

ಗೋಪಾಲ> ಗೋವಳ    ಪ್ರಯಾಣ> ಪಯಣ.

ಆದರೆ ಕೆಲವು ಶಬ್ದಗಳ ಉಚ್ಚಾರದಲ್ಲಿ ಧ್ವನಿ ಲಘುವಾಗಿದ್ದರೆ ಅದರಲ್ಲಿಯ ಸ್ವರ ದೀರ್ಘವಾಗುತ್ತದೆ. ಎಸಡಿ> ಏಡಿ

6.11.1.1.6 ಇ> ಎ, ಉ> ಒ ಪರಿವರ್ತನೆ ದಕ್ಷಿಣ ದ್ರಾವಿಡ ಭಾಷೆಗಳ ವೈಶಿಷ್ಟ್ಯ. ಕನ್ನಡವೂ ಅದಕ್ಕೆ ಹೊರತಾಗಿಲ್ಲ.

ದಿಶಾ> ದೆಸೆ    ಮುಖ> ಮೊಗ

ವಿನಾಯಕ> ಬೆನಕ    ಪುಸ್ತಕ> ಹೊತ್ತಗೆ

ನಿಯಮ> ನೇಮ    ಕುಂಡ> ಕೊಂಡ.

6.11.1.1.7 ಕನ್ನಡದಲ್ಲಿ ದೀರ್ಘಸ್ವರದ ನಂತರ ವ್ಯಂಜನದ್ವಿತ್ವ ಬರದು. ಆದ್ದರಿಂದ ಆ ವ್ಯಂಜನದ್ವಿತ್ವದ ಹಿಂದಿನ ಸ್ವರ ಹ್ರಸ್ವವಾಗುತ್ತದೆ ಇಲ್ಲವೆ ಆ ವ್ಯಂಜನದ್ವಿತ್ವ ಲೋಪವಾಗುತ್ತದೆ. ವಿಜಾತಿ ದ್ವಿತ್ವಗಳು ಸಜಾತಿ ದ್ವಿತ್ವಗಳಾಗುತ್ತವೆ.

ಚೂರ್ಣ> ಸುಣ್ಣ    ಕಾವ್ಯ> ಕಬ್ಬ

ಆರ್ಯ> ಅಜ್ಜ    ಗೋಷ್ಠಿ> ಗೊಟ್ಟಿ

6.11.1.1.8 ಶ್, ಷ್‌ಗಳು ಕನ್ನಡದಲ್ಲಿಲ್ಲ. ಅವು ಸ್ ಆಗುತ್ತವೆ.

ಶಶಿ> ಸಸಿ    ಶೂಲ> ಸೂಲ

ಶುಂಠಿ> ಸುಂಟಿ    ವೇಷ> ವೇಸ

6.11.1.1.9 ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ, ಅವು ಅಲ್ಪಪ್ರಾಣಗಳಾಗುತ್ತವೆ.

ದವಾಖಾನೆ> ದವಾಕಾನಿ    ಖಳ> ಕಳ

ಘಂಟಾ> ಗಂಟೆ    ಘಟಿಕ> ಗಡಿಗೆ

ಕಥಾ> ಕತೆ    ಫಲ> ಪಳ

6.11.1.1.10 ವ್ಯಂಜನಾಂತ ಶಬ್ದಗಳು ಕನ್ನಡದಲ್ಲಿ ಸ್ವರಾಂತವಾಗುತ್ತವೆ.(ವ್ಯಂಜನಾಂತ ಅನ್ಯದೇಶಿ ಪದಗಳಲ್ಲಿಯು ಅಂತ್ಯವ್ಯಂಜನ ಲೋಪವೂ ಆಗಬಹುದು).

ಅಪ್ಸರಸ್> ಅಪ್ಸರಸಿ    ಜಗತ್> ಜಗ/ಜಗತ್ತು

ಕಾರ್> ಕಾರು    ಬಸ್> ಬಸ್ಸು

6.11.1.1.11 ಶಬ್ದಾರಂಭದಲ್ಲಿ ವ್ಯಂಜನದ್ವಿತ್ವ ಬರುವುದಿಲ್ಲ. ಆದ್ದರಿಂದ ವ್ಯಂಜನದ್ವಿತ್ವವನ್ನು ಭೇದಿಸಲಾಗುತ್ತದೆ ಇಲ್ಲವೆ ಕೈ ಬಿಡಲಾಗುತ್ತದೆ.

ಉದಾ : ಶ್ರೀ> ಸಿರಿ (ಇ ಸೇರಿಸಲಾಗಿದೆ)
ಕ್ರಕಚ> ಕರಗಸ (ಅ ಸೇರಿಸಲಾಗಿದೆ)
ಸ್ಮಶಾನ> ಮಸಣ ಪ್ರಯಾಣ> ಪಯಣ
ಸ್ವರ್ಗ> ಸಗ್ಗ ಧ್ವನಿ> ದನಿ

6.11.1.1.12 ಶಬ್ದಮಧ್ಯದಲ್ಲಿ ಸಜಾತಿಯ ಇಲ್ಲವೆ ಅನುನಾಸಿಕದಿಂದೊಡಗೂಡಿದ ವ್ಯಂಜನಗಳು ಮಾತ್ರ ಬರುತ್ತವೆ.

ಕರ್ಪೂರ> ಕಪ್ಪುರ ಕಾವ್ಯ > ಕಬ್ಬ
ಪ್ರಜ್ವಲ> ಪಜ್ಜಳ ನಿಶ್ಚಿಂತ > ನಿಚ್ಚಿಂತ
ನಿಘಂಟು> ನಿಗಂಟು ಯತ್ನ > ಜತನ
ಭಕ್ತ> ಬಕುತ ವರ್ಷ > ಬರಿಸ

6.11.1.1.13 ಕನ್ನಡದಲ್ಲಿ ವ್ > ಬ್, ಬ್ > ವ್, ಮ್> ವ್, ಪ್ > ಹ್ ವ್ಯಂಜನ ಬದಲಾವಣೆಗಳು ಕಂಡುಬರುತ್ತವೆ.

ವಸತಿ > ಬಸದಿ ಶವ > ಶಬ
ಕಪಿಲೆ > ಕವಿಲೆ ಪ್ರಾಣ > ಹರಣ
ಪಿಷ್ಟ > ಹಿಟ್ಟು ಗ್ರಾಮ > ಗಾವ

6.11.1.1.14 ಪ್ರಾಕೃತ ಪ್ರಭಾವದಿಂದ ಯ್, > ಜ್ ಬದಲಾವಣೆಯಾಗಿದೆ.

ಯವೆ > ಜವೆ ಯಶ > ಜಸ
ಯೋಗಿ > ಜೋಗಿ ಯಾತ್ರಾ > ಜಾತ್ರೆ
ವಿದ್ಯೆ> ಬಿಜ್ಜೆ ಉದ್ಯೋಗ > ಉಜ್ಜುಗ

6.11.1.1.15 ಎರಡು ಸ್ವರಗಳ ಮಧ್ಯದ ಅಘೋಷ ವ್ಯಂಜನವು ಘೋಷವಾಗುವುದು ಕೆಲ ದ್ರಾವಿಡ ಭಾಷೆಗಳ ವೈಶಿಷ್ಟ್ಯ. ಕನ್ನಡವು ಅದರಲ್ಲೊಂದು.

ಜಟಾ > ಜಡೆ ಶುನಕ > ಸೊಣಗ
ಮುಖ > ಮೊಗ

**6.11.1.1.16** ಚ್ > ಸ್, ಸ್ > ಚ್ ಬದಲಾವಣೆ ದ್ರಾವಿಡ ಭಾಷೆಗಳಲ್ಲಿ ಸಾಮಾನ್ಯ. ಕನ್ನಡವು ಅದಕ್ಕೆ ಹೊರತಿಲ್ಲ.

ಚೂರ್ಣ > ಸುಣ್ಣ ಶಷ್ಕುಲಿ > ಚಕ್ಕುಲಿ
ಹಂಸ > ಅಂಚೆ

**6.11.1.1.17** ಕನ್ನಡದಲ್ಲಿ 'ಪ್' ಕಾರ ಹ್ ಕಾರವಾಗಿದೆ. ಕೆಲವು ಸಂಸ್ಕೃತ ಶಬ್ದಗಳಲ್ಲಿರುವ ಶಬ್ದಾದಿಯ 'ಹ್' ಕಾರವನ್ನು ಲೋಪಗೊಳಿಸಿಕೊಂಡಿರುವುದೂ ವೈಶಿಷ್ಟ್ಯವಾಗಿದೆ.

ಪಕ್ಷಿ > ಹಕ್ಕಿ ಪ್ರಣತಿ > ಹಣತೆ
ಪತಿವ್ರತೆ > ಹದಿಬದೆ
ಹಿಂಗು > ಇಂಗು ಹಂಸ > ಅಂಚೆ

**6.11.1.1.18** ವ್ಯಂಜನಗಳು ಸಮರೂಪಧಾರಣೆಗೊಂಡು (ವಿಜಾತಿ ವ್ಯಂಜನ ದ್ವಿತ್ವಗಳು) ಸಜಾತಿ ದ್ವಿತ್ವವಾಗುತ್ತವೆ.

ಪೂಗ್ > ಪುಗ್ಗಿ ಶರ್ಕರಾ > ಸಕ್ಕರೆ
ಕಸ್ತೂರಿ > ಕತ್ತುರಿ ವಿಸ್ತಾರ > ಬಿತ್ತರ
ವೇತ್ರ > ಬೆತ್ತ ನಿದ್ರಾ > ನಿದ್ದೆ
ಅಗ್ನಿ > ಅಗ್ಗಿ

ಕೇಶಿರಾಜನು ಹೇಳಿರುವ ಕೆಲವು ತದ್ಭವಗಳಿಗೆ ಕಾರಣ ನೀಡಲು ಬರದು. ಅವು ನೇರವಾಗಿ ಸಂಸ್ಕೃತದಿಂದ ಪಡೆದುವೋ ಅಥವಾ ಸಂಸ್ಕೃತಕ್ಕೆ ದ್ರಾವಿಡದಿಂದಲೇ ಹೋದುವೋ, ಹೋದರೆ ಯಾವ ಹಂತಗಳಲ್ಲಿ ಬದಲಾವಣೆಗಳಾದವು ಎಂಬುದನ್ನು ವಿವರಿಸಿದರೆ ಮಾತ್ರ ಅವುಗಳ ಬೆಳವಣಿಗೆಯನ್ನು ಗುರುತಿಸಬಹುದು.

**6.11.2 ಭಾಷಿಕ ಬದಲಾವಣೆ–ತಂತ್ರಗಳು :**

**6.11.2.0** ಒಂದು ಅಥವಾ ಹಲವು ಭಾಷೆಗಳಲ್ಲಿಯ ಪದಗಳ ಚರಿತ್ರೆಯನ್ನು ಪರಿಶೀಲಿಸುವಾಗ ಭಾಷಿಕ ಬದಲಾವಣೆಗೆ ಕಾರಣವಾಗುವ ಮುಖ್ಯ ಹಾಗೂ ಗೌಣ ತಂತ್ರಗಳನ್ನೆಲ್ಲ ಆಧುನಿಕರು ಗಮನಿಸುತ್ತಾರೆ. ಧ್ವನಿ, ಧ್ವನಿಮಾ, ಆಕೃತಿಮಾ ವಾಕ್ಯ ರಚನೆ ಹಾಗೂ ಅರ್ಥ ಈ ಎಲ್ಲ ವಿಭಾಗಗಳ ವಿವಿಧ ಹಂತಗಳಲ್ಲಿ ನಡೆಯುವ ಭಾಷಿಕ

ಬದಲಾವಣೆ ವೈವಿಧ್ಯಪೂರ್ಣವಾಗಿರುತ್ತದೆ. ಭಾಷಾವ್ಯತ್ಯಾಸ ಭಾಷೆಯ ಜೀವಂತಿಕೆಯ ಒಂದು ಲಕ್ಷಣ.ಸೌಲಭ್ಯಾಕಾಂಕ್ಷೆ, ಅನ್ಯಭಾಷಾ ಸಂಸರ್ಗ,ಶಿಕ್ಷಣ, ಪತ್ರಿಕೆಗಳು, ವ್ಯಕ್ತಿಗಳು, ತಪ್ಪುತಿಳಿವಳಿಕೆ, ಸಂಸ್ಕೃತಿ, ಪ್ರಾದೇಶಿಕತೆ, ಪ್ರತಿಷ್ಠೆ, ಸಾದೃಶ್ಯಸೃಷ್ಟಿ, ಮುಂತಾದ ಹಲವು ಅಂಶಗಳು ಭಾಷಿಕ ಬದಲಾವಣೆಗಳಿಗೆ ಕಾರಣವಾಗುತ್ತವೆ.

6.11.2.1 ಭಾಷಿಕ ಬದಲಾವಣೆಯ ಪ್ರಮುಖ ತಂತ್ರಗಳಲ್ಲಿ ಮೂರು ಮುಖ್ಯವಾಗಿವೆ.—

೧. ಧ್ವನಿ ಬದಲಾವಣೆ ೨. ಸ್ವೀಕರಣ ೩. ಸಾದೃಶ್ಯಸೃಷ್ಟಿ. ಗೌಣತಂತ್ರಗಳಲ್ಲಿ ಬಳಕೆಗೊಳ್ಳುವ ಮುಖ್ಯ ತಂತ್ರಗಳೆಂದರೆ.—

೧. ಶಬ್ದ ಸಾಹಚರ್ಯ [Contaminati n] ೨. ಅಧಿವಿಶ್ಲೇಷಣೆ [Metanalysis] ೩. ಸಾದೃಶ್ಯಾಕ್ಷರ ಲೋಪ [Hapl logy] ೪. ವರ್ಣ ಪಲ್ಲಟ [Matathesi ] ೫. ಸಮರೂಪಧಾರಣೆ [Assimilation] ೬. ಮಿತವ್ಯಯಾಸಕ್ತಿ ೭. ತಾಲವ್ಯೀಕರಣ [Pa atalization] ೮. ಹ್ರಸ್ವೀಕರಣ ೯. ದ್ವಿರುಕ್ತಿ ೧೦. ಧ್ವನಿಕ್ಷಯ ೧೧. ದೀರ್ಘೀಕರಣ ೧೨. ವರ್ಣ ವ್ಯತ್ಯಯ. ಇವೇ ಮೊದಲಾದವುಗಳಿವೆ. ಈ ಮೇಲೆ ಸೂಚಿಸಿರುವ ಎಲ್ಲ ಬದಲಾವಣೆಗಳಿಗೆ ಉದಾಹರಣೆಗಳನ್ನು ಇಲ್ಲಿ ನೀಡಿದೆ—

೧. ಧ್ವನಿ ಬದಲಾವಣೆ

ಪ್ > ಹ್→ಪುಲಿ ಹುಲಿ, ಪತ್ತು > ಹತ್ತು

ಅಯ್ > ಎ→ಮಲೈ > ಮಲೆ, ತಾಮರೈ > ತಾವರೆ

೨. ಸ್ವೀಕರಣದ ವಿವರಗಳನ್ನು 6.11.3 ರಲ್ಲಿ ನೋಡಿರಿ.

೩. ಸಾದೃಶ್ಯ→'ಇಸು' ಪ್ರತ್ಯಯವನ್ನು ನಾಮಗಳಿಗೆ ಅನ್ವಯಿಸಿ ಪ್ರೇರಣಾರ್ಥಕ ಕ್ರಿಯಾರೂಪಗಳನ್ನು (ಕ್ರಿಯಾಧಾತುಗಳಿಗೆ ಅನ್ವಯಿಸುವ ಸಾದೃಶ್ಯದ ಮೂಲಕ) ರಚಿಸಲಾಗಿದೆ-ಓಡಿಸು, ತಿನಿಸು, ಸಾಧಿಸು ಇವುಗಳಂತೆ-ಸಂಪರ್ಕಿಸು, ಕತ್ತರಿಸು ಇತ್ಯಾದಿ.

೪. ಶಬ್ದಸಾಹಚರ್ಯ→ಹೆಚ್ಚು ಬಳಕೆಯಲ್ಲಿರುವ ಉಚ್ಚಾರದಲ್ಲಿಯ ಧ್ವನಿಗಳು ಪರೋಕ್ಷವಾಗಿ ಪ್ರಭಾವ ಬೀರಿ ಮೂಲ ಉಚ್ಚಾರವನ್ನು ಕೆಲವು ಸಲ ಅರ್ಥವನ್ನು

ಬದಲಾಯಿಸಬಹುದು—ಅಗುರುಬೆಚ್ಚಗೆ > ಉಗುರುಬೆಚ್ಚಗೆ. ನಿಲ್ > ನಿಂತು ಇದರ ಪ್ರಭಾವದಿಂದ ಕೂಡು > ಕುಂತು ಆಗಿದೆ.

೫. ಅರ್ಥವಿಶ್ಲೇಷಣೆ- ಕಲ್ಪನೆಯ ಮೂಲಕ, ಸಾದೃಶ್ಯ ಹಾಗೂ ಹೆಚ್ಚು ಬಳಕೆಯಲ್ಲಿರುವ ಶಬ್ದಗಳನ್ನು ಬಳಸಿ ಹೊಸ ಶಬ್ದಗಳನ್ನು ಸೃಷ್ಟಿಸುವುದೇ ಅರ್ಥವಿಶ್ಲೇಷಣೆ ಉದಾ : ಪಂಡಿತನಿಗೆ— ಪುರುಷಸರಸ್ವತಿ,

ದಳ್ಳಾಳಿಗೆ—ಮೂಲಕ ಮಹಾಶಯ.

೬. ಸಾದೃಶ್ಯಾಕ್ಷರಲೋಪ→ವೀರರಾಜಪೇಟೆ> ವಿರಾಜಪೇಟೆ
ಬಸವಣ್ಣನವರು> ಬಸಣ್ಣಾರು

೭. ವರ್ಣಪಲ್ಲಟ→ಅಪ್ಪನ್> ಅಹನ್> ಹಾನ
ಅಪ್ಪುದು > ಅಹುದು> ಹೌದು.

೮. ಸಮರೂಪಧಾರಣೆ→ಕಱ್ತಿ> ಕತ್ತಿ, ಪೊಳ್ತು> ಪೊತ್ತು,
ಹರಿ+ಕ> ಹರಕ, ಗರ್ದೆ> ಗದ್ದೆ

೯. ಮಿತವ್ಯಯಾಸಕ್ತಿ→ಕನ್ನಡಿಹರಳು> ಕಂಡ್ಯಾಳ.
ಹೋಗುತ್ತಿಯಾ> ಹೊಯ್ತಿ. ಬರುತ್ತೇನೆ> ಬರ್‍ತಾ

೧೦. ತಾಲವ್ಯೀಕರಣ→ಚೇಳು> ತೇಳು, ಕೆಲ್ಸ> ಚೆಲ್ಸ, ಕೆದುರು> ಚೆದುರು.

೧೧. ಹ್ರಸ್ವೀಕರಣ→ಹಾನ> ಹನ, ಗೋಷ್ಠಿ> ಗೊಟ್ಟಿ

೧೨. ದ್ವಿರುಕ್ತಿ→ಹಸಿವದ್ದಿ, ಗೇಟಬಾಗ್ಲ, ಮೋಟರ ಗಾಡಿ

೧೩. ಧ್ವನಿಕ್ಷಯ→ಶ್ರೇಣಿ> ಏಣಿ, ಲಕ್ಷ್ಮಿ> ಲಚ್ಚಿ

೧೪. ದೀರ್ಘೀಕರಣ→ಮಯಣ> ಮೇಣ, ಚಮ್ಮಟಿಗೆ> ಚಾಟಿ

೧೫. ವರ್ಣವ್ಯತ್ಯಯ→ಕಾದಗ> ಕಾದಗ,ಫಳಾರ> ಫರಾಳ

ಇವಲ್ಲದೆ ಪ್ರಭಾವಿ ವ್ಯಕ್ತಿಗಳಿಂದ, ಪತ್ರಿಕೆಗಳಿಂದ, ಹೊಸ ಶಬ್ದಗಳು ಬಳಕೆಗೆ ಬರಬಹುದು. ಗಾಂಧೀಜಿಯವರಿಂದ ಸತ್ಯಾಗ್ರಹ, ಚಳುವಳಿ, ಹರಿಜನ ಮುಂತಾದವು ಬಳಕೆಗೆ ಬಂದವು. ಭಯೋತ್ಪಾದಕರು ಶೀತಲಯುದ್ಧ, ಕೈಗಾರಿಕೆ, ನಿಶ್ಯಸ್ತ್ರೀಕರಣ ಅಲಿಪ್ತರಾಷ್ಟ್ರ ಮುಂತಾದವು ಪತ್ರಿಕೆಗಳ ಮೂಲಕ ಪ್ರಸಿದ್ಧಿಗೆ ಬಂದವು. ಶಿಕ್ಷಣದಿಂದಾಗಿ ಅನ್ಯಭಾಷಾ ಪದಗಳು, ಧ್ವನಿಗಳು ಕನ್ನಡಕ್ಕೆ ಪ್ರವೇಶಿಸಿದವು.

**6.11.2.2** ಭಾಷಿಕ ಬದಲಾವಣೆಗಳನ್ನು ಮೂರು ಹಂತಗಳಲ್ಲಿ ಪರಿಗಣಿಸುತ್ತಾರೆ. ಮೊದಲನೆಯದಾಗಿ- ಧ್ವನಿ -ಧ್ವನಿಮಾ ಬದಲಾವಣೆಗಳು. ಇವನ್ನು ಕೇಂದ್ರ

ಬದಲಾವಣೆಗಳು (Central Kinds) ಎನ್ನುತ್ತಾರೆ. ಎರಡನೆಯದಾಗಿ ವ್ಯಾಕರಣ ಹಾಗೂ ಕೋಶ ಬದಲಾವಣೆಗಳು. ಇವನ್ನು ಬಾಹ್ಯ ಬದಲಾವಣೆಗಳು(Peripheral Kinds)ಎನ್ನುತ್ತಾರೆ. ಇವೆರಡೂ ಬದಲಾವಣೆಗಳ ಮಧ್ಯದ ಆಕೃತಿಧ್ವನಿಮಾ ಬದಲಾವಣೆಗಳನ್ನೂ ಪರಿಗಣಿಸುತ್ತಾರೆ. ಇದರಲ್ಲಿ ರಚನೆಗಳಿಗೆ ಆದ್ಯತೆ ಇರುತ್ತದೆ. ಸೂತ್ರ ರೂಪದಲ್ಲಿ ಇವೆಲ್ಲವನ್ನು ಹೀಗೆ ಸೂಚಿಸಬಹುದು.




ಇಲ್ಲಿ A ಹಾಗೂ B ಯಲ್ಲಿ ರೂಪಗಳಿಗೂ C ವಿಭಾಗದಲ್ಲಿ ಅರ್ಥಕ್ಕೂ ಹೆಚ್ಚಿನ ಪ್ರಾಧಾನ್ಯವಿರುತ್ತದೆ.

### 6.11.3 ಸ್ವೀಕರಣ :

ಸ್ವೀಕರಣ ಯಾವುದೇ ಬೆಳೆಯುವ ಭಾಷೆಗೆ ಅವಶ್ಯ. ಅನ್ಯ ಭಾಷಾಶಬ್ದಗಳ ಸ್ವೀಕರಿಸುವಿಕೆಯನ್ನು

೧. ಶಬ್ದ ಸ್ವೀಕರಣ (Loan words)
೨. ಭಾಷಾಂತರ ಸ್ವೀಕರಣ(Loan translation)
೩. ರೂಪಾಂತರ ಸ್ವೀಕರಣ (Adoptation)
೪. ಸ್ಥಾನಾಂತರ ಸ್ವೀಕರಣ (Loan shift)

೫. ಮಿಶ್ರ ಸ್ವೀಕರಣ (Loan blend)
೬. ಸಾಂಸ್ಕೃತಿಕ ಸ್ವೀಕರಣ [Cultural Borrowing]

ಎಂಬುದಾಗಿ ವರ್ಗೀಕರಿಸಿ ಐತಿಹಾಸಿಕ ವ್ಯಾಕರಣದಲ್ಲಿ ವಿವರಿಸಲಾಗುತ್ತದೆ.

6.11.3.1 **ಶಬ್ದ ಸ್ವೀಕರಣ :** ಬೇರೆ ಭಾಷೆಯಿಂದ ಯಥಾವತ್ತಾಗಿ ಇಲ್ಲವೆ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಶಬ್ದ ಸ್ವೀಕರಿಸಲ್ಪಡುವ ತಂತ್ರವೇ ಶಬ್ದ ಸ್ವೀಕರಣ ತಂತ್ರ. ಉದಾ-- ಪೆನ್ನು, ವಾಚು, ಟಾವೆಲ್ಲು, ಲೈಟು, ಇತ್ಯಾದಿ ಇಂಗ್ಲಿಷ್ ದಿಂದ ಸ್ವೀಕರಿಸಲ್ಪಟ್ಟಿವೆ ಧರ್ಮ, ಪುಸ್ತಕ ಮುಂತಾದವು ಸಂಸ್ಕೃತದಿಂದ ಸ್ವೀಕರಿಸಲ್ಪಟ್ಟಿವೆ. ದವಾಖಾನೆ, ಖುಶಿ ಮುಂತಾದವು ಉರ್ದುವಿನಿಂದ ಬಂದಿವೆ.

6.11.3.2 **ಭಾಷಾಂತರ ಸ್ವೀಕರಣ :** ಸ್ವೀಕರಿಸುವ ಭಾಷೆ ತನ್ನಲ್ಲಿರುವ ಸಾಮಗ್ರಿಯನ್ನು ಬಳಸಿ ಮೂಲ ಶಬ್ದದ ಅರ್ಥ ಉಂಟಾಗುವಂತೆ ಭಾಷಾಂತರ ಮಾಡಿದರೆ ಅದನ್ನು ಭಾಷಾಂತರ ಸ್ವೀಕರಣ ಎನ್ನುತ್ತಾರೆ. ಉದಾ : ಕನ್ನಡದಲ್ಲಿ ಮೊದಲು ತಡಸಲು ಎಂಬ ಪದವಿತ್ತು. ಆದರೂ ಇಂಗ್ಲೀಷಿನ "Water falls" ದಿಂದಾಗಿ ಕನ್ನಡದಲ್ಲಿ "ಜಲಪಾತ" ಆಯಿತು. Necktie ಕೊರಳಪಟ್ಟಿ United Nations Organization ಸಂಯುಕ್ತ ರಾಷ್ಟ್ರಸಂಘ.

6.11.3.3 **ರೂಪಾಂತರ ಸ್ವೀಕರಣ :** ಸ್ವೀಕರಿಸಿದ ಶಬ್ದಗಳನ್ನು ತಮ್ಮ ಭಾಷೆಯ ರಚನೆಗೆ ತಕ್ಕಂತೆ ರೂಪಾಂತರಿಸಿಕೊಳ್ಳುವ ತಂತ್ರವೇ ರೂಪಾಂತರ ತಂತ್ರ.

| ಉದಾ : | **ಸಂಸ್ಕೃತ** | **ಕನ್ನಡ** | **ಸಂಸ್ಕೃತ** | **ಕನ್ನಡ** |
|---|---|---|---|---|
| | ಲಕ್ಷ್ಮೀ | ಲಕುಮಿ | ದಿಶಾ | ದೆಸೆ |
| | ಕಲಾ | ಕಲೆ | ಮಾಲಾ | ಮಾಲೆ |

ಕನ್ನಡದಲ್ಲಿ ದೀರ್ಘಸ್ವರ (ಏಕಾಕ್ಷರ ಸಬ್ದಗಳ ಹೊರತಾಗಿ) ಶಬ್ದಾಂತ್ಯದಲ್ಲಿಲ್ಲ. ಅವು ಹ್ರಸ್ವವಾಗುತ್ತವೆ. 'ಆ" ಕಾರ ಶಬ್ದಾಂತ್ಯದಲ್ಲಿದ್ದರೆ 'ಎ' ಕಾರವಾಗುತ್ತದೆ.

6.11.3.4 **ಸ್ಥಾನಾಂತರ ಸ್ವೀಕರಣ :** ಬೇರೆ ಭಾಷೆಯಿಂದ ಒಂದು ಹೊಸದಾದ ವಸ್ತು ಅಥವಾ ರೀತಿ (ರೂಢಿ) ನಮ್ಮ ಭಾಷೆಗೆ ಪರಿಚಯಿಸಲ್ಪಟ್ಟಾಗ ನಾವು ಆ ವಸ್ತುವನ್ನು ಅಥವಾ ರೀತಿಯನ್ನು ಸ್ವೀಕರಿಸಿದರೂ ಅದನ್ನು ನಮ್ಮ ಭಾಷೆಯಲ್ಲಿರುವ ಸಾಮಗ್ರಿಯಿಂದಲೇ ಸೂಚಿಸಬಹುದು. ಈ ಗೌಣ ತಂತ್ರವನ್ನು ಸ್ಥಾನಾಂತರ ಸ್ವೀಕರಣ ಎನ್ನುತ್ತಾರೆ.

ಉದಾ : ಇಂಗ್ಲಿಷಿನಿಂದ ನಾವು Aeroplane ಎಂಬ ವಸ್ತುವನ್ನು ನಮ್ಮ ಭಾಷೆಯಲ್ಲಿರುವ ಸಾಮಗ್ರಿಯಿಂದಲೇ 'ವಿಮಾನ' ಎಂದು ಸೂಚಿಸತೊಡಗಿದೆವು. ಅದೇ ರೀತಿ, Radio "ಆಕಾಶವಾಣಿ" Book-post ತೆರೆದಂಚೆ, Parliament ಲೋಕಸಭೆ, Borewell—ಕೊಳವೆಬಾವಿ ಇತ್ಯಾದಿ.

**6.11.3.5 ಮಿಶ್ರ ಸ್ವೀಕರಣ :** ಇಲ್ಲಿ ಶಬ್ದ ಸ್ವೀಕರಣ ಹಾಗೂ ಸ್ಥಾನಾಂತರ ಸ್ವೀಕರಣ ಎರಡೂ ತಂತ್ರಗಳನ್ನು ಅಳವಡಿಸಲಾಗುತ್ತದೆ. ಶಬ್ದದ ಕೆಲ ಅಂಶ ಮಾತ್ರ ನೇರವಾಗಿ ಸ್ವೀಕರಿಸಲ್ಪಟ್ಟು ಉಳಿದರ್ಧ ಅಂಶ ಅದಕ್ಕೆ ಸರಿಸಾಟಿಯಾದ ಸ್ವೀಕರಿಸಲ್ಪಟ್ಟ ಭಾಷೆಯ ಸ್ವಂತ ಸಾಮಗ್ರಿಯಿಂದ ಕೂಡಿರುತ್ತದೆ.

ಅಣುಬಾಂಬು (ಅಣು ನಮ್ಮ ಸಾಮಗ್ರಿ ಬಾಂಬು ಸ್ವೀಕರಣ)
ಜಲಜನಕಬಾಂಬು (ಜಲಜನಕ " " " )
ಗುಲಾಮತನ ("ಗುಲಾಮ" ಸ್ವೀಕರಣ "ತನ" ನಮ್ಮ ಸಾಮಗ್ರಿ )
ಅಲ್ಪತೆ (ಅಲ್ಪ " ತೆ " " )
ಸಾಬೂನು ಪುಡಿ(ಸಾಬೂನು " ಪುಡಿ " " )
ಲಾರಿ ನೀರು (ಲಾರಿ " ನೀರು " " )

**6.11.3.6 ಸಾಂಸ್ಕೃತಿಕ ಸ್ವೀಕರಣ :**

ಅನ್ಯ ಸಂಸ್ಕೃತಿಯ ಜನತೆಯ ಸಂಪರ್ಕ ಬಹಳ ಕಾಲದವರೆಗೆ ಯಾವುದೇ ಭಾಷಿಕ ಜನರಿಗೆ ಉಂಟಾದರೆ ಆ ಸಂಸ್ಕೃತಿ ಅಥವಾ ಸಂಸ್ಕೃತಿಗಳ ವಿಶಿಷ್ಟ ಪದಗಳು ಭಾಷಿಕ ಅಂಶಗಳು ಸಂಪರ್ಕ ಪಡೆದ ಭಾಷೆಯಲ್ಲಿ ಸೇರುವವು. ಇದನ್ನು ಸಾಂಸ್ಕೃತಿಕ ಸ್ವೀಕರಣವೆನ್ನಬಹುದು. ಪಾಶ್ಚಾತ್ಯ ಹಾಗೂ ಉರ್ದು, ಫಾರಸಿ ಸಾಂಸ್ಕೃತಿಕ ಪ್ರಭಾವ ಕನ್ನಡದ ಮೇಲಾಗಿದೆ. ಉದಾ : ಜಲಸಾ, ಪಾರ್ಟಿ, ಹುಂಡಾ, ಹನಿಮೂನ್, ಪ್ಯಾಂಟ, ಪೈಜಾಮ, ಮೆಹಂದಿ, ಓಢನಿ ಇಂಥ ಸಾಕಷ್ಟು ಸಾಂಸ್ಕೃತಿಕ ಪದಗಳು ಕನ್ನಡದಲ್ಲಿ ಸ್ವೀಕೃತವಾಗಿವೆ.

ಸ್ವೀಕರಣದಿಂದಾಗಿ ಭಾಷೆಯಲ್ಲಿ ಧ್ವನಿ, ಧ್ವನಿಮಾ ಬದಲಾವಣೆ, ವ್ಯಾಕರಣ ಬದಲಾವಣೆ ಹಾಗೂ ಅರ್ಥ ಬದಲಾವಣೆಗಳುಂಟಾಗುತ್ತವೆ.

ಧ್ವನಿ, ಧ್ವನಿಮಾ ಬದಲಾವಣೆ– ಕನ್ನಡದಲ್ಲಿ f,z ಮುಂತಾದ ಧ್ವನಿಗಳಿರಲಿಲ್ಲ. ಆದರೆ ನಾವು ಕಾಫಿ, ಫೀಜು, ಫಲಕ, ಬಝಾರ,ತಝುನ್ ಮುಂತಾದ ಶಬ್ದಗಳನ್ನು ಸ್ವೀಕರಿಸಿದಾಗ ಈ ಧ್ವನಿಗಳು ಕನ್ನಡ ಧ್ವನಿಮಾಪಟ್ಟಿಯಲ್ಲಿ . ಹೊಸದಾಗಿ ಸೇರಿಸಲ್ಪಟ್ಟವು. ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ. ಆದರೆ ಸಂಸ್ಕೃತದಿಂದ ಮಹಾ

ಸಂಬಂಧಿಸಿರುತ್ತವೆಂಬುದನ್ನು ವಿವರಿಸಲಾಗುತ್ತದೆ. ಸಂಪೂರ್ಣ ಅರ್ಥವನ್ನು ನಿರೂಪಿಸ ಯಾವುದೇ ಸ್ವತಂತ್ರ ರಚನೆ–ವಾಕ್ಯವೆನಿಸುತ್ತದೆ.

೧. ಬಾ ೨. ಬರಲಿ ? ೩. ಕವಿ ಕೇಶವನು ೪. ಇವಳು ಹುಡುಗಿ ೫. ಇವಳು ಬಲು ಚೆಲುವೆಯಾದ ಹುಡುಗಿ ಇದ್ದಾಳೆ. ಇವೆಲ್ಲವೂ ವಾಕ್ಯಗಳೇ. ಕ್ರಿಯಾಪದವು ವಾಕ್ಯದಲ್ಲಿ ವ್ಯಕ್ತರೂಪದಲ್ಲಿ ಇರಬಹುದು ಇಲ್ಲವೆ ಇರಲಿಕ್ಕಿಲ್ಲ. ವಾಕ್ಯಗಳು ಭಾಷೆಯನ್ನು ಹೇಗೆ ಬೇಕೋ ಹಾಗೆ ರಚನೆಯ ಚೌಕಟ್ಟಿನಲ್ಲಿ ನಾದಬಹುದು.

7.1 ವಾಕ್ಯಗಳನ್ನು ಪ್ರಮುಖ ಹಾಗೂ ಗೌಣ ಎಂದು ಎರಡು ಮುಖ್ಯ ಪ್ರಕಾರಗಳಲ್ಲಿ ವಿಂಗಡಿಸಿ, ಪ್ರಮುಖ ವಾಕ್ಯಗಳಲ್ಲಿ ಸಹಜ, ಸಮಸ್ತ, ಸಂಕೀರ್ಣ ಎಂಬ ಮೂರು ಪ್ರಕಾರಗಳನ್ನೂ, ಗೌಣ ವಾಕ್ಯಗಳಲ್ಲಿ—ಖಂಡ, ಅಖಂಡವೆಂದು ಮತ್ತೆ ವಿಂಗಡಿಸಬಹುದು.[೧] ಕರ್ತೃ, ಕ್ರಿಯಾಪದಗಳೆರಡನ್ನೂ ಒಳಗೊಂಡ ವಾಕ್ಯವೇ—ಪ್ರಮುಖ ವಾಕ್ಯ. ಅಂತೆಯೆ "ವಾಕ್ಯದಲ್ಲಿ ನಾಮಪದ ಹೆಣ್ಣು ; ಕ್ರಿಯಾಪದ ಗಂಡು ಇನ್ನಾರಿರಲಿ, ಇಲ್ಲದಿರಲಿ ಈ ಎರಡು–ದಾಂಪತ್ಯ ಮದುವೆ ಸಾಧಿಸಬಲ್ಲುದು" ಎಂದು ಒಂದೆಡೆ ತಿ. ಸೀತಾರಾಮಯ್ಯ ಹೇಳಿರುವುದು ಔಚಿತ್ಯಪೂರ್ಣವಾಗಿದೆ.[೨] ಒಂದೇ ಒಂದು ಕ್ರಿಯಾಪದವುಳ್ಳದ್ದು ಸಹಜವಾಕ್ಯವೂ, ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳುಳ್ಳದ್ದು ಸಮಸ್ತವಾಕ್ಯವೂ ಎನಿಸಿದರೆ, ಸಂಕೀರ್ಣ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳಿದ್ದು ಎಲ್ಲ ಕ್ರಿಯಾಪದಗಳೂ ಗೋಚರವಾಗಿದ್ದರೆ ಮಾತ್ರ ಸಂಕೀರ್ಣವಾಕ್ಯದ ಅರ್ಥವಾಗುತ್ತದೆ. ಗೌಣ ವಾಕ್ಯದಲ್ಲಿ ಕ್ರಿಯಾಪದ ಇಲ್ಲವೆ ಕರ್ತೃಪದ ಗೋಚರಿಸುವುದಿಲ್ಲ. ತೀವ್ರ ಭಾವನೆಗಳನ್ನು ಸಂಕ್ಷಿಪ್ತವಾಗಿ ಅಭಿವ್ಯಕ್ತಿಸುವಲ್ಲಿ ಖಂಡ ಇಲ್ಲವೆ ಅಖಂಡ, ಗೌಣವಾಕ್ಯಗಳು ಬಳಕೆಗೊಳ್ಳಬಹುದು.

ಉದಾ : ೧. ಪ್ರಮುಖ ವಾಕ್ಯ—ಅವಳು ಹೋಗುತ್ತಿದ್ದಾಳೆ.
ಅದು ಬಾಡಿದೆ. ನಾನು ಬರುತ್ತೇನೆ.
೨. ಗೌಣವಾಕ್ಯ—ಅರೆ ನೀನೆ?; ಹೊರದಬ್ಬು; ಒಳನೂಕು;
ಓ ದೇವರೆ.

೧. (ಅ) ಸಹಜವಾಕ್ಯ—ಅವರು ನಡೆಯುತ್ತಾರೆ.

---

೧ ಕನ್ನಡ ಮಧ್ಯಮ ವ್ಯಾಕರಣವನ್ನು ನೋಡಿ,

೨ ವ್ಯಾಕರಣಗಳು (ಸಂ.) ಸೀತಾರಾಮಯ್ಯ. (೧೯೭೭), ಪು. ೧೧೭.

(ಬ) ಸಮುಸ್ತವಾಕ್ಯ : ವಿಶ್ವನಾಥ ಹೋದನು ನಾವೂ ಕೂಡ.
(ಕ) ಸಂಕೀರ್ಣ : ನೀನು ಮನೆಯಲ್ಲಿದ್ದರೆ ತಾನೆ ಅವಳಿಗೆ ಸುಖಸಿಕ್ಕೀತು. ಗಂಡನು ಊಟ ಮಾಡದ ಹೊರತು ಹೆಂಡತಿ ನೀರೂ ಕೂಡ ಕುಡಿಯುವುದಿಲ್ಲ. ಅವರು ಬರುತ್ತಾರೋ ಇಲ್ಲವೋ ನಾನರಿಯೆ.

೨. (ಅ) ಖಂಡ : ಓ ರಾಜನೇ, ಬೇಗ ಓಡು.
(ಬ) ಅಖಂಡ (ಕರ್ತೃರಹಿತ) : ಹೋಗು, ಬಾ, ನಿಲ್ಲು, ತಡೆ.
(ಕ) ಇತರ : ಅವನಿಗಿಂತ ಹಿರಿಯನು. ದೊಡ್ಡದಕಿಂತ ಒಳ್ಳೆಯದು.

7.2 ಹೀಗೆ ಅನೇಕ ರೀತಿಯ ವಾಕ್ಯರಚನೆಯಿಂದ ಘಟನೆ(ಗಳು) ಇಲ್ಲವೆ ವಿಚಾರ (ಗಳು) ಅಭಿವ್ಯಕ್ತವಾಗಿ ಸಂಕೀರ್ಣಭಾಷಾವ್ಯಾಪಾರ ನಡೆಯುತ್ತದೆ. ವಾಕ್ಯಗಳಲ್ಲಿ ಅಳವಡುವ ಶಬ್ದಗಳ ಸ್ಥಾನವು ಆ ವಾಕ್ಯದ ಕೇಂದ್ರಾರ್ಥವನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದ ಶಬ್ದಗಳ ಕ್ರಮವೂ ವಾಕ್ಯದಲ್ಲಿ ಬಹು ಮಹತ್ವದ್ದಾಗಿದೆ. ಶಬ್ದಗಳ ಬದಲಾವಣೆಯಿಂದ ಬೇರೆ ಅರ್ಥಕೊಡುವ ವಾಕ್ಯಗಳೇ ನಿರ್ಮಾಣವಾಗಬಹುದು.

ಉದಾ : ಓಡುವ ಹುಡುಗ—ಹುಡುಗ ಓಡುವ
ಒಂದು ಗಂಡು ಎರಡು ಹೆಣ್ಣು ಬೇಕು—ಎರಡು ಗಂಡು ಒಂದು ಹೆಣ್ಣು ಬೇಕು. ಮೊನ್ನೆ ಬರುತ್ತೇನೆಂದು ಹೇಳಿದ್ದನು—ಬರುತ್ತೇನೆಂದು ಮೊನ್ನೆ ಹೇಳಿದ್ದನು.

ಕೆಲವು ಸಲ ಈ ರೀತಿ ಇಡೀ ವಾಕ್ಯದ ಅರ್ಥ ಬೇರಾಗದೆ ಇದ್ದರೂ ಕೇಂದ್ರಾರ್ಥದಲ್ಲಿ ವ್ಯತ್ಯಾಸವುಂಟಾಗಬಹುದು.

ಉದಾ : ೧) ಧಾರವಾಡದಲ್ಲಿ ಅವನಿಗೆ ಮಾವನವರು ಸಾವಿರ ರೂಪಾಯಿ ಕೊಟ್ಟರು
೨) ಮಾವನವರು ಅವನಿಗೆ ಧಾರವಾಡದಲ್ಲಿ ಸಾವಿರ ರೂಪಾಯಿ ಕೊಟ್ಟರು
೩) ಅವನಿಗೆ ಧಾರವಾಡದಲ್ಲಿ ಸಾವಿರ ರೂಪಾಯಿ ಕೊಟ್ಟವರು ಮಾವನವರು
೪) ಮಾವನವರು ಅವನಿಗೆ ಧಾರವಾಡದಲ್ಲಿ ಕೊಟ್ಟದ್ದು ಸಾವಿರ ರೂಪಾಯಿ
೫) ಅವನಿಗೆ ಮಾವನವರು ಸಾವಿರ ರೂಪಾಯಿ ಕೊಟ್ಟದ್ದು ಧಾರವಾಡದಲ್ಲಿ
೬) ಧಾರವಾಡದಲ್ಲಿ ಮಾವನವರು ಸಾವಿರ ರೂಪಾಯಿ ಕೊಟ್ಟದ್ದು ಅವನಿಗೆ.

7.3 ಒಂದು ಘಟನೆಯನ್ನೇ ಅಲ್ಪಸ್ವಲ್ಪ ವ್ಯತ್ಯಾಸದಿಂದ ಬೇರೆ ಬೇರೆ ಅರ್ಥ ಬರುವಂತೆ ವಾಕ್ಯ ರಚಿಸಬಹುದಾಗಿದೆ—

ಉದಾ : ರಾಣಿ ತನ್ನ ಸೇವಕರಿಗೆ ಒಂದು ಚಿನ್ನದ ಸರ ಕೊಟ್ಟಳು

7.4.1.1.2 ನಿಯೋಗಿಯುಕ್ತ–ಆಕರಯುಕ್ತ
(ಹಿಂಡು, ಹೆಕ್ಕು, ಅದ್ದು, ಹಾಕು ಇತ್ಯಾದಿ ಕ್ರಿಯಾಪದಗಳಿಂದೊಡಗೂಡಿದುವು)
ಉದಾ : ಆತನು ಎಳ್ಳಿನಿಂದ ಎಣ್ಣೆ ಹಿಂಡುತ್ತಿದ್ದಾನೆ.

7.4.1.1.3 ನಿಯೋಗಿಯುಕ್ತ—ಇತರ
(ಕಟ್ಟು, ಸೀಳು, ಹೇಳು, ಒಡೆ ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ನೆರೆಮನೆಯ ನಾಯಿ ಮಗುವಿನ ಕಾಲನ್ನು ಕಚ್ಚಿತು

7.4.1.1.4 ನಿಯೋಗಿವಿರಹಿತ-ಅನುಭೋಗಿಯುಕ್ತ
(ನಾಟು, ಎಟುಕು, ಸಲ್ಲು, ತೋರು ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ನರಿಗೆ ದ್ರಾಕ್ಷಿ ಹಣ್ಣು ಎಟುಕಿತು

7.4.1.1.5 ನಿಯೋಗಿವಿರಹಿತ—ಇತರ
(ಕುದಿ, ಬೇಯು, ನಗು, ಒಣಗು ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ಪುಟ್ಟ ಮಗು ನಗುತ್ತಿದೆ.

7.4.2 ಇಲ್ಲಿ '**ನಿಯೋಗಿ**' ಯಲ್ಲಿ ಕರ್ತೃ ಮಹತ್ವ ಪಡೆದಿರುತ್ತದೆ. ಕ್ರಿಯೆ ಮುಖ್ಯವಾಗಿ ಯಾವ ಕರ್ತೃವಿನಿಂದ ನಡೆಯುತ್ತದೆ ಅಥವಾ ನಡೆದಿದೆಯೆಂಬುದು ಇಲ್ಲಿ ಗಮನಾರ್ಹ ಅಂಶ.

ಉದಾ : **ಸಿದ್ಧಾರ್ಥನು** ಹೆಂಡತಿ ಮಕ್ಕಳನ್ನು ತೊರೆದನು
ಗುರುವಿನ ತಪ್ಪಿನಿಂದಾಗಿ **ಶಿಷ್ಯರು** ಪೇಚಾಡಿದರು
ಸಭೆಯ ವ್ಯವಸ್ಥಾಪಕರು **ಸ್ವಯಂಸೇವಕರ** ಮೂಲಕ ಗಲಭೆಯನ್ನು ತಡೆಯಲು ಶಕ್ತರಾದರು
**ರಂಗಾ**, ಬಿಲ್ಲಾನ ಕೈಯಿಂದ ಹುಡುಗರ ಕೊಲೆ ಮಾಡಿಸಿದನು.

ಈ ವಾಕ್ಯಗಳಲ್ಲಿ ದಪ್ಪಕ್ಷರದ ಶಬ್ದಗಳು ಕ್ರಿಯೆಗೆ ಮುಖ್ಯವಾಗಿ ಕಾರಣೀಭೂತಗಳಾದವುಗಳು.

7.4.3 **'ಅನುಭೋಗಿ'** ಎಂದರೆ ಅನುಭೋಗಿಸುವವ. ಯಾರು ಅನುಭೋಗಿಗಳಾಗಿರುತ್ತಾರೆಂಬುದನ್ನು ಸ್ಪಷ್ಟವಾಗಿ ಸೂಚಿಸುವ ವಾಕ್ಯಗಳನ್ನು ಅನುಭೋಗಿಯಲ್ಲಿ ಸೇರಿಸುತ್ತಾರೆ. ಅನುಭೋಗಿಯನ್ನು ಸೂಚಿಸುವ ಶಬ್ದವು ಸಾಮಾನ್ಯವಾಗಿ ಚತುರ್ಥಿ ವಿಭಕ್ತಿಯಲ್ಲಿರುತ್ತದೆ.

ಉದಾ : **ಪಂಕಜಳಿಗೆ** ಅವಳ ಪ್ರಿಯಕರನು ಹೂಮುಡಿಸುತ್ತಿದ್ದಾನೆ.
ತಾಯಿ **ಮಗುವಿಗೆ** ಹಾಲುಣಿಸುತ್ತಾಳೆ.
ತಂದೆಯ ಆಸ್ತಿ **ಮಗನಿಗೇ** ಬಂತು.

7.4.4 **'ಆಕರ'**ದಲ್ಲಿ ಯಾವುದೇ ಒಂದು ವಸ್ತುವಿನ ಉಪಯೋಗವಾಗುವಿಕೆಯನ್ನು ಪ್ರಸ್ತಾಪಿಸಲಾಗಿರುತ್ತದೆ. ಆ ವಸ್ತುವಿನ ಇರುವಿಕೆಯೇ ವಾಕ್ಯದಲ್ಲಿ ಮುಖ್ಯ ಕ್ರಿಯೆಯಾಗಿರುತ್ತದೆ.

ಉದಾ : ದೀಪಾವಳಿಗೆ ಒಮ್ಮೆ ಅಂಗಡಿಗೆ **ಬಣ್ಣ** ಹಚ್ಚುತ್ತಾರೆ.
ಹಳ್ಳಿಯಲ್ಲಿ ಹೇಡಿ (ಸೆಗಣಿ)**ಯನ್ನು** ನೆಲಕ್ಕೆ ಸಾರಿಸುತ್ತಾರೆ.
ಬೆಕ್ಕು ತನ್ನ **ಮೈಯನ್ನು** ನೆಕ್ಕುತ್ತ ಕುಳಿತಿದೆ.
ಪಾಟೀಲರ ಮನೆಯಲ್ಲಿ ದಿನಾಲೂ **ಟೆಲಿವಿಜನ್** ಹಚ್ಚಿರುತ್ತಾರೆ.

7.4.5 **'ವಿಷಯಸೂಚಕ'** ವಾಕ್ಯಗಳಲ್ಲಿ ಯಾವುದೇ ಒಂದು ಸಂಗತಿ ಇಲ್ಲವೆ ಪರಿಸ್ಥಿತಿಯ ಸೂಚನೆ ಇರುತ್ತದೆ. ಕ್ರಿಯೆಗಿಂತ ವಿಷಯ ವಿವರಣೆಗೆ ಇಂತಹ ವಾಕ್ಯಗಳಲ್ಲಿ ಹೆಚ್ಚು ಮಹತ್ವವಿರುತ್ತದೆ. ವಿಷಯದ ಸ್ವರೂಪವನ್ನು ಅವಲಂಬಿಸಿ ಶಂಕರ ಭಟ್ಟರು 'ವೈಷಯಿಕ' ವಾಕ್ಯಗಳನ್ನು ಆಕರವಾಚಿ, ಲಕ್ಷಣವಾಚಿ, ಸಂಬಂಧವಾಚಿ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ವ್ಯಕ್ತಿ, ವಸ್ತು, ಪ್ರಾಣಿ, ಇತ್ಯಾದಿಗಳ ಇರುವಿಕೆಯನ್ನು ಸೂಚಿಸುವಂತಹವು– ಆಕರವಾಚಿ, ಅವುಗಳ ಗುಣಧರ್ಮಗಳನ್ನು ತಿಳಿಸುವಂತಹವು— ಲಕ್ಷಣವಾಚಿ, ಅವುಗಳ ಸಂಬಂಧವನ್ನು ಸೂಚಿಸುವಂತಹವು—ಸಂಬಂಧವಾಚಿ ಎನಿಸುತ್ತವೆ.

ಉದಾ : ನನ್ನ ಪೆನ್ನು ನಿನ್ನ ಕಿಸೆಯಲ್ಲಿದೆ (ಆಕರವಾಚಿ)
ನನ್ನ ಹೆಂಡತಿ ಬಹಳ ಹಟವಾದಿ ಇದ್ದಾಳೆ (ಲಕ್ಷಣವಾಚಿ)
ಸರೋಜಿನಿ ಅವಳಿಗೆ ನಾದಿನಿಯಾಗುತ್ತಾಳೆ (ಸಂಬಂಧವಾಚಿ)




ಸಂಕೀರ್ಣ-ವಾಕ್ಯಗಳನ್ನು ಇನ್ನೊಂದು ಬಗೆಯಲ್ಲಿ ವಿವರಿಸಲಾಗುತ್ತದೆ. ಏಕೆಂದರೆ ಅಲ್ಲಿ ಒಂದು ಮುಖ್ಯ ವಾಕ್ಯವಿದ್ದು ಅದಕ್ಕೆ ಪೂರಕವಾದ ಅನೇಕ ವಾಕ್ಯಗಳು ಸೇರಿರಬಹುದು. ಆದ್ದರಿಂದ ಅಂತಹವುಗಳನ್ನು ವಿವರಿಸುವ ರೇಖಾಚಿತ್ರ ಬೇರೆ ಬಗೆಯಾಗುತ್ತದೆ.

ಉದಾ : ಅವಳು ಚೆಲುವೆಯಿದ್ದಾಳೆನ್ನುವುದು ನನಗೆ ಖಾತ್ರಿ ಇದೆ.






(ಮರ=ಪ್ರಕೃತಿ, ಮರದ್=ಪ್ರಾತಿಪದಿಕ, ದ್=ಪ್ರಾತಿಪದಿಕರಚಕ, ಹಣ್ಣು=ಪ್ರಕೃತಿ ф =ಪ್ರಥಮಾವಿಭಕ್ತಿಪ್ರತ್ಯಯ, ಇರ್=ಧಾತು/ಕ್ರಿಯಾಪ್ರಕೃತಿ ಉತ್ತ್=ವರ್ತಮಾನಕಾಲಪ್ರತ್ಯಯ, ಅವೆ=ಕ್ರಿಯಾಪದ

7,6 ಒಂದೇ ಬಗೆಯ ಪ್ರಸಾರವನ್ನುಳ್ಳ ಹಾಗೂ ಒಂದೇ ಬಗೆಯ ಭಾಷಿಕ ಕಾರ್ಯವನ್ನು ನಿರ್ವಹಿಸುವ ಅರ್ಥವತ್ತಾದ ಉಚ್ಚಾರದ ಘಟಕಗಳ ಸಮೂಹಕ್ಕೆ ರೂಪ ವರ್ಗ (Form Class) ಎನ್ನುತ್ತಾರೆ. ಉದಾ : ಮಾವಿನ ಕಾಯಿ, ಹಸಿರು ಕಾಯಿ, ದೊಡ್ಡದಾದ ಕಾಯಿ, ಈ ರಚನೆಗಳಲ್ಲಿ ಮಾವಿನ, ಹಸಿರು, ದೊಡ್ಡದಾದ ಮುಂತಾದವು ಕಾಯಿಗೆ ವಿಶೇಷಣಗಳಾಗಿವೆ. ಅವು ಒಂದು ನಾಮವಿಶೇಷಣ ವರ್ಗವಾದರೆ ಕಾಯಿ ನಾಮ ರೂಪವರ್ಗವಾಗುತ್ತದೆ. ಇಂಥ ರೂಪಗಳು ಭಾಷಾ ರಚನೆಯ ದೃಷ್ಟಿಯಿಂದ ವ್ಯವಸ್ಥಿತವಾಗಿ ಒಂದಕ್ಕೊಂದು ಹೊಂದಿಕೊಂಡ ಅಂಗ ಗಳಾಗಿರುತ್ತಿದ್ದರೆ ಅವುಗಳನ್ನು ಪರಸ್ಪರ ತಕ್ಷಣಾಂಗ(Immediate Constituent) ಎಂದು ಗುರುತಿಸಲಾಗುತ್ತದೆ. ಪದಪುಂಜಗಳಲ್ಲಿ ಇರುವ ನಿಕಟತಮ ರೂಪ ಗಳನ್ನು ವರ್ಗಗಳಲ್ಲಿ ವಿಭಜಿಸಿ ವಿವರಿಸುವಾಗ 'ಅಂಗಿ' (Constitute) ಯಾವದು ? 'ಅಂಗ' (Constituent) ಯಾವುದು ಎಂಬುದನ್ನೂ ತುಂಬ ಎಚ್ಚರಿಕೆಯಿಂದ ಗುರುತಿಸಿಕೊಳ್ಳಬೇಕಾಗುತ್ತದೆ. ಯಾಕಂದರೆ ಪದಪುಂಜಗಳಲ್ಲಿ 'ಅಂಗಿ' ಗಳಾಗದ ಮೂಲಾಂಗಗಳಿರಬಹುದು, 'ಅಂಗ'ಗಳಾಗಲಾರದ ಅಂಗಿಗಳಿರಬಹುದು. ಇಲ್ಲವೆ ಅಂಗಿಗಳೂ, ಅಂಗಗಳೂ ಆಗಬಹುದಾದ ರೂಪಗಳೂ ಇರಬಹುದು. ಉದಾ ಹರಣೆಗೆ : ಸುನೀತಳ ಕಣ್ಣು ಸುಂದರವಾಗಿವೆ. ಈ ವಾಕ್ಯದ ಪದಪುಂಜಗಳನ್ನು ಸುನೀತರ ಮತ್ತು ಕಣ್ಣು ಹೀಗೆ ವಿಭಜಿಸಿದರೆ **ಸುನೀತಳ ಕಣ್ಣು** ಎಂಬುದು 'ಅಂಗಿ' ಎನಿಸುತ್ತದೆ. 'ಸುನೀತಳ ಕಣ್ಣು' ಮತ್ತು 'ಸುಂದರವಾಗಿವೆ' ಈ ರೀತಿ ವಿಭಜಿಸಿದರೆ ಸುನೀತಳ ಕಣ್ಣು ಎಂಬುದು 'ಅಂಗ'ವಾಗುತ್ತದೆ. ಕಾರಣ— ವಿಶ್ಲೇಷಣೆಯನ್ನು ಅನುಸರಿಸಿ ಒಂದೇ ರೂಪ ಅಂಗವೂ ಅಂಗಿಯೂ ಆಗಬಲ್ಲುದು. ಇನ್ನೊಂದು ಉದಾಹರಣೆ-ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವುದು, ಇಲ್ಲಿ 'ಬಸವ ನೆಂದರೆ ಪಾಪ'–ಇದು ಪದಪುಂಜವಾಗಲಾರದು ಅದನ್ನು–'ಬಸವನೆಂದರೆ ಪಾಪ

ದೆಸೆಗೆಟ್ಟು ಎಂಬುದನ್ನು ಹೋಗುವುದು ಎಂಬ ಪದಪುಂಜದ ಅಂಗವನ್ನಾಗಿಸ ಬೇಕಾಗುತ್ತದೆ. ಯಾವ ಅಂಗಗಳಿಂದ ಒಂದು ಅಂಗಿ ನೇರವಾಗಿ ರಚಿತ ವಾಗುತ್ತದೆಯೋ, ಅಂಥವು ಸಾಮಾನ್ಯವಾಗಿ ನಿಕಟತಮವಾದ ಅಂಗಗಳಾಗಿರುತ್ತವೆ. ಅಂಥವುಗಳನ್ನು ತಕ್ಷಣಾಂಗಗಳು(Immediate Constituent·) ಎಂದು ಹೆಸರಿಸು ತ್ತಾರೆ. ಒಂದು ಉದಾಹರಣೆ ಗಮನಿಸಿರಿ– ಅವಳು ಒಂದು ಕೈಯ ಬಳೆಯನ್ನು ಒಡೆದಳು ಈ ವಾಕ್ಯದಲ್ಲಿ–ಒಂದು ಕೈಯ, ಒಂದು ಕೈಯ ಬಳೆ– ಇವುಗಳನ್ನು ಬೇರೆ ಬೇರೆಯಾಗಿ ವಿಭಜಿಸಿದರೆ ತಕ್ಷಣಾಂಗಗಳು ಬೇರೆ ಬೇರೆ ಆಗಿ ಅರ್ಥವ್ಯತ್ಯಾಸ ವಾಗುತ್ತದೆ. ಒಂದು ಕೈಯ ಎಂದರೆ ಕೈಗೆ ಮಹತ್ವ ಬಂದರೆ ಕೈಯ ಬಳೆ ಎಂದಾಗ ಕೈಯಲ್ಲಿ ಹಾಕುವ ಬಳೆ ಎಂಬುದಾಗಿ ಬಳೆಗೆ ಮಹತ್ವ ಬರುತ್ತದೆ. ಈ ವಾಕ್ಯ ದಲ್ಲಿರುವ IC ಗಳನ್ನು ರೇಖಾಚಿತ್ರದಲ್ಲಿ ಹೀಗೆ ತೋರಿಸಬಹುದು.




1. =ಅವಳು ಒಡೆದಳು
2.=ಬಳೆಯನ್ನು ಒಡೆದಳು
3. =ಕೈಯ ಬಳೆಯನ್ನು ಒಡೆದಳು
4. =ಒಂದು ಕೈಯ ಬಳೆಯನ್ನು ಒಡೆದಳು
5. =ಅವಳು ಒಂದು ಕೈಯ ಬಳೆಯನ್ನು ಒಡೆದಳು

ಈ ವಾಕ್ಯದಲ್ಲಿ 5 ಬಗೆಯ ವಾಕ್ಯರಚನೆಗಳು ಅಡಗಿವೆ. ಇಂಥ ಒಂದು ಮೂಲ ವಾಕ್ಯದ ವಿಶ್ಲೇಷಣೆಯನ್ನು ಅರಿತು ಕೊಂಡರೆ. ಇಂಥವೇ ಸಹಸ್ರಾರು ವಾಕ್ಯಗಳನ್ನೆಲ್ಲ

ಒಂದು ವರ್ಗದಲ್ಲಿ ವರ್ಗೀಕರಿಸಬಹುದು. ಇದಲ್ಲದೆ ಈ ಒಂದು ಮೂಲ ವಾಕ್ಯದಿಂದ ಇನ್ನೂ ಹಲವಾರು ಸಾಧಿತವಾಕ್ಯಗಳು ಸೃಷ್ಟಿಯಾಗಬಹುದು. ಉದಾ :

1. ಅವಳೇ ಒಂದು ಕೈಯ ಬಳೆ ಒಡೆದಳು;
2. ಅವಳು ಒಂದೇ ಕೈಯ ಬಳೆ ಒಡೆದಳು
3. ಅವಳು ಒಂದು ಕೈಯ ಬಳೆಯನ್ನೇ ಒಡೆದಳು.
4. ಅವಳು ಒಂದು ಕೈಯ ಬಳೆಯನ್ನು ಒಡೆದಳೇ ?

ಕೇವಲ ದೀರ್ಘವನ್ನು ಒಂದೊಂದು ಶಬ್ದಗಳಲ್ಲಿ ಸೇರಿಸುತ್ತ ಹೋದಂತೆ ಈ ರೀತಿಳ ವಾಕ್ಯಗಳು ಲಭಿಸಿದವು. ಇದೇ ರೀತಿ ಬೇರೆ ಅಂಶಗಳನ್ನು ಸೇರಿಸುತ್ತ ಹೋದರೂ ಮೂಲ ರಚನೆಗೆ ಭಂಗ ಬರದಂತೆ ಅಸಂಖ್ಯಾತ ವಾಕ್ಯಗಳನ್ನು ನಿರ್ಮಿಸಬಹುದು ಹಾಗೂ ಅವುಗಳನ್ನು ಸುಲಭವಾಗಿ ವಿವರಿಸಬಹುದು. ಆಧುನಿಕ ಭಾಷಾವಿಜ್ಞಾನ ಪದಪುಂಜ ನಿಯಮಗಳಿಂದ ಇಂಥ ಅಸಂಖ್ಯಾತ ವಾಕ್ಯಗಳನ್ನು ವಿವರಿಸಲು ಸಾಧ್ಯವಾಗಿರುವುದನ್ನು ತೋರಿಸುತ್ತದೆ.

ಕನ್ನಡ ವಾಕ್ಯಗಳಲ್ಲಿ ಎದ್ದು ಕಾಣುವ ಒಂದು ಅಂಶವೆಂದರೆ ಕರ್ತೃವಿಗೂ ಕ್ರಿಯಾಪದಕ್ಕೂ ಮಹತ್ವದ ಸಂಬಂಧವಿರುವುದು, ಅದರಲ್ಲಿಯೂ ಕರ್ತೃವಿಗೆ ವಿಶೇಷ ಪ್ರಾಧಾನ್ಯವಿರುವುದು. ಉದಾ –

| | | |
|---|---|---|
| ಅವನು | | ಕುಡಿಯುತ್ತಾನೆ |
| ಅವಳು | | ಕುಡಿಯುತ್ತಾಳೆ |
| ಅದು | | ಕುಡಿಯುತ್ತದೆ |
| ಅವರು | | ಕುಡಿಯುತ್ತಾರೆ |
| ನಾನು | → ನೀರು ← | ಕುಡಿಯುತ್ತೇನೆ |
| ನೀನು | | ಕುಡಿಯುತ್ತೀ |
| ನೀವು | | ಕುಡಿಯುತ್ತೀರಿ |
| ಅವು | | ಕುಡಿಯುತ್ತವೆ |

ಕರ್ತೃವಿದ ಲಿಂಗವಚನವನ್ನು ಅನುಸರಿಸಿ ಕ್ರಿಯಾರೂಪ ಬಂದಿರುವುದನ್ನಿಲ್ಲಿ ಗಮನಿಸಬೇಕು.

## 7.8 ವಾಕ್ಯ ರೂಪಾಂತರ

ಒಂದು ವಾಕ್ಯ ಮತ್ತೊಂದು ವಾಕ್ಯವಾಗಿ ರೂಪಾಂತರಗೊಳ್ಳಬಹುದು. ವಾಕ್ಯ ವಿಸ್ತರಣೆ, ವಾಕ್ಯಬದಲಾವಣೆ, ಮುಂತಾದವುಗಳನ್ನು ವಾಕ್ಯದಲ್ಲಿಯ ಪದಪುಂಜಗಳ ಬದಲಾವಣೆಗಳು ನಿರ್ವಹಿಸುತ್ತವೆ. ಒಂದೇ ವಾಕ್ಯದಲ್ಲಿ ನಡೆಯುವ ರೂಪಾಂತರ, ಏಕವಾಕ್ಯರೂಪಾಂತರ, ಉಳಿದವುಗಳು ಅನೇಕ ವಾಕ್ಯರೂಪಾಂತರವೆನಿಸುತ್ತವೆ.[೧]

ಉದಾ : ರೂಪಾಂತರಕ್ಕೆ : ಅವಳಿಗೆ ಒಡವೆ ಇದೆ.
ಈ ಮೂಲವಾಕ್ಯವನ್ನು : ಅವಳಿಗೆ ಒಡವೆ ಇದೆಯೇ ?
ಅವಳಿಗೆ ಒಡವೆ ಇಲ್ಲ
ಅವಳಿಗೆ ಒಡವೆ ಭಾರವಾಗಿದೆ.

ಹೀಗೆ ಅನೇಕ ಬಗೆಯಾಗಿ ರೂಪಾಂತರಿಸಬಹುದು, ಇಲ್ಲ; ಇದೆ; ಭಾರವಾಗಿದೆ. ಮುಂತಾದ ಕ್ರಿಯಾಪದಗಳಿಂದಾಗಿ ಈ ರೂಪಾಂತರಗಳು ಸಾಧ್ಯವಾಗಿವೆ. ಒಂದೇ ವಾಕ್ಯದಲ್ಲಿ ಈ ರೂಪಾಂತರ ನಡೆದಿವೆ. ಈ ರೂಪಾಂತರಗಳನ್ನು ರೇಖಾಚಿತ್ರದಲ್ಲಿ ವಿವರಿಸಬಹುದು.

ನಾಪು + ಕ್ರಿಪು = = > ನಾಪು + ಕ್ರಿಪು + ಪ್ರಶ್ನಾರ್ಥಕ ಪ್ರತ್ಯಯ

೧. | ಅವಳಿಗೆ ಒಡವೆ | + | ಇದೆ | = = > | ಅವಳಿಗೆ ಒಡವೆ | + | ಇದೆ | + | ಏ |

ನಾಪು + ಕ್ರಿಪು = = > ನಾಪು + ನಿಷೇಧ ಕ್ರಿ. ಪು.

೨. | ಅವಳಿಗೆ ಒಡವೆ | + | ಇದೆ | = = > | ಅವಳಿಗೆ ಒಡವೆ | + | ಇಲ್ಲ |

ಇದರಂತೆಯೇ ನಿಷೇಧ ಕ್ರಿಪು ಸ್ಥಾನದಲ್ಲಿ ಬೇರೆ ನಿಷೇಧ ಪದ ಬರಬಹುದು.

ಉದಾ : ಅವಳಿಗೆ ಒಡವೆ | ಬೇಡ |

---

೧ ನೋಡಿ–ವಿಲ್ಯಂ ಮಾಡ್ತ-ಕನ್ನಡ ಭಾಷೆಯ ರೂಪರೇಷೆಗಳು, ಪು ೮೫–೯೨(೧೯೭೫) ಹಾಗೂ ಕುಳ್ಳಿ ಜೆ. ಎಸ್.–ವರ್ಣನಾತ್ಮಕ ಭಾಷಾವಿಜ್ಞಾನ. ಪು. ೧೬೯–೨೮೦ (೧೯೭೫)

ಹೀಗೆ ಬೇರೆ ನಿಷೇಧಪದ ಬಂದರೂ ಅದು ಒಂದೇ ಬಗೆಯ ರೂಪಾಂತರ ನಿಯಮದಲ್ಲಳವಡುತ್ತದೆ.

ನಾಪು ಕ್ರಿ ಪು.

ನಾನು ಶಾಲೆಗೆ + ಹೋಗಲಿಲ್ಲ

+ ಹೋಗಲಾರೆ

ನೀನು ನೀರು + ಕುಡಿಯಲಿಲ್ಲ

+ ಕುಡಿಯಬೇಡ

+ ಕುಡಿಯಲಾರೆ

ಇಲ್ಲಿ 'ಇಲ್ಲ', 'ಆರ'/'ಆರೆ', 'ಬೇಡ' ಎಂಬ ನಿಷೇಧರೂಪಗಳು ಬಳಕೆಗೊಂಡು ರೂಪಾಂತರಕ್ಕೆ ಕಾರಣವಾಗಿವೆ.

ಒಂದು ವಾಕ್ಯ ರೂಪಾಂತರಗೊಂಡು ಅನೇಕ ವಾಕ್ಯಗಳಾಗಿ ಮಾರ್ಪಡಬಹುದು, ಇಲ್ಲವೆ ಅನೇಕ ವಾಕ್ಯಗಳು ಒಂದರಲ್ಲೇ ಅಳಪಟ್ಟಿರಬಹುದು.

ಉದಾ : ೧. ಇಲ್ಲಿ ಕುಡಿಯುವ ನೀರಿದೆ (ಮೂಲ ವಾಕ್ಯ)
ಇಲ್ಲಿ ಅಲ್ಲದೆ ಅಲ್ಲಿಯೂ ಕುಡಿಯುವ ನೀರಿದೆ (ರೂಪಾಂತರಿತ ವಾಕ್ಯ)

ರೂಪಾಂತರಿತ ವಾಕ್ಯದಲ್ಲಿ—

ಅ] ಇಲ್ಲಿ ಕುಡಿಯುವ ನೀರಿದೆ
ಬ] ಅಲ್ಲಿಯೂ ಕುಡಿಯುವ ನೀರಿದೆ

ಎಂಬ ಎರಡು ವಾಕ್ಯಗಳು ಸೇರಿವೆ.

೨. ಹಾಲು ತೆಳುವಾಗಿವೆ (ಮೂಲವಾಕ್ಯ)
ಹಾಲು ನೀರಿಗಿಂತ ತೆಳುವಾಗಿವೆ (ರೂಪಾಂತರಿತ ವಾಕ್ಯ)

ಇಲ್ಲಿ ನೀರು ತೆಳುವಾಗಿದೆ ಎಂಬ ಮತ್ತೊಂದು ವಾಕ್ಯವೂ ಸೇರಿದೆ.

೩. ಅವಳು ನನ್ನ ಹೆಂಡತಿಯ ತಂಗಿಯ ಮಗಳು

ಈ ವಾಕ್ಯದಲ್ಲಿ—೧. ಅವಳು ಮಗಳು ೨. ಅವಳು ನನ್ನ ಹೆಂಡತಿ ೩. ಅವಳು ಹೆಂಡತಿಯ ತಂಗಿ ೪. ಅವಳು ತಂಗಿಯ ಮಗಳು ಇಷ್ಟು ವಾಕ್ಯಗಳು ಸೇರಿವೆ.

7.*.0 ಕೇಶಿರಾಜನು ವಾಕ್ಯವಿಶ್ಲೇಷಣೆಗೆ ಹೆಚ್ಚಿನ ಗಮನವನ್ನು ನೀಡಿಲ್ಲ. ಅಲ್ಲಲ್ಲಿ ಅದಕ್ಕೆ ಸಂಬಂಧಿಸಿದ ವಿಚಾರಗಳು ಆನುಷಂಗಿಕವಾಗಿ ಬಂದಿವೆ. ಇಡೀ ಗ್ರಂಥದಲ್ಲಿ ೮-೧೧ ನುಡಿಗಳಲ್ಲಿ ಅಂಥವು ಅಲ್ಲಲ್ಲಿ ಸಿಗುತ್ತವೆ (ನೋಡಿ-ಸೂ. ೧೩೩, ೧೪೮ ರಿಂದ ೧೫೬) ಅವೂ ನೇರವಾಗಿ ವಾಕ್ಯಶಾಸ್ತ್ರ ದೃಷ್ಟಿಯಿಂದ ಹೇಳಿದವುಗಳಲ್ಲ.

————

# ಗ್ರಂಥಸೂಚಿ


**ಕಲಬುರ್ಗಿ ಎಂ. ಎಂ. ಹಾಗೂ**
**ಸಾಕನೂರ ಬಿ. ಟಿ.** —ಶಬ್ದಮಣಿದರ್ಪಣಸಂಗ್ರಹ [1975]

**ಕುಲಕರ್ಣಿ ಪ್ರ. ಗೋ.** —ಕನ್ನಡ ಭಾಷೆಯು ಚರಿತ್ರೆ [1975]

**ಕುಳ್ಳಿ ಜೆ. ಎಸ್.** —ವರ್ಣನಾತ್ಮಕ ಭಾಷಾವಿಜ್ಞಾನ [1973]
—ಐತಿಹಾಸಿಕ ಭಾಷಾವಿಜ್ಞಾನ [1973]

**ಕೆಂಪೆಗೌಡ ಕೆ. ಹಾಗೂ**
**ಆರ್ವಿಯಸ್ ಸುಂದರಂ**— ಭಾಷೆ ಮತ್ತು ಭಾಷಾವಿಜ್ಞಾನ [1978]
—ಧ್ವನಿವಿಜ್ಞಾನ [1979]
—ಧ್ವನಿಮಾವಿಜ್ಞಾನ [1980]

**ಕುಶಾಲಪ್ಪ ಗೌಡ. ಕೆ**–ಕನ್ನಡಭಾಷೆ ಮತ್ತು ವ್ಯಾಕರಣಗಳ ಒಂದುಅಧ್ಯಯನ [1936]

**ಕೃಷ್ಣಮಾಚಾರ್ಯ** —ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು [1882]

**ಕೃಷ್ಣರಾವ ಕೆ. ಎಮ್.**— ಕನ್ನಡ ಭಾಷಾ ಸ್ವರೂಪ [1968]

**ಗೋಪಾಲಕೃಷ್ಣ ಭಟ್ಟ, ತೆಕ್ಕುಂಜ**— ಕನ್ನಡ ಸಮಾಸಗಳು [1970]

**ಚಿದಾನಂದಮೂರ್ತಿ ಎಮ್.**–ಭಾಷಾವಿಜ್ಞಾನದ ಮೂಲತತ್ವಗಳು [1971]

**ದೊಡ್ಡಸ್ವಾಮಿ**–ಶಬ್ದಮಣಿದರ್ಪಣ ದಿಗ್ದರ್ಶನ

**ದೇವೀರಪ್ಪ ಎಚ್. (ಸಂ)**—ಕರ್ನಾಟಕ ಭಾಷಾಭೂಷಣ [1969]
–ಕಾವ್ಯಾವಲೋಕನ [1967]

**ಧಾರವಾಡಕರ ಆರ್. ವಾಯ್.**–ಕನ್ನಡ ಭಾಷಾಶಾಸ್ತ್ರ [1968]

**ನರಸಿಂಹಚಾರ್ಯ ಆರ್.**–ಎರಡನೆಯ ನಾಗವರ್ಮ ವಿರಚಿತ ಕರ್ನಾಟಕ ಭಾಷಾ ಭೂಷಣಂ [1975]

**ನರಸಿಂಹಚಾರ್ ಡಿ. ಎಲ್.**–ಶಬ್ದಮಣಿದರ್ಪಣಂ [1973]

**ನಾಗರಾಜಯ್ಯ ಹಂಪ**–ಭಾಷಾ ವಿಜ್ಞಾನ
–ದ್ರಾವಿಡ ಭಾಷಾವಿಜ್ಞಾನ

ಪದಕಿ ನಾರಾಯಣ–ಹೊಸ ಬಗೆಯಿಂದ ಬರೆದ ಕನ್ನಡ ಭಾಷಾಭ್ಯಾಸ [1949]

ಪದ್ಮನಾಭಶರ್ಮ ಡಿ.–ಕೇಶಿರಾಜಕೃತ ಶಬ್ದ ಮಣಿದರ್ಪಣ [1976]

ಪದ್ಮನಾಭಶರ್ಮ, ಭುವನಹಳ್ಳಿ ಡಿ–ಭಟ್ಟಾಕಲಂಕದೇವ ವಿರಚಿತ ಕರ್ನಾಟಕ ಶಬ್ದಾನುಶಾಸನಂ [1968]

ಪುಟ್ಟಪ್ಪ ಕೆ. ವಿ. [ಸಂ]–ಕನ್ನಡ ಕೈಪಿಡಿ [1969]

ಪೂಜಾರ ಮ. ಪ್ರ.–ಕನ್ನಡ ನುಡಿಗನ್ನಡಿ [1932]

ಬಿಳಿಗಿರಿ ಎಚ್. ಎಸ್.–ಆಲೋಕ (ಭಾಗ 1) [1969]

–ವರ್ಣನಾತ್ಮಕ ವ್ಯಾಕರಣ [1970]

ಮಳಗಿ ಎಸ್. ಆರ್.–ಶಬ್ದಮಣಿದರ್ಪಣ ಸಂಗ್ರಹಂ [1970]

ಮಾಡ್ತ ವಿಲ್ಯಂ–ಕನ್ನಡ ಭಾಷೆಯ ರೂಪರೇಷೆಗಳು [1970]

ರಂಗನಾಥ ಶರ್ಮ–ಹೊಸಗನ್ನಡ ವ್ಯಾಕರಣ [1977]

ರಾಮಸ್ವಾಮಿ ಚೆ.–ಕನ್ನಡ ಭಾಷಾನುಯೋಗ [1981]

ರಾಮಚಂದ್ರರಾವ್ ಬಿ.–ಕನ್ನಡ ಭಾಷೆ–ಹುಟ್ಟು ಬೆಳವಣಿಗೆ

–ಕನ್ನಡ ಭಾಷೆ–ಪ್ರಾದೇಶಿಕ ವೈವಿಧ್ಯ

ಶಂಕರಭಟ್ಟ ಡಿ. ಎನ್– ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ [1969]

–ಕನ್ನಡ ವಾಕ್ಯಗಳು ಆಂತರಿಕ ರಚನೆ ಮತ್ತು ಅರ್ಥ ವ್ಯವಸ್ಥೆ [1978]

–ಭಾಷೆಯ ಬಗ್ಗೆ ನೀವೇನು ಬಲ್ಲಿರಿ ?

ಶಾಮರಾಯ ತ. ಸು.–ವ್ಯಾಕರಣ ಸಾರ

ಶಾಮರಾವ ತ. ಸು. ಹಾಗೂ

ನಂಜೇಗೌಡ ಎಚ್.–ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ [1975]

ಶ್ರೀಕಂಠಯ್ಯ ತೀ. ನಂ–ಕನ್ನಡ ಮಧ್ಯಮ ವ್ಯಾಕರಣ (1972)

ಸವದತ್ತಿಮಠ ಸಂಗಮೇಶ–ದ್ರಾವಿಡ ಭಾಷಾವ್ಯಾಸಂಗ [1976]

–ದ್ರಾವಿಡ ಭಾಷೆಗಳು [1974]

–ಜನಪದ ಭಾಷಾಸಮೀಕ್ಷೆ [1985]

ಸಿದ್ಧಲಿಂಗಯ್ಯ ಎಚ್.–ಕನ್ನಡ ವ್ಯಾಕರಣ

ಸೀತಾರಾಮಯ್ಯ ವಿ. (ಸಂ.)- ವ್ಯಾಕರಣಗಳು (1977)
ಸೀತಾರಾಮಯ್ಯ ಎಂ. ವಿ.- ಪ್ರಾಚೀನ ಕನ್ನಡ ವ್ಯಾಕರಣಗಳು (1979)
ಹೊಳ್ಳ ಡಿ. ವಿ.- ಸಂಸ್ಕೃತ-ತದ್ಭವ ಶಬ್ದ ಕೋಶ (1956)
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು—ಕನ್ನಡ ವಿಶ್ವಕೋಶ ಸಂ. 2 (1970)

ANDRONOV M.—Kannada Language (1969)
BLOOMFIELD. L - Language (8th Ed.) (1962)
BRIGHT WILLIAM- An Outline of Colloquial Kannada (1958)
CALDWELL-Comparative Grammar of Dravidian or South Indian Family of languages (1961)
GOWDA K.K.- A Grammar of Kannada (1972)
-A Course in Modern Kannada (1983)
HALL R. A. Jr.-Introductory Linguistics (1964)
HEROLD SCHIFFMAN-A Reference Grammar of Spoken Kannada (1979)
HERALD SPENCER- A Kanarese Grammar (1950)
HOCKET C. F.-A Course in Modern Linguistics-(1958)
HIREMATH R. C.-The structure of Kannada (1961)
HIREMATH R. C. & KULLI J. S. (Ed)-Proceedings of the Third All India Conference of Dravidian Linguists (1976)
KULLI J. S.—Keshiraja's Shabdamani Darpana ; A Linguistic Analysis (1977)
NARASIMHACAR R. History of Kannada Language (1969)
NAYAK H. M.-Kannada Literary and Colloqnial (1967)
PIKE K. L. Phonemics (1947)
RAJPUROHIT B.B. Acoustic Characteristicsof Kannada(1982)
RAMANUJAN A. K.- Generative Grammar of Kannada(1962)
UPADHYAYA U.P.-Kannada Phonetic Reader (1972)
A Comparative study of four Kannada dialects (1976)

# ಲೇಖನ ಸೂಚಿ


**ಅನಂತರಾಮು ಕೆ.** – ಕನ್ನಡ ಭಾಷಾ ಸ್ವರೂಪ– ಕನ್ನಡ ಅಧ್ಯಯನ ಸಂಸ್ಥೆಯ
ಕನ್ನಡ ಸಾಹಿತ್ಯ ಚರಿತ್ರೆ ಸಂ. 2 ಪು. 434–457

**ಆಚಾರ್ಯ ಪಾ. ವೆಂ.**– ಭಾಷೆ, ಮಾನವ ಮತ್ತು ವಾನರ– ತುಷಾರ
ಮೇ 1979 ಪು. 65

**ಕಾರಂತ ಶಿವರಾಮು**- ಭಾಷೆಯ ಬೆಳವಣಿಗೆ (ಪಂಜೆ ಅವರ ನೆನಪಿಗಾಗಿ)
[1952], ಪು. 206–209

**ಕುಳ್ಳಿ ಜೆ. ಎಸ್.**– ಕನ್ನಡ ಭಾಷೆಯಲ್ಲಿ ಬಿಂದು–ಕ. ಭಾ. ಸಂ. 2 ಸಂ. 1
[1969]

**ಕೆಂಪೆಗೌಡ ಕೆ.**– ಕನ್ನಡ ಭಾಷಾವಿಜ್ಞಾನದ ಚರಿತ್ರೆ–ಪ್ರ. ಕ. 53 [1971]
ಪು. 99

**ಕೇಶವಭಟ್ಟ ಟಿ.**– ಕನ್ನಡದಲ್ಲಿ ಪ್ರಥಮಾ ವಿಭಕ್ತಿ–ದೇವಗಂಗೆ [1968]
ಪು. 41–45

–ನಾಮ ವಿಭಕ್ತಿಗಳು–ಸಂಶೋಧನ ರತ್ನಮಾಲಿಕೆ (1969)
ಪು. 38–75

**ಕೃಷ್ಣಭಟ್ಟ ಪಿ.**–ಕನ್ನಡ ವರ್ಣಮಾಲೆಯಲ್ಲಿ ಬಿಂದು–ಕರ್ನಾಟಕ ಭಾರತಿ
ಸಂ. 9, ಸಂ. 4 (1977) ಪು. 4–17.

- ಕನ್ನಡದಲ್ಲಿ ಸಂಬೋಧನೆ,– ಕರ್ನಾಟಕ ಭಾರತಿ, ಸಂ. 10
ಸಂ. 3 (1978) ಪು. 14–19

**ಕೃಷ್ಣಸ್ವಾಮಿ ಅಯ್ಯಂಗಾರ್ ವಿ.**– ಗಮಕ ಸಮಾಸ–ಕ. ಸಾ. ಪ. 52–1
(1977)

**ಕೃಷ್ಣ ಭಟ್ಟ ಸೇಡಿಯಾಪು**—ಪಂಚಮೀ ವಿಭಕ್ತಿ—ಪ್ರ. ಕ. 26–2 (1944)

**ಗೌಡ ಕೆ. ಕೆ**—ಲಿಂಗಪ್ಪೊಂಬತ್ತು ತೆರಂ ?—ಶ್ರೀಕಂಠತೀರ್ಥ (1956) ಪು. 570.

ಈ ಕಾಲದ (850 – 1150 A.D) ಭಾಷೆಯ ಸ್ವರೂಪ–
ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರ ವಿಶ್ವವಿದ್ಯಾಲಯ.
ಸಂ. 2.

–ಕನ್ನಡದಲ್ಲಿ ವರ್ತಮಾನ ಕ್ರಿಯೆ ಪ್ರಬುದ್ಧ ಕರ್ನಾಟಕ 50—2.

**ಜಾಗೀರದಾರ್ ಸೀತಾರಾಮು**-ಕನ್ನಡ ವರ್ಣಗಳು : ಒಂದು ವಿವೇಚನೆ

ನಾಗರಾಜಯ್ಯ ಹಂಪ–ಕನ್ನಡದಲ್ಲಿ ಭಾಷಾವಿಜ್ಞಾನದ ಬೆಳವಣಿಗೆ–ಚಿನ್ನದ ಬೆಳಸು [ಪು. 24–25].
–ಭಾಷೆಯ ಬೆಳವಣಿಗೆ : ಕೆಲವು ವಿಚಾರಗಳು–ದೇವಗಂಗೆ [1968] ಪು. 98–116

ನಾಯಕ ಹಾ.ಮಾ.–ಈಚೀನ ಕನ್ನಡ ವ್ಯಾಕರಣ–ಸಾಹಿತ್ಯ ಸಮೀಕ್ಷೆ ಪು. 137
–ಕನ್ನಡಭಾಷೆಯ ವಿವಿಧ ಮುಖಗಳು–ಸಂಚಯ [1969]

ಪಾಟೀಲ ಜಿ. ಎಂ. –ಕನ್ನಡ ವರ್ಣಮಾಲೆಯಲ್ಲಿ ಸೊನ್ನೆ–J. K. U. XII. [1968] ಪು. 219

ಬಿಳಿಗಿರಿ ಎಚ್.ಎಸ್.–ಮೂರು ಟಿಪ್ಪಣಿಗಳು ಮತ್ತು ಆರು ಅಡಿಟಿಪ್ಪಣಿಗಳು [ಶಬ್ದಮಣಿದರ್ಪಣಕ್ಕೆ ಸಂಬಂಧಿಸಿದಂತೆ]–ಸಾಕ್ಷಿ 10.

ಮರಿಯಪ್ಪಭಟ್ಟ ಎಂ.–ಕನ್ನಡದೊಳಗಣ ದೇಶ್ಯ ಅಂಶಗಳು, ಅವುಗಳ ಮಹತ್ವ.
–ಮಹಾಪ್ರಾಣಗಳು–ಪ್ರ.ಕ. 24–2 [1946]
–ಹಳಗನ್ನಡದಲ್ಲಿ ಲಿಂಗವ್ಯವಸ್ಥೆ–ಕನ್ನಡ ಸಂಸ್ಕೃತಿ, ಪು 313
–ಕನ್ನಡದಲ್ಲಿ ವ್ಯಾಕರಣವೂ ಭಾಷಾಶಾಸ್ತ್ರವೂ— ಕನ್ನಡ ಸಂಸ್ಕೃತಿ ಪು. 333

ಮಳ್ಗಿ ಎಸ್. ಆರ್. –ಕನ್ನಡದಲ್ಲಿ ತದ್ಭವೀಕರಣ–ಕ.ಸಾ ಪ. [1967]

ಮಾಡ್ತ ವಿಲ್ಯಂ–ಕನ್ನಡದಲ್ಲಿ ನಾಮಗುಣವಾಚಕ–ಕರ್ನಾಟಕ ಭಾರತಿ [1976]
–ಕನ್ನಡ ಧ್ವನಿಮಾಗಳು ಅಂದು, ಇಂದು– ಕರ್ನಾಟಕ ಭಾರತಿ ಸಂ. 4, ಸಂ. 2 [1970]
–ಕನ್ನಡದಲ್ಲಿ ಸಮಾಸ–ಕರ್ನಾಟಕ ಭಾರತಿ ಸಂ 4, ಸಂ. 4

ರಾಮಚಂದ್ರರಾವ್ ಬಿ.—ಕನ್ನಡದಲ್ಲಿ ಳ್/ಣ್ ಗಳ ವ್ಯತ್ಯಯ– ಪ್ರಬುದ್ಧ ಕರ್ನಾಟಕ 42–2 [1960]
—ವಾಕ್ಯ-ಪದ-ಪದಾಂಗ–ಪ್ರಬುದ್ಧ ಕರ್ನಾಟಕ 53 [1971] ಪು. 11–18

ರಾಮಚಂದ್ರರಾವ್ ವೈ—ಭಾಷಾಶಾಸ್ತ್ರ–ಹೊಸ ಬೆಳಕು [1960]

ರಾಮಸ್ವಾಮಿ ಟಿ.—ಕನ್ನಡ ಭಾಷೆಯ ಅಧ್ಯಯನ–ಕರ್ನಾಟಕ ಭಾರತಿ ಸಂ. 7 ಸಂ. 1-[1974]
—ಭಾಷಾವಿಜ್ಞಾನದ ಪ್ರಾಮುಖ್ಯತೆ–ಕರ್ನಾಟಕ ಭಾರತಿ ಸಂ. 7 ಸಂ. 2 [1974] 11-16.

-ಕನ್ನಡದಲ್ಲಿ ಸರ್ವನಾಮ ಪ್ರತ್ಯಯಗಳು-ಕರ್ನಾಟಕ ಭಾರತಿ ಸಂ. 7, ಸಂ. 4 [1975] ಪು. 88-106.

**ವೆಂಕಟೇಶಯ್ಯ ಎಂ.ಜಿ.**-ಕನ್ನಡ ಬಿಂದು ಫೋನಿಂ-ಕ. ನು. ಡಿಸೆಂಬರ 1968
-ಫೋನಿಂ ನಾಮರೂಪಗಳು-" ಜೂನ್ 1959
-ಫೋನೀಂ ನಾಮಾಕೃತಿ-ಕ. ಸಾ. ಪ. 53, 1-2
-ಶುದ್ಧಾಕ್ಷರ-ಕ. ನು. ಅಕ್ಟೋಬರ 1968.

**ಶಂಕರಭಟ್ಟ ಡಿ. ಎನ್.** -ಧ್ವನಿಪರಿವರ್ತನೆ ಮತ್ತು ವರ್ಣಪರಿವರ್ತನೆ
-ಕನ್ನಡ ಧಾತುಗಳ ವೈಶಿಷ್ಟ್ಯ-ಸಾಕ್ಷಿ, ಎಪ್ರಿಲ್ 1968
-ಕನ್ನಡ ವ್ಯಾಕರಣದಲ್ಲಿ ಸಂಸ್ಕೃತದ ಜೆವ್ವ-ಸುಧಾ 28-4-68

**ಶ್ರೀಧರ ಬಿ. ಎಚ್.**—ಶಬ್ದ-ಅರ್ಥ-ಪರಿವರ್ತನ-ಜೀವನ, ನವ್ಹಂಬರ 1958

**ಸುಂಕಾಪೂರ ಎಂ. ಎಸ್.** -ಕನ್ನಡದಲ್ಲಿ ಯೋಗವಾಹಗಳು- ಕ. ಭಾ. ಸಂ. 1 ಸಂ. 1 [1968]

**ಹಳೆಮನಿ ಲಿಂಗದೇವರು ಹಾಗೂ ಲೀಲಾವತಿ ಎಂ. ಎನ್.** -ಕನ್ನಡ ವ್ಯಾಕರಣ ವಿಚಾರ : ಒಂದು ವಿವೇಚನೆ-ಕ. ಭಾ. ಸಂ. 8, ಸಂ. 2

BILIGIRI H.S-Kannada Verb Two Models-I.L. Vol.78(1959)
-The nasal phoneme in Kannada- I.L. vol. 16.
- Kannada Verb-I.L. Vol-2

GOWDA K.K -Noun Classification in Kannada-- Dravidian Linguistics V.

HIREMATH R C.-Vowel phonemes in Kannada-J.K.U.1-2p.

MADTHA WILLIAM-Case system of Kannada-Dravidian case system [1976]
- Adjective in Kannada-Proceedings of the A. I. C. of Dr. Linguists [1976]

NADAKARNI M.V.-Nature of Adjective in Kannada-I.L. Vol. 32, No. 2 [1971]

SEETARAMAYYA-M.V. The case system of Kannada-Kannada Studies Vol. IV

SRIKANTHAYYA-Africates in Kannada-I.L. Vol. 14.

VARADARAJRAO G.-A Note on Gamaka Compound-Proceedings of the Third All India Conference of Dravidian Linguists [1976] P. 141-145

# ಪಾರಿಭಾಷಿಕ ಪದಸೂಚಿ

ಅಘೋಷ Voiceless
ಅವಧಾರಣೆ Accent
ಅಂಗ Constituent
ಅಂಗಿ Constitute
ಅಕ್ಷರ Syllable
ಅಂತಃಕೇಂದ್ರೀಯ Endocentric
ಅನುಘರ್ಷ Affricate
ಅನುನಾಸಿಕ Nasal
ಅವನತ Low
ಅವನತ ಮಧ್ಯ Lowermid
ಅವಿಭಾಜಕ Non-segmental
ಅಂತಾರಾಷ್ಟ್ರೀಯ ಧ್ವನ್ಯಾಲೇಖ International Phonetic Script
ಆಕೃತಿ Morph
ಆಕೃತಿ ನಿಯಂತ್ರಿತ Morphologically Conditioned
ಆಕೃತಿಮಾ Morpheme
ಆಘಾತ Stress
ಆಳ ರಚನೆ Deep Structure
ಉಚ್ಚಾರಣಾರೀತಿ Manner of articulation
ಉತ್ತಮ ಪುರುಷ First person
ಉಪಧ್ವನಿ Allophone
ಉಪ ಆಕೃತಿಮಾ Allomorph
ಉಭಯೋಷ್ಠ್ಯ Bilabial
ಕನಿಷ್ಠತಮ ಯುಗ್ಮ Minimal pair
ಕರಣ Insutrument
ಕಂಪಿತ Trill
ಕಾಕಲ್ಯಸ್ಪರ್ಶ Glottal stop
ಕ್ರಿಯಾಪುಂಜ Verb phrase
ಕೋಷ್ಟಕ Table
ಚಾಕ್ಷುಸ Visual
ತದ್ಧಿತ Derivational
ತಕ್ಷಣಾಂಗ Immediate Constituent
ತಾಡಿತ Flap
ತಾಲು palate
ತಿರುಳು ಧ್ವನಿಮಾ Common Core
ದಂತ್ಯ Dental
ಧ್ವನಿ Phone
ಧ್ವನಿಮಾ Phoneme
ಧ್ವನಿಮಾ ಮಾಲೆ Phonemic Inventory
ಧ್ವನ್ಯಂಗ Articulator
ನಡುಮಧ್ಯ Meanmid
ನಾದ ಶಿಖರ Peak of Sonlrity
ನಾಮ ಪುಂಜ Noun phrase
ನಾಸಿಕ Nasal
ನಿಷೇಧ Negative
ನ್ಯೂನ Participle
ಪದಪುಂಜ Phrase
ಪದೋತ್ತರ ರೂಪ Post position
ಪರಿವೇಷ್ಟಿತ (ಮೂರ್ಧನ್ಯ) Retroflex
ಪಶ್ಚ Back
ಪಾರ್ಶ್ವಿಕ Lateral
ಪೂರಕ ಪ್ರಸಾರ Complementary distribution
ಪ್ರಥಮ ಪುರುಷ Third person
ಪ್ರಾತಿಪದಿಕ ರಚಕ Stem formative
ಬದ್ಧ ಆಕೃತಿಮಾ Bound morpheme
ಬಹಿಃಕೇಂದ್ರೀಯ Exocentric
ಬಹಿ:ಸಂಧಿ External Saudhi
ಭೂತನ್ಯೂನ Past Paricipie
ಮಾನಸ್ವರ Cardinal vowel

ಗಲಕುಹರ Glottis
ಗುಂಫನ Cluster
ಘರ್ಷ Fricative
ಘೋಷ Voiced
ಯಾದೃಚ್ಛಿಕ Arbitrary
ರೂಪಾವಳಿ Paradgim
ರೂಪವರ್ಗ Formclass
ರೂಪಾಂತರ Transforma'ion
ವರ್ತ್ಸ್ಯ Alveolar
ವರ್ಣ ನಿಯಂತ್ರಿತ Phonologically Conditioned
ವಿರಾಮ Juncture
ವಿರೋಧ ಪ್ರಸಾರ Contrastive distributon
ವಿವೃತ್ತ Open
ವೈಕಲ್ಪಿಕ ಪ್ರಸಾರ Free distribution
ಶಿಷ್ಟ ಕನ್ನಡ Standard Kannada
ಶಿಖರ Peak
ಶ್ರುತಿ Pitch
ಮೂರ್ಧನ್ಯ Retraflex
ಮೂಲ್ಯಾಂಗ Ultimate constituent
ಮೇಲು ರಚನೆಯ ಮಟ್ಟ Surface Structure Level
ಸಮಗ್ರ ಧ್ವನಿಮಾ ವ್ಯವಸ್ಥೆ Over all pattern
ಸಂಕೇತ Symbol
ಸಂದಿಗ್ಧ ಯುಗ್ಮ Suspicious Palr
ಸಂಯುಕ್ತ ಧ್ವನಿಮಾ Unit phoneme
ಸವೃತ್ತ Rounded
ಸಹತ್ವ ವಿಭಕ್ತಿ Sociative Case
ಸೀಮಿತ ಧ್ವನಿಮಾ Marginal phoneem
ಸ್ಪರ್ಶ Stop
ಸ್ವಚ್ಛಂದ ಪರಿವರ್ತನೆ Free varlation
ಸ್ವತಂತ್ರ Free
ಸ್ವೀಕರಣ Borrowing

# ವಿಶಿಷ್ಟ ಪದಸೂಚಿ